# ಕೃತಜ್ಞತೆ

ಸುಮಾರು ಎರಡು ದಶಕಗಳ ಹಿಂದಿನ ಮಾತು. ಆಗ ಮಲೆನಾಡಿನ ಮಡಿಲಲ್ಲಿ ನೂತನವಾಗಿ ನಿರ್ಮಾಣಗೊಳ್ಳುತ್ತಿದ್ದ 'ಶರಾವತಿ ಜಲಾಶಯ'ದಲ್ಲಿ ಮಲೆನಾಡಿನ ನೂರಾರು ಹಳ್ಳಿಗಳು ಮುಳುಗಡೆಯಾಗುತ್ತವೆ ಎಂಬ ವದಂತಿ ಹಬ್ಬಿತ್ತು. ಶಿವಮೊಗ್ಗೆಯ ಸಹ್ಯಾದ್ರಿ ಕಾಲೇಜಿಗೆ ಅಧ್ಯಾಪಕನಾಗಿ ಆಗತಾನೆ ವರ್ಗವಾಗಿ ಹೋಗಿದ್ದ ನಾನು ಮಲೆನಾಡು ಪ್ರವಾಸ ಕೈಕೊಂಡೆ. ಶರಾವತಿ ಜಲಾಶಯದ ಮುಳುಗಡೆ ಭಾಗದವರು ಬೇರೆಡೆಗೆ ವಲಸೆ ಹೋಗುವಾಗ ಬಟ್ಟೆ-ಬಂಗಾರಗಳನ್ನು ಮಾತ್ರ ಕೊಂಡೊಯ್ದು ಅವರ ಮನೆಗಳಲ್ಲಿದ್ದ ಓಲೆ ಗ್ರಂಥಗಳನ್ನು ಬಿಟ್ಟು ಹೋಗುತ್ತಿದ್ದರು. ಕೆಲವು ಓಲೆ ಕಟ್ಟುಗಳನ್ನು ಗೋಣಿಚೀಲದಲ್ಲಿ ತುಂಬಿಕೊಂಡು ಬಸ್ಸಿನ ಮೇಲೆ ಹಾಕಿಕೊಂಡು ಶಿವಮೊಗ್ಗೆಗೆ ತಂದೆ. ಅಲ್ಲಿ ಸಿಕ್ಕುವ ಎಲ್ಲ ಓಲೆಗಳನ್ನೂ ತರುವ ಮನಸ್ಸಾಯಿತು. ಮತ್ತೊಮ್ಮೆ ಅದೇ ಪ್ರದೇಶಕ್ಕೆ ಹೋದೆ. ಆದರೆ ಅಷ್ಟು ಹೊತ್ತಿಗೆ ಆ ಭಾಗ ಸಂಪೂರ್ಣವಾಗಿ ಮುಳುಗಡೆಯಾಗಿತ್ತು; ಸಾವಿರಾರು ಕನ್ನಡ ಮತ್ತು ಸಂಸ್ಕೃತ ಓಲೆ ಗ್ರಂಥಗಳು ಜಲಸಮಾಧಿಯಾಗಿದ್ದುವು.

ನಾನು ತೆಗೆದು ತಂದಿದ್ದ ಹತ್ತಾರು ತಾಡವಾಲೆಗಳಲ್ಲಿ ಕೆಲವು ಕೆಳದಿಯ ಆಸ್ಥಾನದಲ್ಲಿ, ಅಂದಿದ್ದ ರಾಜರಾಣಿಯರ ಪೋಷಣೆ ಪ್ರೋತ್ಸಾಹಗಳಿಂದ ರಚಿತವಾದ ಕನ್ನಡ ಕೃತಿಗಳಾಗಿದ್ದುವು. ಅವೆಲ್ಲವನ್ನೂ ಸಾವಧಾನದಿಂದ ಪ್ರತಿಮಾಡಿಕೊಂಡೆ. ಅನಂತರ ಅಧ್ಯಯನಕ್ಕೆ ತೊಡಗಿದೆ. ಅಭ್ಯಾಸ ಮುಂದುವರಿದಂತೆ ಕೆಳದಿಯ ಆಸ್ಥಾನಕ್ಕೆ ಸಂಬಂಧಿಸಿದ ಕನ್ನಡ ಕೃತಿಗಳನ್ನು ಕುರಿತ ಒಂದು ಮಹಾ ಪ್ರಬಂಧವನ್ನು ರಚಿಸಬೇಕು ಅನಿಸಿತು. ಕೂಡಲೇ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾಗಿದ್ದ ಡಾ|| ಆರ್. ಸಿ. ಹಿರೇಮಠರವರನ್ನೂ, ಮಾನ್ಯ ಮಿತ್ರರಾದ ಎಂ. ಎಂ. ಕಲಬುರ್ಗಿ ಯವರನ್ನು ಕಂಡು ನನ್ನ ಆಶಯವನ್ನು ನಿವೇದಿಸಿಕೊಂಡೆ. ಅವರಿಂದ ನನಗೆ ಉತ್ತಮ ಮಾರ್ಗದರ್ಶನ ಲಭಿಸಿತು. ಅಧ್ಯಯನ ಅವಿಶ್ರಾಂತವಾಗಿ ಸಾಗಿತು. ಅಂತು ಸಾಗಿದ ಸುಮಾರು ಒಂಬತ್ತು ವರ್ಷಗಳ ಸುದೀರ್ಘ ತಪಸ್ಸಿನ ಫಲ ಈ ಕೃತಿ. ಇದರ ರಚನೆಗೆ ಕಾರಣರಾದ ಈ ಇಬ್ಬರು ಮಹನೀಯರಿಗೂ ನಾನು ತುಂಬಾ ಆಭಾರಿಯಾಗಿದ್ದೇನೆ. ನಲ್ಲಿಯಲ್ಲಿ ನೀರು ಬಂದರೆ ನಲ್ಲಿಯ ಹೊಟ್ಟೆಯಲ್ಲೇ ನೀರು ಹುಟ್ಟುವುದಿಲ್ಲ. ಹನಿ ನೀರಿನ ಸೃಷ್ಟಿಗೆ ವಿಶ್ವದ ಸಮಸ್ತ ಶಕ್ತಿಗಳೂ ಶ್ರಮಿಸ ಬೇಕಾಗುತ್ತದೆ. ಅಂತೆಯೇ ನನ್ನ ಲೇಖಣಿಯಿಂದ ಹೊರಬಂದ ಈ ಗ್ರಂಥದ ಹಿನ್ನೆಲೆಯಲ್ಲಿ ನೂರಾರು ವ್ಯಕ್ತಿ-ಶಕ್ತಿಗಳ ಕಲಾ ಕೈವಾಡ ಇದೆ. ಆ ಎಲ್ಲ ಚೈತನ್ಯಗಳಿಗೂ ನನ್ನ ಭಕ್ತಿಪೂರ್ವಕ ನಮನಗಳು.

ಕೃತಿ ರಚನೆ ಒಂಬತ್ತು ವರ್ಷ ಹಿಡಿಯಿತು ; ಕೃತಿ ಪ್ರಕಟಣೆ ಮತ್ತೆ ಒಂಬತ್ತು ವರ್ಷ ತೆಗೆದುಕೊಂಡಿತು. ಅಚ್ಚಾದ ಗ್ರಂಥವನ್ನು ನೋಡುವ ಭಾಗ್ಯ ನನಗಿಲ್ಲವೆಂದೇ ಭಾವಿಸಿದ್ದೆ. ನಿರಾಶೆಯ ನೆರಳನ್ನು ದೂರಸರಿಸಿ ಆಶಾಕಿರಣವನ್ನು ಮೂಡಿಸಿದವರು ನನ್ನ ಪೂಜ್ಯ ಗುರುಗಳಾದ ಡಾ. ಜಿ. ಎಸ್. ಶಿವರುದ್ರಪ್ಪನವರು ಮತ್ತು ಪ್ರಸಾರಾಂಗದ ನಿರ್ದೇಶಕರಾದ ಶ್ರೀ ಹೆಚ್. ಆರ್. ದಾಸೇಗೌಡರು. ಈ ಮಹನೀಯರಿಗೂ, ಬೆಂಗಳೂರು ವಿಶ್ವವಿದ್ಯಾಲಯಕ್ಕೂ, ಪಠ್ಯಪುಸ್ತಕ ಸಲಹಾ ಸಮಿತಿಗೂ, ಪ್ರಸಾರಾಂಗದ ಉಪ ನಿರ್ದೇಶಕರಾದ ಶ್ರೀ ಕೆ. ಸಿ. ಶಿವಪ್ಪನವರಿಗೂ, ಪ್ರಕಟನಾ ಸಹಾಯಕಿ ಕುಮಾರಿ ಅಂದನೂರ ಶೋಭಾರವರಿಗೂ, ಅಂದವಾಗಿ ಅಚ್ಚುಮಾಡಿಕೊಟ್ಟ ಸ್ವತಂತ್ರ ಮುದ್ರಣಾಲಯದವರಿಗೂ ನನ್ನ ಕೃತಜ್ಞತಾಪೂರ್ವಕ ವಂದನೆಗಳು.

ಸಾ. ಶಿ. ಮರುಳಯ್ಯ

# ವಿಷಯ ಸೂಚಿ

# ಸಂಕ್ಷಿಪ್ತ ಸೂಚಿ

| | | |
|---|---|---|
| Alvares, N. I. | .... | Ernest Alvares, M. The Nayakas of Ikkeri |
| A. R. S. I. E. | .... | Annual Report on South Indian Epigraphy, |
| A. S. R. (S. C.) | .... | Annual Reports of the Archaeological Survey of India, Southern Circle, Madras. |
| Buchanan, A Journey | .... | Francis Buchanan, M. D., A Journey from Madras through the Countries of Mysore, Canara and Malbar. |
| Chitnis, Keladi Administration | .... | Dr. K. N. Chitnis, Government and Administration under the Keladi Rulers. |
| Della Valle, Travels | .... | Pietro Della Valle, The Travels in India. |
| E. C. | .... | Epigraphia Caranatica |
| Taluks | .... | |
| (a) Cg : | .... | Coorg |
| (b) Cm : | .... | Chikkamagalur |
| (c) Hl : | .... | Honnali |
| (d) Kp : | .... | Koppa |
| (e) Nr : | .... | Nagara |
| (f) Sa : | .... | Sagara |
| (g) Sk : | .... | Shikaripur |
| (h) Sh : | .... | Shimoga |
| (i) Sb : | .... | Soraba |
| (j) Sg : | .... | Sringeri |
| (k) Tl : | .... | Tirthahally |

| | | |
|---|---|---|
| E. I | .... | Epigraphia Indica |
| Fryer, A New Account | .... | John Fryer, A New Account of East India and Persia |
| Hamilton, A New Account | .... | Alexander Hamilton, A New Account of the East Indies. |
| Heras, Aravidu | .... | The Aravidu Dynasty of Vijaya-nagara by Henry Heràs S. J. |
| I. A. | .... | Indian Antiquary |
| J. B. B. R. A. S. | .... | Journal of the Bombay Branch of the Royal Asiatic Society |
| J. B. H. S. | .... | Journal of the Bombay Historical Society. |
| J. R. A. S. | .... | Journal of the Royal Asiatic Society. |
| J U. B. | .... | Journal of the Bombay University |
| Kadadevaramath Kannada during Keladi | .... .... | "Kannada Literature during the period of Keladi Chiefs," by S. G. Kadadevara Math. |
| M. A. R. | .... | Mysore Archaeological Report |
| Mac-Coll. | .... | Mackanzie Collection |
| M. C. I. | .... | Mysore Coorg Inscriptions |
| Mundy, Travels | .... | Peter Mundy, The Travels in Europe and Asia |
| N. K. GAZ. | .... | North Kanara Gazetteer. |
| O. R. I. | .... | Oriental Research Institute, Mysore. |

# ಸಂಕ್ಷಿಪ್ತ ಸೂಚಿ

| | | |
|---|---|---|
| Alvares, N. I. | .... | Ernest Alvares, M. The Nayakas of Ikkeri |
| A. R. S. I. E. | .... | Annual Report on South Indian Epigraphy, |
| A. S. R. (S. C.) | .... | Annual Reports of the Archaeological Survey of India, Southern Circle, Madras. |
| Buchanan, A Journey | .... | Francis Buchanan, M. D., A Journey from Madras through the Countries of Mysore, Canara and Malbar. |
| Chitnis, Keladi Administration | .... | Dr. K. N. Chitnis, Government and Administration under the Keladi Rulers. |
| Della Valle, Travels | .... | Pietro Della Valle, The Travels in India. |
| E. C. | .... | Epigraphia Caranatica |
| Taluks | .... | |
| (a) Cg : | .... | Coorg |
| (b) Cm : | .... | Chikkamagalur |
| (c) Hl : | .... | Honnali |
| (d) Kp : | .... | Koppa |
| (e) Nr : | .... | Nagara |
| (f) Sa : | .... | Sagara |
| (g) Sk : | .... | Shikaripur |
| (h) Sh : | .... | Shimoga |
| (i) Sb : | .... | Soraba |
| (j) Sg : | .... | Sringeri |
| (k) Tl : | .... | Tirthahally |

| | | |
|---|---|---|
| E. I | .... | Epigraphia Indica |
| Fryer, A New Account | .... | John Fryer, A New Account of East India and Persia |
| Hamilton, A New Account | .... | Alexander Hamilton, A New Account of the East Indies. |
| Heras, Aravidu | .... | The Aravidu Dynasty of Vijaya-nagara by Henry Herâs S. J. |
| I. A. | .... | Indian Antiquary |
| J. B. B. R. A. S. | .... | Journal of the Bombay Branch of the Royal Asiatic Society |
| J. B. H. S. | .... | Journal of the Bombay Historical Society. |
| J. R. A. S. | .... | Journal of the Royal Asiatic Society. |
| J U. B. | .... | Journal of the Bombay University |
| Kadadevaramath Kannada during Keladi | .... .... | "Kannada Literature during the period of Keladi Chiefs," by S. G. Kadadevara Math. |
| M. A. R. | .... | Mysore Archaeological Report |
| Mac-Coll. | .... | Mackanzie Collection |
| M. C. I. | .... | Mysore Coorg Inscriptions |
| Mundy, Travels | .... | Peter Mundy, The Travels in Europe and Asia |
| N. K. GAZ. | .... | North Kanara Gazetteer. |
| O. R. I. | .... | Oriental Research Institute, Mysore. |

| | | |
|---|---|---|
| Q. J. M. S. | .... | Quarterly Journal of the Mysore Society |
| Rice, Mysore | .... | Mysore, A Gazetteer compiled for Government—By B. Lewis Rice, C. I. E., M. A. R. S. |
| S. I. I. | | South Indian Inscriptions |
| S. K. Aiyengar, Sources | .... | S. Krishna Swami Aiyengar, The Sources of Vijayanagara History selected and edited for the Madras University Comp. by Saraswaty Rangaswami, Madras, 1919. |
| Vij. Sex-Cent. Com. Vol. | .... | Vijayanagara Sex-Centinary Commemoration Volumes |
| Weber, The Hist. | .... | Weber Albrecht, The History of Sanskrit Literature |
| ಕ. ಕ. ಚ. | .... | ಕರ್ಣಾಟಕ ಕವಿ ಚರಿತೆ |
| ಕ. ಪ. ಪ. | .... | ಕರ್ಣಾಟಕ ಸಾಹಿತ್ಯ ಪರಿಷತ್ ಪತ್ರಿಕೆ |
| ಕೆ. ನೃ. ವಿ. | .... | ಕೆಳದಿ ನೃಪ ವಿಜಯ |
| ಪ್ರ. ಕ. | .... | ಪ್ರಬುದ್ಧ ಕರ್ಣಾಟಕ |
| ಬಲದೇವ, ಇತಿಹಾಸ್ | .... | ಬಲದೇವ ಉಪಾಧ್ಯಾಯ, ಸಂಸ್ಕೃತ ಸಾಹಿತ್ಯ ಕಿ ಇತಿಹಾಸ್ (ಹಿಂದಿ) |
| ಮ. ಸಾ. ಪ. ಪ. | .... | ಮಹಾರಾಷ್ಟ್ರ ಸಾಹಿತ್ಯ ಪರಿಷತ್ ಪತ್ರಿಕೆ |
| ಧರ್ಮ – ಶಿರೋಮಣಿ | .... | ವೀರಶೈವ ಧರ್ಮಶಿರೋಮಣಿ |
| ಶಿವ. ರತ್ನಾಕರ | .... | ಶಿವತತ್ತ್ವ ರತ್ನಾಕರ |



ಕೊಲ್ಲೂರು ಮೂಕಾಂಬಿಕೆ



ಕೆಳದಿಯ ಅರಸು ಶಿಸ್ತಿನ ಶಿವಪ್ಪನಾಯಕ
[ವಾರಣಾಸಿ ಜಂಗಮವಾಡಿ ಮಠದಲ್ಲಿರುವ ಚಿತ್ರ]



ಕೆಳದಿಯ ಅರಸರ ರಾಜಲಾಂಛನ ಗಂಡಭೇರುಂಡ
[ ಕೆಳದಿಯ ವೀರಭದ್ರ ದೇವಸ್ಥಾನದಲ್ಲಿರುವ ಶಿಲ್ಪಕೃತಿ ]



ಇಕ್ಕೇರಿಯ ಅಘೋರೇಶ್ವರ ದೇವಾಲಯ ಮತ್ತು ನಂದಿಮಂಟಪ



ಕೆಳದಿಯ ವೀರರಾಣಿ ಚೆನ್ನಮ್ಮಾಜಿ



ವರದಾಮೂಲ



ಬಿದನೂರು ಕೋಟೆಯ ಮಹಾದ್ವಾರ



ಬಿದನೂರು ಕೋಟೆ



ನರಹರಿ ವಿಜಯ ಕಾವ್ಯದ ಏಳು ಗರಿಗಳು



ಕೆಳದಿ ಕವಿ ಲಿಂಗಣ್ಣನ ಆಸ್ತಿವಿಭಾಗ ಪತ್ರ

ಭರತಖಂಡದ ಯಾವುದೇ ರಾಜ್ಯದ ಇತಿಹಾಸವನ್ನೆತ್ತಿಕೊಂಡರೂ ಅಲ್ಲಿನ ಪ್ರಜೆಗಳ ಬದುಕಿನ ಮೇಲೆ, ಅವರ ಧರ್ಮ ಸಂಸ್ಕೃತಿ ನಾಗರಿಕತೆಗಳ ಮೇಲೆ, ಅವರ ಸಾಹಿತ್ಯದ ಮೇಲೆ, ಅದನ್ನಾಳುತ್ತಿದ್ದ ರಾಜನ ಪ್ರಭಾವ ಸಾಕಷ್ಟು ಪ್ರಮಾಣದಲ್ಲಿ ಆಗಿರುವುದು ಕಂಡುಬರುತ್ತದೆ. ರಾಜನೆಂದಾಗ ಬರುತ್ತಿದ್ದ ಭಾವನೆಯೇ ಬೇರೆ. ಅವನು ಎಲ್ಲರಂತೆ ಸಾಧಾರಣ ಮಾನವನಲ್ಲ, ಸಾಕ್ಷಾತ್ ದೇವತೆ; ಕಾಲಕ್ಕೆ ಕಾರಣನಾದವನು; ರಾಷ್ಟ್ರಸಂರಕ್ಷಕನಾದ್ದರಿಂದ "ನಾ ವಿಷ್ಣುಃ ಪೃಥ್ವೀಪತಿಃ" ಎಂಬ ಸದ್ಭಾವನೆ ಅವನ ಬಗೆಗೆ. ಅಷ್ಟೇ ಅಲ್ಲದೆ, ಒಂದು ರಾಜ್ಯದ ಶ್ರೇಷ್ಠ ವಸ್ತುಗಳೆಲ್ಲವೂ ಆ ರಾಜ್ಯದ ರಾಜನ ಸ್ವತ್ತುಗಳು. ಮಹಾಮೇಧಾವಿಯಾದ ಪ್ರಜೆ–ರಾಜನ ಆಸ್ಥಾನದಲ್ಲಿ ಅಮಾತ್ಯ ಶಿರೋಮಣಿ; ಶೂರ ಅಥವಾ ಸಾಹಸಿ–ರಾಜ ಮತ್ತು ರಾಜ್ಯಗಳನ್ನು ರಕ್ಷಿಸುವ ದಂಡಾಧೀಶ; ದೇಶದಲ್ಲಿನ ಚೆಲುವೆ–ಅಂತಃಪುರ ಅಥವಾ ಜನಾನದಲ್ಲಿ ರಾಜನ ಭೋಗ್ಯವಸ್ತು; ಉತ್ತಮ ನೃತ್ಯಗಾರ್ತಿ–ಆಸ್ಥಾನದಲ್ಲಿ ರಾಜನರ್ತಕಿ; ಶ್ರೇಷ್ಠ ಗಾಯಕಿ-ಆಸ್ಥಾನದ ವಿದುಷಿ; ಪ್ರತಿಭಾವಂತನಾದ ಕವಿ-ರಾಜಕವಿ ಇಲ್ಲವೇ ರಾಷ್ಟ್ರಕವಿ; ಮದ್ದು ಕೊಡುವ ಪಂಡಿತ-ರಾಜವೈದ್ಯ; ಘನವಿದ್ವಾಂಸ–ಆಸ್ಥಾನ ವಿದ್ವಾನ್; ಚತುರ ರೂವಾರಿ-ರಾಜಮನ್ನಣೆಗೆ ಪಾತ್ರನಾದ ಸ್ಥಪತಿ; ಧರ್ಮಾಧಿಕಾರಿ ಅಥವಾ ಮಠಾಧಿಪತಿ–ಆಸ್ಥಾನದಲ್ಲಿ ರಾಜಗುರು-ಹೀಗಾಗಿ ಸಮಾಜದ ಸೂತ್ರಗಳೆಲ್ಲವೂ ರಾಜನ ಕೈಯಲ್ಲಿರುತ್ತಿದ್ದುವು. ರಾಜ ಎದ್ದರೆ ಇವೆಲ್ಲವೂ ಕೂಡೆ ಏಳುತ್ತಿದ್ದುವು, ಬಿದ್ದರೆ ಎಲ್ಲವೂ ಕೂಡೆ ಬೀಳುತ್ತಿದ್ದುವು. ರಾಷ್ಟ್ರದ ಆಗುಹೋಗುಗಳಿಗೆ ರಾಜನೇ ಕಾರಣನೆನಿಸುತ್ತಿದ್ದನು. ಒಂದು ರಾಷ್ಟ್ರದ ಸಾಹಿತ್ಯದ ಅಥವಾ ಸಂಸ್ಕೃತಿಯ ಪ್ರಗತಿ-ಪತನಗಳು ಅದನ್ನಾಳುತ್ತಿದ್ದ ಅರಸು ಮನೆತನದ ಪ್ರಗತಿ–ಪತನಗಳನ್ನು ಅವಲಂಬಿಸಿದ್ದವೆಂದು ಹೇಳಿದರೆ ತಪ್ಪಾಗಲಾರದು.[1] ಅಲ್ಲದೆ ರಾಜನ ಅಭಿರುಚಿಗೆ ತಕ್ಕಂತೆ ಸಾಹಿತ್ಯವೂ ಸೃಷ್ಟಿಯಾಗುತ್ತಿತ್ತು. ರಾಜ ವಿಲಾಸಿಯಾದರೆ ಕೇವಲ ಕಾಮಭರಿತ ಶೃಂಗಾರ ಕಾವ್ಯಗಳೂ, ಧಾರ್ಮಿಕನಾದರೆ ನೀತಿಬೋಧಕ ಕೃತಿಗಳೂ ಸೃಷ್ಟಿಯಾಗುತ್ತಿದ್ದುವು. ಅಂದರೆ ಅಂದು ಸೃಷ್ಟಿಯಾಗುತ್ತಿದ್ದ ಸಾಹಿತ್ಯಕ್ಕೆ ರಾಜನ ಮನೋಧರ್ಮವೂ ಭಾಗಶಃ ಕಾರಣವಾಗಿತ್ತು ಎಂದರ್ಥ.

"ರಾಜರ ಆಶ್ರಯದಲ್ಲಿ ಕವಿಗಳ ವಾಣಿಯು ಉದಯಿಸುತ್ತಿತ್ತು. ಅವರ ರಂಗಶಾಲೆಯಲ್ಲಿಯೇ ಕವಿಗಳ ನಾಟ್ಯಕಲೆಯು ಪ್ರದರ್ಶಿತವಾಗುತ್ತಿದ್ದಿತು. ರಾಜರುಗಳ

---

[1] ಎಂ. ಎಂ. ಕಲಬುರ್ಗಿ, ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ, (ಇದರ ಕಡೆಯ ಅಧ್ಯಾಯ ನೋಡಿ)

ಆಸ್ಥಾನವು ಕಲೆ ಮತ್ತು ಕೌಶಲ, ಸಂಸ್ಕೃತಿಗಳ ಪ್ರಧಾನ ಕೇಂದ್ರವಾಗಿದ್ದಿತು. ಆದುದರಿಂದ ಕವಿಗಳ ನೈಸರ್ಗಿಕವಾದ ಪ್ರತಿಭೆಯು ಜಾಗೃತಿ ಹೊಂದಲು ಅಲ್ಲಿ ಅನುಕೂಲವಾದ ವಾತಾವರಣವಿದ್ದಿತು."[2] ಈ ಕಾರಣದಿಂದಲೆ ನಮ್ಮ ಭಾರತೀಯ ಸಾಹಿತ್ಯ ಸೃಷ್ಟಿಯ ಸಿಂಹಪಾಲು ಅರಮನೆಗೆ ಮೀಸಲಿರುವುದು. ಅನಾದಿ ಕಾಲದಿಂದಲೂ ಆಸ್ಥಾನವೆ ನಮ್ಮ ಸಾಹಿತ್ಯದ ಉತ್ತಮ ಆಡುಂಬೊಲವಾಗಿದೆ. ಕಡೆಕಡೆಗೆ ಅದು 'ವಿನಾಶ್ರಯಂ ನ ಶೋಭಂತೇ ಪಂಡಿತಾ ವನಿತಾ ಲತಾ' – ಎಂಬ ಅನಿವಾರ್ಯ ಸಿದ್ಧಾಂತದ ಮಟ್ಟಕ್ಕೂ ಏರಿತು. ಒಟ್ಟಿನಲ್ಲಿ, ಯಾವುದೇ ಭಾರತೀಯ ಭಾಷಾ ಸಾಹಿತ್ಯವಾಗಲಿ ಅದು ಅರಮನೆಯ ಸಂಪರ್ಕವನ್ನು ನಿರಂತರವಾಗಿ ಇಟ್ಟುಕೊಂಡೇ ಬಂದಿದೆ ಎಂದು ಹೇಳಬಹುದು.

"ಪೆಜರೀವುದೇಂ ಪೆಜಜ ಮಾಡುವುದೇಂ ಪೆಜಜಿಂದವಪ್ಪುದೇಂ"–ಎಂಬ ಧೋರಣೆ ಇದ್ದರೂ ಇತರ ಭಾಷಾ ಸಾಹಿತ್ಯಕ್ಕಿದ್ದಂತೆ ಕನ್ನಡ ಸಾಹಿತ್ಯಕ್ಕೂ ರಾಜಾಶ್ರಯದ ಅಗತ್ಯ ಇತ್ತು. ಆ ಕಾರಣ ಅದು ಕಾಲಕಾಲಕ್ಕೂ ರಾಜ, ಮಹಾರಾಜರ ಪೋಷಣೆ, ಪ್ರೋತ್ಸಾಹಗಳನ್ನು ಪಡೆದೇ ಬೆಳೆದಿದೆ. ಹೀಗೆ ರಾಜಾಶ್ರಯದಿಂದ ಅನುಪ್ರಾಣಿತವಾದ ಕನ್ನಡ ಸಾಹಿತ್ಯ ಆಗಾಗ ತನ್ನ ಬಣ್ಣವನ್ನು ಬದಲಿಸಿಕೊಂಡಿರುವುದೂ ಉಂಟು. ಅದರ ಹಲವು ಸ್ತರಗಳನ್ನಿಲ್ಲಿ ಅವಲೋಕಿಸಬಹುದು.

ಕನ್ನಡ ಸಾಹಿತ್ಯದ ಆರಂಭದ ದಿನಗಳಿಂದ ಹತ್ತನೆಯ ಶತಮಾನದವರೆಗಿನ ಸಾಹಿತ್ಯದಲ್ಲಿ ರಾಜಾಶ್ರಯದ ಪ್ರಭಾವ ಒಂದು ರೀತಿಯಲ್ಲಾಗಿದೆ. ಕಥಾನಾಯಕನಿಗೂ ತನ್ನ ಆಶ್ರಯದಾತನಿಗೂ ಅಭೇದವನ್ನು ಕಲ್ಪಿಸಿ ಕಾವ್ಯರಚನೆ ಮಾಡಿರುವುದು ಇದರ ವೈಶಿಷ್ಟ್ಯ. ಒಂದನೆಯ ಗುಣವರ್ಮನೆ ಇದರ ಆದ್ಯ ಪ್ರವರ್ತಕನಿರಬಹುದು. ಕಥಾನಾಯಕನಾದ ಶೂದ್ರಕನನ್ನು ತನ್ನ ಆಶ್ರಯದಾತನಾದ ಗಂಗದೊರೆ ಎರೆಯಪ್ಪನಿಗೆ ಹೋಲಿಸಿ ಶೂದ್ರಕ ಎಂಬ ಕೃತಿಯನ್ನು ರಚಿಸಿರುವುದಾಗಿ ತಿಳಿದುಬರುತ್ತದೆ. ಇವನಂತೆಯೆ, ಪಂಪ, ಪೊನ್ನ, ರನ್ನ ಮೊದಲಾದ ಕವಿಗಳು ಒಂದು ಲೌಕಿಕ ಮತ್ತೊಂದು ಧಾರ್ಮಿಕ– ಹೀಗೆ ಇಹಪರಗಳಿಗೆ ಸಂಬಂಧಿಸಿದಂತೆ ಎರಡೆರಡು ಕಾವ್ಯಗಳನ್ನು ರಚಿಸಿ, ತಮ್ಮ ತಮ್ಮ ಲೌಕಿಕ ಕಾವ್ಯಗಳಲ್ಲಿ ತಮ್ಮ ತಮ್ಮ ಆಶ್ರಯದಾತನಿಗೂ ಕಥಾನಾಯಕನಿಗೂ ಅವಿನಾಸಂಬಂಧವನ್ನು ಕಲ್ಪಿಸಿ ಕಾವ್ಯರಚನೆ ಮಾಡಿದ್ದಾರೆ. ಆದರೆ ೧೧–೧೨ನೆಯ ಶತಮಾನದಲ್ಲಿ ಜೈನಕವಿಗಳೇ ಈ ಸಂಪ್ರದಾಯವನ್ನು ಮುರಿದಿರುವುದು ಕಂಡುಬರುತ್ತದೆ. "ಪಂಪನು ಲೌಕಿಕ, ಧಾರ್ಮಿಕ ಎಂದೆರಡು ಗ್ರಂಥ ಬರೆದರೆ ನಾಗಚಂದ್ರನು ಎರಡೂ ಧಾರ್ಮಿಕ ಗ್ರಂಥಗಳನ್ನೇ ಬರೆದನು. ಪಂಪನದು ಲೌಕಿಕ ಭಾರತ, ನಾಗಚಂದ್ರನದು

---

[2] ಬಲದೇವ್, ಇತಿಹಾಸ್, ಪು. 111

ಜೈನರಾಮಾಯಣ."[3] ಅಭಿನವಪಂಪನು ಆದಿಪಂಪನನ್ನೇ ಅನುಸರಿಸಿದ್ದರೆ ರಾಮಚಂದ್ರ ಚರಿತ ಪುರಾಣವು ಶುದ್ಧ ಲೌಕಿಕ ಕಾವ್ಯವಾಗಬೇಕಾಗಿತ್ತು; ತನ್ನ ಆಶ್ರಯದಾತನಾದ (ಹೊಯ್ಸಳರಾಜ) ಮೊದಲನೆ ಬಲ್ಲಾಳನು, ಕಥಾನಾಯಕ ಶ್ರೀ ರಾಮಚಂದ್ರನಲ್ಲಿ ಐಕ್ಯತೆ ಪಡೆಯಬೇಕಾಗಿತ್ತು. ಆದರೆ ಇಲ್ಲಿ ಹಾಗಾಗಲಿಲ್ಲ. ಇದು ಹತ್ತನೆಯ ಶತಮಾನದ ರಾಜಾಶ್ರಯ ಸಾಹಿತ್ಯಕ್ಕೂ, ಹನ್ನೆರಡನೆಯ ಶತಮಾನದ ರಾಜಾಶ್ರಯ ಸಾಹಿತ್ಯಕ್ಕೂ ಇರುವ ವ್ಯತ್ಯಾಸಗಳಲ್ಲಿ ಒಂದು ಎಂದು ಹೇಳಬಹುದು.

ಹನ್ನೆರಡನೆಯ ಶತಮಾನ ಕನ್ನಡ ಸಾಹಿತ್ಯೇತಿಹಾಸದಲ್ಲಿ ಒಂದು ಕ್ರಾಂತಿಕಾಲ. ಕ್ರಾಂತಿ ಎಂದರೆ ಸಂಪ್ರದಾಯದ ವಿರುದ್ಧ ನಡೆಸುವ ಸಾತ್ವಿಕ ಹೋರಾಟ. ಅದರ ಪರಿಣಾಮವಾಗಿ ಕನ್ನಡ ಸಾಹಿತ್ಯದ ರೂಪ-ಸ್ವರೂಪಗಳು ಸಂಪೂರ್ಣ ಬದಲಾವಣೆ ಪಡೆದುವು. ಸ್ವತಂತ್ರ ಚಿಂತನೆ, ಸ್ವಚ್ಛಂದ ರಚನೆ, ಸ್ವಾವಲಂಬನೆ, ಸ್ವಾಧಿಕಾರ, ಸ್ವಯಂಪ್ರಜ್ಞೆ, ಚಿತ್ತಸ್ವಾಸ್ಥ್ಯ, ಆತ್ಮವಿಶ್ವಾಸ, ಹಂಗುತೊರೆದ ಆನಂದದ ಬರಹ-ಇವುಗಳಿಗೆ ವಿಶೇಷ ರಹದಾರಿ ಸಿಕ್ಕಿತು. ರಾಜಾಶ್ರಯಕ್ಕಂತೂ ದೊಡ್ಡದೊಂದು ಕೊಡಲಿಪೆಟ್ಟು ಬಿದ್ದಿತು. ತಾವು 'ಒಲಿದಂತೆ ಹಾಡಿದ' 'ಸ್ವತಂತ್ರ ಧೀರ'ರಾದ ಶರಣರ ವಿನೂತನ ಸಾಹಿತ್ಯ ಕಳಚೂರ್ಯರ ಆಳ್ವಿಕೆಯ ಅವಧಿಯಲ್ಲಿ ಹುಟ್ಟಿದ್ದಾದರೂ, ಅದಕ್ಕೆ ಕಲ್ಯಾಣ ನಗರದ ಆಸ್ಥಾನದ ಹಂಗಿಲ್ಲ. ಅದು ಅನುಭಾವಿಗಳ ಅನುಪಮ ಹಾಗೂ ನಿರಂಕುಶ ಸಾಹಿತ್ಯವೆನಿಸಿತು. ಅಂತೆಯೆ ವಚನಕಾರರು ಮುಂದಿನ ಕವಿಗಳಿಗೆ ಸ್ವಾಭಿಮಾನವನ್ನು ಕಲಿಸಿದರು. ಕಲಿತವರಲ್ಲಿ ಪ್ರಸಿದ್ಧನಾದವನು ಹರಿಹರ.

ಶಿವಶರಣರ ವಚನ ವಾಙ್ಮಯದ ಪುಣ್ಯ ಸಲಿಲದಲ್ಲಿ ಮಿಂದು ಮಡಿಯುಟ್ಟ ಹಂಪೆಯ ಹರಿಹರದೇವನು ತನ್ನ ನಾಲಗೆಯನ್ನು ಶಿವಸ್ತುತಿಗಾಗಿ ಮೀಸಲಿರಿಸಿದ್ದಾನೆ. "ಪೊಗಟೆಂ ಮಿಕ್ಕಿನ ಚಕ್ರಪಾಣಿ ಸರಸಿಜೋದ್ಭೂತ ಸಂಕ್ರಂದನಾದಿಗಳಂ.... ಈಶ್ವರಂಗೆಯ್ದೆ ನಾಲಗೆಯಂ ಮಾಱಿದೆಂ" ಎಂತಲೂ, "ಮನುಜರ ಮೇಲೆ, ಸಾವವರ ಮೇಲೆ, ಕನಿಷ್ಠರ ಮೇಲೆ ಅನವರತಂ ಪೊಗಟ್ಟು ಕೆಡಬೇಡೆಲೆ ಮಾನಸ ನೀನಹರ್ನಿಶಂ ನೆನೆ, ಪೊಗಟು, ಅರ್ಚಿಸು ಎಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ" ಎಂತಲೂ ತೀವ್ರವಾಗಿ ಎಚ್ಚರಿಸಿ ರಾಜಾಶ್ರಯವನ್ನು ಬೇಡಿಬಂದವರಿಗೆ ನಾಚಿಕೆ ಯುಂಟಾಗುವಂತೆ ಮಾಡಿದ್ದಾನೆ. ಅಂತೂ, ಜೈನಕವಿಗಳಲ್ಲಿದ್ದ ರಾಜಾಶ್ರಯದ ಆಮಿಷವನ್ನು ಕರ್ನಾಟಕದಲ್ಲಿ ಮೊಟ್ಟಮೊದಲು ಕಡಿಮೆ ಮಾಡಿದವರು ವೀರಶೈವ ಕವಿಗಳು ಎಂಬುದು ಸತ್ಯ. ಆದರೂ ಆ ಯುಗದಲ್ಲಿ ಹೊಯ್ಸಳ ಚಕ್ರವರ್ತಿಗಳು

---

[3] ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪು. 130. (೧೯೫೩)

ಕವಿಗಳಿಗೆ ಆಶ್ರಯ ನೀಡದೆ ಇಲ್ಲ. ಜೈನಕವಿಗಳು ಸಾಂಪ್ರದಾಯಿಕ ಸಾಹಿತ್ಯದ ಮರುಸೃಷ್ಟಿಗೆ ಕೈಹಾಕಿದ್ದೂ ಉಂಟು.[4] ರಾಜಾಶ್ರಯವನ್ನು ಸ್ವೀಕರಿಸುವುದರಲ್ಲೂ ಹಿಂದಿನ ಜೈನಕವಿಗಳನ್ನೆ ಅವರು ಅನುಸರಿಸಿದರು. ಆದರೆ ಅವರ ಮೇಲೆ ರಾಜಾಶ್ರಯದ ಪ್ರಭಾವಕ್ಕಿಂತಲೂ ವೀರಶೈವ ಕವಿಗಳ ಪ್ರಭಾವ ಆಗಿರುವುದು ಕಂಡು ಬರುತ್ತದೆ.[5]

"ಮನುಜರ ಮೇಲೆ, ಸಾವವರ ಮೇಲೆ, ಕನಿಷ್ಠರ ಮೇಲೆ" ಕಾವ್ಯವನ್ನೊರೆಯ ಬಾರದೆಂದು ತಿಳಿಸಿದ ಹಂಪೆಯ ಹರಿಹರದೇವನ ಆಣತಿಯನ್ನು ಸಾಮಾನ್ಯವಾಗಿ ಎಲ್ಲ ವೀರಶೈವ ಕವಿಗಳೂ ನಡೆಸಿಕೊಂಡು ಬಂದಿದ್ದಾರೆ. ಶಿವನನ್ನೂ ಶಿವಶರಣರನ್ನೂ ಬಿಟ್ಟು ಉಳಿದ ದೇವರನ್ನು ಹೊಗಳಿದವರು ಕೆಟ್ಟುಹೋದರೆಂದೇ ಅವರ ಭಾವನೆ. ಹೀಗಿದ್ದರೂ ಮಧ್ಯಕಾಲೀನ ಯುಗಗಳಲ್ಲಿ ಕನ್ನಡ ಕವಿಗಳಿಗೆ ರಾಜಾಶ್ರಯ ಅನಿವಾರ್ಯವಾಯಿತು. ಏಕೆಂದರೆ ಆಗಾಗ ದಾಳಿ ಬಂದು ಕೈಗೆ ಸಿಕ್ಕಷ್ಟನ್ನು ಕೊಳ್ಳೆಹೊಡೆದುಕೊಂಡು ಹೋಗುತ್ತಿದ್ದ ಮುಸಲ್ಮಾನರು ಆ ದಿನಗಳಲ್ಲಿ ಉತ್ತರ ಭಾರತವನ್ನೆಲ್ಲಾ ಸ್ವಾಧೀನಪಡಿಸಿಕೊಂಡು, ದಕ್ಷಿಣವನ್ನೂ ಕಬಳಿಸಲು ಕಾತರಿಸುತ್ತಿದ್ದರು. ಅವರ ಹಾವಳಿಯಿಂದ ದೇವರು, ಧರ್ಮ, ಸಾಹಿತ್ಯ, ಸಂಸ್ಕೃತಿಗಳನ್ನು ರಕ್ಷಿಸಬೇಕಾಗಿದ್ದರೆ ರಾಜ ಮಹಾ ರಾಜರುಗಳೇ ಆಗಬೇಕಾಗಿದ್ದಿತು. ಜನಸಾಮಾನ್ಯರಿಂದ ಅದು ಸಾಧ್ಯವಾಗುತ್ತಿರಲಿಲ್ಲ. ಈ ಉದ್ದೇಶಕ್ಕಾಗಿಯೆ ವಿಜಯನಗರ ಸಾಮ್ರಾಜ್ಯವು ಸ್ಥಾಪಿತವಾಯಿತೆನ್ನಬಹುದು.

---

[4] ಹರಿಹರ ರಾಘವಾಂಕರ ಸಮಕಾಲೀನ ಅಥವಾ ಅನಂತರದ ಜೈನಕವಿಗಳೂ, ವೈಯಾಕರಣಿಗಳೂ, ಪ್ರಾಚೀನ ಕಾವ್ಯರಚನಾಮಾರ್ಗವನ್ನು ಪುನಃ ಪ್ರತಿಷ್ಠಾಪಿಸಲು ಯತ್ನಿಸಿದ್ದಾರೆ. ಜನ್ನನು ತನ್ನ ಯಶೋಧರ ಚರಿತೆಯನ್ನು ಕೇವಲ ಕಂದಪದ್ಯಗಳಲ್ಲೇ ಬರೆದಿದ್ದಾನೆ; ಆ ಕಾಲದ ಜೈನಕವಿಗಳೆಲ್ಲರೂ ಚಂಪುವಿನಲ್ಲೇ ಕಾವ್ಯರಚನೆ ಮಾಡಿದ್ದಾರೆ; ಪ್ರಸಿದ್ಧ ವೈಯಾಕರಣಿ ಕೇಶಿರಾಜನಂತೂ ಱಳ, ಕುಳ, ಕ್ಷಳಗಳೇ ಮೊದಲಾದ ಪೂರ್ವ ಪ್ರಯೋಗಗಳನ್ನು ಹಿಡಿದಿಡಲು ಭಗೀರಥ ಪ್ರಯತ್ನವನ್ನೆ ಮಾಡಿ ವಿಫಲನಾಗಿದ್ದಾನೆ; ಆಂಡಯ್ಯನು ಅಚ್ಚಗನ್ನಡದಲ್ಲಿ ಕಾವ್ಯ ಬರೆದಿದ್ದರೂ, ಅವನು ನಡೆದಿರುವುದು ಚಂಪೂ ಮಾರ್ಗದ ರಸ್ತೆಯಲ್ಲಿ, ದೇಸಿಯ ದಾರಿಯಲ್ಲಲ್ಲ. ಇದು ಬಹುಶಃ ವೀರಶೈವಕವಿಗಳ ಹಾದಿಯನ್ನು ತುಳಿಯಬಾರದು ಎಂಬ ಹಟದಿಂದಿರಬೇಕು.

[5] ಮೇಲೆ ತಿಳಿಸಿದ ಹಟವನ್ನೇ ಮಧ್ಯಯುಗದ ಜೈನಕವಿಗಳು ಸಾಧಿಸಿದಂತಿಲ್ಲ. ಭಾಸ್ಕರನು ತನ್ನ ಜೀವಂಧರ ಚರಿತೆಯನ್ನು ಷಟ್ಪದಿಯಲ್ಲಿ ಬರೆದಿದ್ದಾನೆ. ಅಲ್ಲದೆ ಅದು ಜೈನಪುರಾಣ ಲಕ್ಷಣದಂತೆ ಲೋಕಾಕಾರಕಥನ, ಭವಾವಳಿ, ಪಂಚಕಲ್ಯಾಣ ಇತ್ಯಾದಿಗಳಿಂದ ಕೂಡಿಲ್ಲ. ವೀರಶೈವ ಕವಿಗಳ ರಚನಾ ಪ್ರಭಾವಕ್ಕೂ (ಮುಖ್ಯವಾಗಿ ರಾಘವಾಂಕನ ಪ್ರಭಾವಕ್ಕೂ) ಕುಮಾರವ್ಯಾಸನ ಪ್ರಭಾವಕ್ಕೂ ಸಂಪೂರ್ಣವಾಗಿ ಒಳಗಾಗಿದ್ದಾನೆ ಭಾಸ್ಕರ.

ಎಲ್ಲ ಧರ್ಮಗಳ ಗುರುಗಳೂ, ಕವಿಗಳೂ ವಿಜಯನಗರದ ಅರಸೊತ್ತಿಗೆಯ ನೆರವು ಪಡೆದರು. ಕನ್ನಡ, ತೆಲುಗು ಮತ್ತು ಸಂಸ್ಕೃತ ಭಾಷೆಗಳಲ್ಲಿ ಅಸಂಖ್ಯಾತ ಕೃತಿಗಳು ಸೃಷ್ಟಿಯಾದುವು. ಆದರೆ ಕನ್ನಡ ಕವಿಗಳು ಮಾತ್ರ ಆಶ್ರಯದಾತನನ್ನು ಹುಚ್ಚು ಹುಚ್ಚಾಗಿ ಹೊಗಳುವ ಗೋಜಿಗೆ ಹೋದಂತಿಲ್ಲ.

ಪತನಕಾಲದ ಪತಿತ ಸಾಹಿತ್ಯಕ್ಕೆ ಹಿಡಿದ ಕನ್ನಡಿ ವಿಜಯನಗರದ ಪತನಾನಂತರದ ತೆಲುಗು ಸಾಹಿತ್ಯ. ಸರ್ವತೋಮುಖವಾದ ಭ್ರಷ್ಟತ್ವ ಆ ಯುಗದ ಸಾಹಿತ್ಯದಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ. ಏಕೆಂದರೆ ವಿಜಯನಗರವು ಒಡೆದು ನೂರಾರು ಪಾಳೆಯಪಟ್ಟುಗಳಾದ ಮೇಲೆ ಎಲ್ಲ ಪಾಳೆಯಗಾರರೂ ಸ್ವೇಚ್ಛಾಚಾರಕ್ಕೆ ಕೈಹಾಕಿ ತುಂಬಾ ವಿಲಾಸಿಗಳಾದರು.[6] ಅವರ ಮೆಚ್ಚುಗೆಗಾಗಿ, ಅವರನ್ನು ಆಶ್ರಯಿಸಿದ್ದ ಕವಿಗಳೂ ಬಾಯಿಗೆ ಬಂದಂತೆ ಹೊಗಳಹತ್ತಿದರು.[7] ಇದೇ ಒಂದು ಸಂಪ್ರದಾಯವಾಗಿ ಒಡೆಯರ ಕಾಲದಲ್ಲಿ ಮೈಸೂರು ಅರಮನೆಗೂ ಕಾಲಿರಿಸಿತು.

---

[6] ಸ್ವಾಭಿಮಾನದ ಶಿಶುಗಳಾಗಿದ್ದ ಕವಿಗಳು ದಾಸರಾಗಿ, ಹೊಗಳುಭಟ್ಟರಾಗಿ ಬರೀ ಪ್ರಶಂಸಾ ಸಾಹಿತ್ಯವನ್ನು ಸೃಷ್ಟಿಸಿದರು.

ಸಮಗ್ರಾಂಧ್ರ ಸಾಹಿತ್ಯದ ನವಾಬರ ಯುಗದ Vol. VIII ಮತ್ತು ಇತರ ಸಂಪುಟಗಳನ್ನು ನೋಡಿದರೆ ತೆಲುಗು ಸಾಹಿತ್ಯದ ಪತನ ಸ್ಥಿತಿ ವೇದ್ಯವಾಗುತ್ತದೆ. ಅನಂತರದ ಅರವೀಡು ಅರಸರುಗಳು ತಮ್ಮ ರಕ್ಷಣೆಯೇ ಕಷ್ಟವಾದ್ದರಿಂದ ಕವಿಗಳ ಪೋಷಣೆಗೆ ಕೈ ಹಾಕಲಿಲ್ಲ. ಆದರೆ ತಂಜಾವೂರು, ಜಿಂಜಿ ನಾಯಕರುಗಳು ಕವಿಗಳನ್ನು ಸಾಕಿ ಹೊಗಳಿಸಿಕೊಂಡರು. ಈ ಅವಧಿಯಲ್ಲಿ ಗೊಬ್ಬರವೇನೊ ಸಾಕಷ್ಟು ಪ್ರಮಾಣದಲ್ಲಿ ಬಿದ್ದಿದೆ. ಆದರೆ ಉತ್ತಮ ನೆಲದಲ್ಲಲ್ಲ ಅಥವಾ ಬಿತ್ತಿದ ಬೆಳೆಯಲ್ಲಲ್ಲ; ಬಂಜರಿಗೆ ಇಲ್ಲವೇ ಕೊಚ್ಚೆಯ ಪ್ರದೇಶಕ್ಕೆ. ಅಲ್ಲಿ ಹುಟ್ಟಿದ ಸಸ್ಯ ಕೇವಲ ಮುಳ್ಳು ಇಲ್ಲವೆ ಮೆಳೆ ಇದು ಪುಂಡುಪಾಳೆಯಗಾರರ ಭೋಗ ಜೀವನದ ಪರಿಣಾಮ.

ಪ್ರತಿ ಹಳ್ಳಿಯೂ ಒಂದು ಪಾಳೆಯಪಟ್ಟು, ಪ್ರತಿ ಪಾಳೆಯಪಟ್ಟೂ ಒಂದು ಪುಟ್ಟ ರಾಜ್ಯ ; ಆ ರಾಜ್ಯಕ್ಕೆ ಒಬ್ಬ ರಾಜ ಇಲ್ಲವೇ ಪಾಳೆಯಗಾರ ; ಆವನ ಆದಾಯವೂ ಅಷ್ಟಕಷ್ಟೇ. ಆದರೂ ಅವನ ಬಡಾಯಿ ಬಹಳವಾಗಿದ್ದಿತು. "ನನಗೆ ಹತ್ತು ಸಾವಿರ ವರಹಗಳ ಆದಾಯವಿದೆ" ಎಂದು ಒಬ್ಬ ಹೇಳಿದರೆ, ಮತ್ತೊಬ್ಬ "ಲಕ್ಷ್ಮೀಪತಿಯ ದಶಾವತಾರಕ್ಕೆ ಅನುಗುಣವಾಗಿ ನನಗೆ ಹತ್ತು ರೂಪಾಯಿಗಳ ಆದಾಯವಿದೆ" ಎಂದು ಕೊಚ್ಚಿಕೊಳ್ಳುತ್ತಿದ್ದ. ಅಂದು ಇಂತಹ ರಾಜರೇ ಹೆಚ್ಚಾಗಿದ್ದರು. "ನಾವು ಒಂದು ಹುಲಿ ಸಾಕಿದ್ದೇವೆ" ಎಂದರೆ, "ನಮ್ಮ ಮನೆಯಲ್ಲಿ ಹುಲಿಯನ್ನು ಹೋಲುವ ಒಂದು ಬೆಕ್ಕು ಇದೆ" ಎನ್ನುವ ಪ್ರತಿಷ್ಠೆ ಬಲಿದಿತ್ತು ಅವರಲ್ಲಿ.

[7] ಅದ್ದಂಕಿ ಗಂಗಾಧರನ ಪೋಷಕನಾದ ಇಬ್ರಾಹಿಂ, ಕವಿಯ ತಪತೀ ಸಂವರಣೋಪಾಖ್ಯಾನದಲ್ಲಿ ಇಭರಾಮನಾಗಿದ್ದಾನೆ. ಪರಶುರಾಮ, ಶ್ರೀರಾಮ ಮೊದಲಾದ ಎಲ್ಲ ರಾಮರಿಗಿಂತಲೂ ಇಭರಾಮನು ಶ್ರೇಷ್ಠನೆನಿಸಿದ್ದಾನೆ. ಹರಿಶ್ಚಂದ್ರ, ನಳ, ಪುರುಕುತ್ಸ, ಪುರೂರವ, ಸಗರ, ಕಾರ್ತವೀರ್ಯ ಇವರ ಸರಣಿಯಲ್ಲೇ ಇಭರಾಮನು ಪೂಜಿತನಾಗಿದ್ದಾನೆ. ಇದಕ್ಕಿಂತಲೂ ಬೇರೆಯಾದ ನಾಚಿಕೆಗೇಡುತನ ಕವಿಗಳ ಪಾಲಿಗಿಲ್ಲ ಎಂದು ಹೇಳಬಹುದು.

ಸುಮಾರು ಒಂದೂವರೆ ಸಾವಿರ ವರ್ಷಗಳ ಇತಿಹಾಸವನ್ನುಳ್ಳ ಕನ್ನಡ ಸಾಹಿತ್ಯಕ್ಕೆ ಕಾಲ ಕಾಲಕ್ಕೂ ರಾಜಾಶ್ರಯ ದೊರೆತಿದೆಯಷ್ಟೆ. ಕೆಳದಿಯೂ ಸಹ ಅಂತಹ ಪುಣ್ಯ ಕಾರ್ಯದಲ್ಲಿ ಭಾಗಿಯಾಗಿದೆ; ಹತ್ತಾರು ಜನ ಕವಿಗಳಿಗೆ, ಕಲಾವಿದರಿಗೆ ಆಶ್ರಯವನ್ನು ಇತ್ತು ಪ್ರಾಚೀನ ಪರಂಪರೆಯ ಪಥದಲ್ಲಿ ತಾನೂ ಬಹುದೂರ ನಡೆದಿದೆ ಎಂಬುದನ್ನು ತೋರಿಸಿಕೊಡುವುದೆ ಈ ಅಧ್ಯಯನದ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ. ಕೆಳದಿಯನ್ನಾಳಿದವರು ನಮ್ಮ ಧರ್ಮವನ್ನು ರಕ್ಷಿಸಿದ್ದಾರೆ;[8] ಸಂಸ್ಕೃತಿಯನ್ನು ಪೋಷಿಸಿದ್ದಾರೆ.[9] ಸಂಸ್ಕೃತ ಮತ್ತು ಕನ್ನಡ ಭಾಷೆಗಳನ್ನು ಬೆಳಗಿಸಿದ್ದಾರೆ.[10] ಹಣ ಕೊಟ್ಟವನನ್ನು ಹೊಗಳುವುದೆ ತನ್ನ ಕಾವ್ಯದ ಗುರಿಯೆಂದು ಭಾವಿಸಿ, ಕಾವ್ಯರಚನೆ ಮಾಡುತ್ತಿದ್ದ ಕಾಲದಲ್ಲೇ, ಸ್ವತಂತ್ರ ಸಂಸ್ಥಾನವೆನಿಸಿ ಮೆರೆದಿದ್ದರೂ, ಕೆಳದಿ ಅಂತಹ ಕೀಳು ಅಭಿರುಚಿಗೆ ಬಾಯಿ ತೆರೆದಂತಿಲ್ಲ. ಕೆಳದಿಯ ರಾಜಾಶ್ರಯ ಪಡೆದ ಕನ್ನಡ ಸಾಹಿತ್ಯಕ್ಕೆ

---

[8] ವೀರಮಾತೆ ಚೆನ್ನಮ್ಮಾಜಿಯು ಆಶ್ರಯ ಬೇಡಿ ಬಂದ ಶಿವಾಜಿಯ ಮಗ ರಾಜಾರಾಮನಿಗೆ ರಕ್ಷಣೆ ನೀಡಿ, ದೆಹಲಿಯ ಸುಲ್ತಾನನ ದ್ವೇಷಕ್ಕೆ ಪಾತ್ರಳಾಗಿ, ಅವನೊಡನೆ ಹೋರಾಡಿ ಕ್ರಿ. ಶ. ೧೬೯೦ರಲ್ಲಿ ಜಯಗಳಿಸಿದ ಒಂದೇ ಒಂದು ಉಜ್ವಲ ನಿದರ್ಶನದೊಂದಿಗೆ ಕೆಳದಿಯವರು ಸಲ್ಲಿಸಿದ ಸಮಸ್ತ ಸೇವೆಯನ್ನೂ ಸಮೀಕರಿಸಬಹುದು. ಅಂದಿನವರೆಗೂ ತನ್ನ ರಾಜಕೀಯ ಜೀವನದಲ್ಲಿ ಸೋಲನ್ನೇ ಕಂಡರಿಯದ ಔರಂಗಜೇಬ್, ಕನ್ನಡನಾಡಿನ ಕಿರಿಯ ರಾಜ್ಯದಲ್ಲಿನ ವಿಧವೆಯೋರ್ವಳಿಂದ ಅದರ ಸವಿಯನ್ನು ಸವಿಯಬೇಕಾಯಿತು.

ಈ ಘಟನೆಗೆ ಭಾರತದ - ಅದರಲ್ಲೂ ದಕ್ಷಿಣ ಭಾರತದ - ಇತಿಹಾಸದಲ್ಲಿ ಒಂದು ಮಹತ್ವದ ಸ್ಥಾನವಿದೆ. ಏಕೆಂದರೆ ಇತ್ತ ವಿಜಯನಗರ ಸಾಮ್ರಾಜ್ಯವು ನಮ್ಮ ಸಂಸ್ಕೃತಿಯ ವಜ್ರ ರಕ್ಷೆಯಾಗಿದ್ದಿತು; ಅತ್ತ ಮಹಾರಾಷ್ಟ್ರದಲ್ಲಿ ಶಿವಾಜಿ ಹಿಂದೂಸಂಸ್ಕೃತಿಯ ಸಂರಕ್ಷಕನಾಗಿದ್ದ. ಆದರೆ ಔರಂಗಜೇಬನ ಹಾವಳಿಯ ಹೊತ್ತಿಗೆ ಮಹಾರಾಷ್ಟ್ರವಾಗಲಿ, ವಿಜಯನಗರವಾಗಲಿ ತಮ್ಮನ್ನೇ ತಾವು ರಕ್ಷಿಸಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಅಂದಮೇಲೆ ಸಂಸ್ಕೃತಿಯ ರಕ್ಷಣೆ ಬಹು ದೂರವೇ ಉಳಿಯಿತು. ಈ ನಿಸ್ಸಹಾಯಕ ಪರಿಸ್ಥಿತಿಯಲ್ಲಿ ಕೆಳದಿ ಕೈಹಾಕಿ ಜಯಗಳಿಸದೆ ಇದ್ದಿದ್ದರೆ ದಕ್ಷಿಣ ಭಾರತದ ಪಾಲಿಗೆ ಅದರ ಸನಾತನ ಸಂಸ್ಕೃತಿ ಎಂದೋ ಮೊಲವ ಕೊಂಬಾಗುತ್ತಿತ್ತು. ಕೆಳದಿಯು ಕೆಚ್ಚು ದಾಕ್ಷಿಣಾತ್ಯರನ್ನೂ, ಅವರ ಧರ್ಮ, ಸಂಸ್ಕೃತಿಗಳನ್ನೂ ಕಾಪಾಡಿದೆ.

[9] ಹಲವು ಕಲಾವಿದರಿಗೆ ಆಶ್ರಯವಿತ್ತು, ಶಿಲ್ಪ, ವಾಸ್ತುಶಿಲ್ಪ, ಚಿತ್ರ, ನೃತ್ಯ, ಸಂಗೀತಾದಿ ಕಲೆಗಳ ಬೆಳವಣಿಗೆಗೆ ಕಾರಣರಾಗಿದ್ದಾರೆ. ಕನ್ನಡ ಮತ್ತು ಸಂಸ್ಕೃತ ಕವಿಗಳನ್ನು ಪೋಷಿಸಿರುವುದು ಸ್ಪಷ್ಟವಿದೆ. ಅಂತೆಯೇ ಅವರ ಸರ್ವಧರ್ಮ ಸಮಾನತೆ, ಪ್ರಜಾಪಾಲನೆ, ನ್ಯಾಯನಿರ್ಣಯ ಮೊದಲಾದುವೆಲ್ಲವೂ ನಮ್ಮ ಸಂಸ್ಕೃತಿಯ ಅಂಗಗಳೆ. ಸದಾಶಿವನಾಯಕನ ಸಾಹಸ, ದೊಡ್ಡಸಂಕಣ್ಣನ ಧರ್ಮಶ್ರದ್ಧೆ, ಹಿರಿಯ ವೆಂಕಟಪ್ಪನ ಸ್ವಾಭಿಮಾನ, ಶಿವಪ್ಪನಾಯಕನ ಸ್ವಾಮಿನಿಷ್ಠೆ, ವೀರಮಾತೆ ಚೆನ್ನಮ್ಮಾಜಿಯ ಮಾತೃಹೃದಯ, ಹಿರಿಯ ಹಾಗೂ ಕಿರಿಯ ಬಸವಪ್ಪರುಗಳಲ್ಲಿದ್ದ ಸಾತ್ವಿಕ ಸ್ವಭಾವ, ವೀರಮ್ಮಾಜಿಯ ರಾಷ್ಟ್ರಾಭಿಮಾನ—ಇವೆಲ್ಲವೂ ಕೆಳದಿಯು ಕಂಡ ಸಂಸ್ಕೃತಿಯ ಸಹಸ್ರಮುಖಗಳು.

[10] ಅನುಬಂಧ—13, ನೋಡಿ.

ಹುಚ್ಚು ಹೊಗಳಿಕೆಯ ದೋಷ ತಟ್ಟಲಿಲ್ಲ. ಪೋಷಕನಿಗೆ ಕೊಡುವಷ್ಟು ಮಾನ್ಯತೆಯನ್ನು ಕೊಟ್ಟು, ಧಾರ್ಮಿಕ ಹಾಗೂ ನೀತಿಬೋಧಕ ಕೃತಿಗಳನ್ನು ನೀಡಿದ್ದಾರೆ ಕೆಳದಿಯ ಕವಿಗಳು. ಇಂತಿಷ್ಟು ಒಳ್ಳೆಯ ಸಂಪ್ರದಾಯ ಕೆಳದಿಯನ್ನಾಳಿದವರಲ್ಲಿ, ಕೆಳದಿಯ ಆಸ್ಥಾನಕವಿಗಳಲ್ಲಿ ಕಂಡುಬರುತ್ತದೆ.

ಕೆಳದಿಯನ್ನಾಳಿದವರು ಹುಟ್ಟಿನಿಂದ ವೀರಶೈವರು, ಭಾವನೆಯಲ್ಲಿ ಭಾರತೀಯರು. ವಿಶ್ವಸಾಮರಸ್ಯದ ಕಡೆಗೆ ಅವರ ಒಲವಿರುವುದು, ಅವರು ಸಾಹಿತ್ಯಕ್ಕೆ ನೀಡಿದ ರಾಜಾಶ್ರಯ, ಕಲೆಗೆ ಕೊಟ್ಟ ಪ್ರೋತ್ಸಾಹ, ತಮ್ಮ ರಾಜ್ಯದಲ್ಲಿ ಎಲ್ಲ ಧರ್ಮಗಳನ್ನೂ ಗೌರವಿಸಿದ ರೀತಿ–ಇವುಗಳಲ್ಲಿ ಕಂಡು ಬರುತ್ತದೆ. ಅಂತೆಯೇ ಕೆಳದಿಯ ರಾಜಾಸ್ಥಾನದಲ್ಲಿ ಹುಟ್ಟಿ ಬೆಳೆದ ಸಾಹಿತ್ಯ ಅಂದಿನ ಪ್ರಭು ಪ್ರಜೆಗಳ ಮನೋಧರ್ಮಕ್ಕೆ ಸಾಕ್ಷಿಯಾಗಿ ನಿಂತಿದೆ. ಇದನ್ನು ಪರಿಚಯಿಸಿ ಕೊಡುವುದೇ ಈ ಅಧ್ಯಯನದ ಉದ್ದೇಶಗಳಲ್ಲಿ ಮತ್ತೊಂದಾಗಿದೆ.

"ಕೆಳದಿಯ ಅರಸರು ಮತ್ತು ಕನ್ನಡ ಸಾಹಿತ್ಯ" ಎಂಬ ಶಿರೋನಾಮೆ ಈ ನಿಬಂಧಕ್ಕಿದ್ದರೂ ಕೆಳದಿಯ ಅರಸರಿಗೆ ಸಂಬಂಧಿಸಿದ ಇತಿಹಾಸ ಈ ಅಧ್ಯಯನದ ದೃಷ್ಟಿಯಿಂದ ಗೌಣ. ಅಲ್ಲಿನ ಆಸ್ಥಾನದಲ್ಲಿ ರಾಜರ ಪೋಷಣೆ ಪ್ರೋತ್ಸಾಹಗಳಿಂದ ಸೃಷ್ಟಿಯಾದ ಕನ್ನಡ ಸಾಹಿತ್ಯವೇ ಪ್ರಧಾನ. ಕೆಳದಿಯವರ ಆಶ್ರಯದಲ್ಲಿ ಸಂಸ್ಕೃತ ಸಾಹಿತ್ಯವೂ ಬಹಳವಾಗಿ ಬೆಳಕು ಕಂಡಿದೆ. ಆದರೆ ಅದೂ ಸಹ ಈ ಅಧ್ಯಯನದಲ್ಲಿ ಆನುಷಂಗಿಕ ವಿಷಯ ಅಷ್ಟೆ. ಕೆಳದಿಯ ರಾಜ ರಾಣಿಯರ ಪೋಷಣೆಯಲ್ಲಿ ಪ್ರಸಿದ್ಧರಾದ ಕೆಲವು ಕನ್ನಡ ಕವಿಗಳ ಹಾಗೂ ಅವರ ಕೃತಿಗಳ ಪರಿಚಯ, ಕನ್ನಡ ಸಾಹಿತ್ಯಕ್ಕೆ ಕೆಳದಿಯವರ ಕಾಣಿಕೆ–ಇವುಗಳನ್ನು ಬಿತ್ತರಿಸುವುದೇ ಈ ಅಧ್ಯಯನದ ಮುಖ್ಯ ಗುರಿಯಾಗಿದೆ.

ಕೆಳದಿಯ ಇತಿಹಾಸ, ಆಡಳಿತ ಮೊದಲಾದ ವಿಷಯಗಳನ್ನು ಕುರಿತು ಒಂದೆರಡು ನಿಬಂಧಗಳು ಈಗಾಗಲೆ ಪ್ರಕಟವಾಗಿವೆ. ಎಂ. ಅರ್ನೆಸ್ಟ್ ಆಳ್ವರಿಸ್ ಎಂಬುವರು "The Nayakas of Ikkeri"[11] ಎಂಬ ಕೆಳದಿ ಇತಿಹಾಸವನ್ನು ಕುರಿತು ಒಂದು ನಿಬಂಧವನ್ನೂ, ಡಾ|| ಎಸ್. ಜಿ. ಕಾಡದೇವರಮಠ ಎಂಬುವರು "Kannada Literature during the period of Keladi Chiefs"[12] ಎಂಬ ನಿಬಂಧವನ್ನೂ, ಕೆಳದಿಯ ಪ್ರಭುತ್ವ ಹಾಗೂ ಆಡಳಿತ ವ್ಯವಸ್ಥೆ ಇತ್ಯಾದಿಗಳನ್ನು ಕುರಿತು ಡಾ|| ಕೆ. ಎನ್. ಚಿಟ್ನೀಸ್‌ರವರು "Government

---

11. Thesis approved by the University of Bombay, 1930
12. Thesis approved by the University of Bombay, 1953

and Administration under the Keladi Rulers"[13] ಎಂಬ ಒಂದು ವಿದ್ವತ್ಪೂರ್ಣ ಮಹಾಪ್ರಬಂಧವನ್ನೂ ರಚಿಸಿದ್ದಾರೆ.

ಇವುಗಳಲ್ಲದೆ, ಅರ್ನೆಸ್ಟ್ ಆಳ್ವರಿಸ್‌ರವರ ನಿಬಂಧವನ್ನೇ ಸಂಪೂರ್ಣವಾಗಿ ಆಧರಿಸಿ ರಚಿಸಿದ ಕೆ. ಡಿ. ಸ್ವಾಮಿನಾಥನ್‌ರವರ "The Nayakas of Ikkeri", ಸೆವೆರಿನ್ ಸಿಲ್ವರವರ "History of North Canara"; ಯಳಮಲಿಯವರ 'ಬಿದನೂರ ಇತಿಹಾಸ'[14], ಕೆಳದಿ ಗುಂಡಾಜೋಯಿಸರ 'ಕೆಳದಿ ಇತಿಹಾಸ', ಎಂ. ಎಸ್. ಪುಟ್ಟಣ್ಣನವರ ಕೆಳದಿ ಸಂಸ್ಥಾನದ ಚರಿತ್ರೆ, ಡಾ|| ಜಿ. ಎಸ್. ದೀಕ್ಷಿತರ 'ಕೆಳದಿ ನಾಯಕರು', ಶ್ರೀ ಸದಾಶಿವ ಒಡೆಯರ್‌ರವರ 'ಕನ್ನಡ ಸಂಸ್ಥಾನ ಕೆಳದಿ'[15], ಫ. ಗು. ಹಳಕಟ್ಟಿಯವರ 'ಕೆಳದಿ ಸಂಸ್ಥಾನದ ರಾಯರ ವಂಶಾವಳಿ' ಎಂಬ ಗ್ರಂಥಗಳೂ, ಅನೇಕ ಶಾಸನಗಳೂ, ಕೆಳದಿಯ ಆಸ್ಥಾನದಲ್ಲೇ ಸೃಷ್ಟಿಯಾದ ಸಂಸ್ಕೃತ ಮತ್ತು ಕನ್ನಡ ಸಾಹಿತ್ಯ ಕೃತಿಗಳೂ, ವಿದೇಶೀ ಪ್ರವಾಸಿಗರ ದಾಖಲೆಗಳೂ, ಹಲವು ಐತಿಹ್ಯಗಳೂ ಹಾಗೂ ದಂತಕಥೆಗಳೂ, ಪತ್ರಿಕೆಗಳೂ, ಗೆಜೆಟಿಯರ್‌ಗಳೂ, ಒಂದೆರಡು ಸಂಸ್ಮರಣ ಸಂಚಿಕೆಗಳೂ ಕೆಳದಿಯ ಇತಿಹಾಸ ಹಾಗೂ ಕೆಳದಿಯ ಆಸ್ಥಾನ ಸಾಹಿತ್ಯದ ಅಧ್ಯಯನಕ್ಕೆ ಸಹಾಯ ಸಂಪತ್ತುಗಳಾಗಿವೆ.

ಇಷ್ಟಾದರೂ ಕೆಳದಿಯ ಆಸ್ಥಾನ ಸಾಹಿತ್ಯವನ್ನು ಕುರಿತ ವಿಶೇಷ ಅಧ್ಯಯನ ನಡೆದಿಲ್ಲ. ಡಾ|| ಎಸ್. ಜಿ. ಕಾಡದೇವರಮಠರವರ "Kannada Literature During the period of Keladi Chiefs" ಮತ್ತು ನಮ್ಮ 'ಕೆಳದಿಯ ಅರಸರು ಮತ್ತು ಕನ್ನಡ ಸಾಹಿತ್ಯ' ಎಂಬ ಶಿರೋನಾಮೆಗಳಲ್ಲಿ ಸಾಮ್ಯತೆ ಕಂಡರೂ, ಅಂತರ್ಯದಲ್ಲಿ, ಅಧ್ಯಯನದ ದೃಷ್ಟಿಯಲ್ಲಿ, ಉದ್ದೇಶ ಮತ್ತು ವ್ಯಾಪ್ತಿ ಇವುಗಳಲ್ಲಿ ಎರಡಕ್ಕೂ ತುಂಬಾ ಅಂತರವಿದೆ. ಡಾ|| ಕಾಡದೇವರಮಠರವರ ನಿಬಂಧವು ಕೆಳದಿಯ ಅರಸರ ಆಸ್ಥಾನದಲ್ಲಿ ಸೃಷ್ಟಿಯಾದ ಸಾಹಿತ್ಯಕ್ಕೇ ಸೀಮಿತವಾಗಿಲ್ಲ. ಕ್ರಿ. ಶ. ೧೭-೧೮ ನೆಯ ಶತಮಾನಗಳಲ್ಲಿ ಆರಂಭವಾದ ವೀರಶೈವರ ಕ್ರಾಂತಿಕಾರಕ ಸಾಹಿತ್ಯದಿಂದ ಪ್ರಭಾವಿತವಾಗಿ, ಕರ್ನಾಟಕದ ನಾನಾ ಪ್ರದೇಶಗಳಲ್ಲಿ ಕನ್ನಡ ಸಾಹಿತ್ಯ ಹೇಗೆ ರೂಪುಗೊಂಡಿತು ಎಂಬುದನ್ನು ತಿಳಿಸುವುದಾಗಿದೆ. ಆ ನಿಬಂಧವು ತನ್ನ ಅಧ್ಯಯನಕ್ಕಾಗಿ

---

[13] Thesis approved by the Karnataka University, Dharwar. 1965.

[14] ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ರಚಿತವಾದ ಅಪ್ರಕಟಿತ ಗ್ರಂಥ.

[15] ಜೀವನಕಲೆ ಎಂಬ ಶಿರೋನಾಮೆಯ ಕೃತಿಯಲ್ಲಿರುವ ಕನ್ನಡ ಸಂಸ್ಥಾನ ಕೆಳದಿ ಎಂಬ ಲೇಖನ—ಪು. 54-64.

ಆರಿಸಿಕೊಂಡ ಅವಧಿ ಕ್ರಿ. ಶ. ೧೨೦೦ ರಿಂದ ೧೮೦೦ ರವರೆಗೆ. ಹೀಗೆ ಸುಮಾರು ಆರು ನೂರು ವರ್ಷಗಳ ಸುದೀರ್ಘ ವ್ಯಾಪ್ತಿಯನ್ನೂ ಅಖಂಡ ಕರ್ನಾಟಕದ ವೈಶಾಲ್ಯವನ್ನೂ ಪಡೆದಿದೆ. ಆದರೆ "ಕೆಳದಿಯ ಅರಸರು ಮತ್ತು ಕನ್ನಡ ಸಾಹಿತ್ಯ" ಎಂಬ ನಮ್ಮ ನಿಬಂಧವು ಕೇವಲ ಕೆಳದಿಯನ್ನಾಳಿದವರ ಆಳ್ವಿಕೆಯ ಅವಧಿಯಲ್ಲಿ, ಕೆಳದಿಯ ರಾಜಾಸ್ಥಾನದಲ್ಲಿ, ಆಸ್ಥಾನದ ಪೋಷಣೆ ಪ್ರೋತ್ಸಾಹಗಳಿಂದ ಹುಟ್ಟಿ ಬೆಳೆದ, ಕನ್ನಡ ಸಾಹಿತ್ಯಕ್ಕೆ ಮಾತ್ರ ಸೀಮಿತವಾಗಿದೆ.

ಡಾ|| ಕಾಡದೇವರಮಠ ಅವರು ಕೆಳದಿಯ ಆಸ್ಥಾನದಲ್ಲಿ ಸೃಷ್ಟಿಯಾದ ಕನ್ನಡ ಸಾಹಿತ್ಯ ಕೃತಿಗಳನ್ನು ಹೆಚ್ಚಾಗಿ ಗಮನಿಸಿಲ್ಲ. ಕನ್ನಡ ನಾಡಿನ ವಿವಿಧ ಭಾಗಗಳಲ್ಲಿ ಬೆಳೆದ ಕನ್ನಡ ಸಾಹಿತ್ಯದ ಅಂತರಿಕ ಸತ್ತ್ವ, ಶೈಲಿ ಮೊದಲಾದವುಗಳನ್ನು ಕುರಿತು ವಿವೇಚಿಸಿದ್ದಾರೆ. ಇಲ್ಲಿ ನಾವು ಕೆಳದಿಯ ಆಸ್ಥಾನದಲ್ಲಿ ಬೆಳಕು ಕಂಡ ಕನ್ನಡ ಸಾಹಿತ್ಯವನ್ನೂ, ಅದರ ವೈಶಿಷ್ಟ್ಯ ವೈವಿಧ್ಯಗಳನ್ನೂ ಕುರಿತು ಅಧ್ಯಯನ ನಡೆಸಿದ್ದೇವೆ.

ಈ ಅಧ್ಯಯನವು ಎಂಟು ಅಧ್ಯಾಯಗಳಲ್ಲಿ ಬಿತ್ತರಗೊಂಡಿದೆ. ಆದರೆ ಆರಂಭದ ಎರಡು ಅಧ್ಯಾಯಗಳು ಅಧ್ಯಯನದ ಮುಖ್ಯ ವಿಷಯಕ್ಕೆ ಪೋಷಕಾಂಗಗಳಾಗಿವೆ. ಮಿಕ್ಕ ಆರು ಅಧ್ಯಾಯಗಳಲ್ಲಿ ಅಧ್ಯಯನದ ವಿಷಯವನ್ನು ಕುರಿತು ವಿಶ್ಲೇಷಣೆ, ವಿಚಾರ, ವಿಮರ್ಶೆ, ಸಿದ್ಧಾಂತ–ಮೊದಲಾದವುಗಳನ್ನು ನಡೆಸಿದ್ದೇವೆ.

ಹೀಗೆ ಕೆಳದಿಯ ಆಸ್ಥಾನ ಸಾಹಿತ್ಯವನ್ನು ಆದ್ಯಂತವಾಗಿ ಅಭ್ಯಸಿಸಿದಂತೆ, ಮತ್ತೊಂದು ಅಂಶದ ಪ್ರಚೋದನೆಯೂ ಈ ಅಧ್ಯಯನದ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ. ಅದೇ ಸಾಹಿತ್ಯ ಕೃತಿಗಳ ಸಂಗ್ರಹಣೆ ಮತ್ತು ಬತ್ತಿ ಹೋಗಿರುವ ರಾಷ್ಟ್ರೀಯ ಭಾವನೆಯನ್ನು ಭಾರತೀಯನಲ್ಲಿ ಬೆಳೆಸುವುದು. ನಮ್ಮ ಕನ್ನಡ ನಾಡು ಒಂದನ್ನೇ ತೆಗೆದುಕೊಂಡರೆ ಮೊದಲಿನಿಂದಲೂ ಹರಿದು ಹಂಚಾಗಿ ಹಲವು ಪಾಳೆಯಪಟ್ಟುಗಳಾಗಿ ಬಾಳಿಕೊಂಡು ಬಂದಿದೆ. ಸಾಮ್ರಾಟ, ಸಾಮಂತರಂತೆ, ಅನೇಕ ಪಾಳೆಯಗಾರರೂ[16] ಕವಿಗಳಿಗೆ, ಕಲಾವಿದರಿಗೆ ಆಶ್ರಯ ಕೊಟ್ಟಿದ್ದಾರೆ; ಕೃತಿ ರಚನೆ ಮಾಡಿಸಿದ್ದಾರೆ. ಆದರೆ ರಾಜ್ಯಗಳು ಮಡಿದಂತೆ, ರಾಜರ ಹೆಸರುಗಳೂ ಅಳಿದಂತೆ, ಅಲ್ಲಿನ ಜನತೆಯಲ್ಲಿ ಇತಿಹಾಸ ಪ್ರಜ್ಞೆಯೂ ಸತ್ತುಹೋಗಿ, ಆ ಕಾಲದಲ್ಲಿ ಹುಟ್ಟಿದ ಹಲವು ಕೃತಿಗಳು ಗೆದ್ದಲು ಹುಳುವಿನ ಹೊಟ್ಟೆ ಸೇರುತ್ತಿರುವುದು ಶೋಚನೀಯ ಸಂಗತಿ. ಅಭಿಮಾನಿಗಳು ಸ್ವಲ್ಪ ಶ್ರಮವಹಿಸಿ ಸಂಗ್ರಹಕ್ಕೆ ಕೈಹಾಕಿದರೆ ಕತ್ತಲಲ್ಲಿರುವ

---

[16] ಹಾಗಲ್ವಾಡಿ, ಬಿಜ್ಜಾವರ, ಹೊಳಲ್ಕೆರೆ, ತರೀಕೆರೆ, ಕಂದಿಕೆರೆ, ಸಂತೆಬೆನ್ನೂರು, ಚಿತ್ತೂರು, ಕೆಳದಿ, ಸ್ವಾದಿ, ಬೀಳಗಿ, ಬಂಕಾಪುರ, ಹರಪನಹಳ್ಳಿ, ಕೊಡಗು, ಪುಂಗನೂರು ಇತ್ಯಾದಿ.

ಅವೆಷ್ಟೋ ಕನ್ನಡ ಕೃತಿಗಳು ಬೆಳಕು ಕಂಡಾವು. ಇದರಿಂದ ಮುಂದಿನ ಸಂಶೋಧಕರಿಗೆ ಅನುಕೂಲವಾಗುವುದಲ್ಲದೆ, ಇದು ನಮ್ಮ ನೆಲ, ನಮ್ಮ ಜಲ, ಇದು ನಮ್ಮ ಸಾಹಿತ್ಯ, ನಮ್ಮ ಸಂಸ್ಕೃತಿ–ಎಂಬ ಅರಿವು ನಮ್ಮ ಜನತೆಯಲ್ಲಿ ಮೂಡಬಹುದು. ಸಂಶೋಧನೆಯ ಅರ್ಥ ಯಾರೂ ಕಾಣದ್ದನ್ನು ಕಾಣಿಸುವುದು ಎಂದಲ್ಲ; ಇರುವುದನ್ನೇ ಒಂದೆಡೆಗೆ ಸಂಗ್ರಹಿಸಿ ಸಕಾರಣವಾಗಿ ವಿಸ್ತರಿಸಿ ತೋರಿಸುವುದೂ ಆಗಿದೆ. ಏಕೆಂದರೆ "ಸಂಶೋಧನೆಯು ಕುತೂಹಲದಲ್ಲಿ ಹುಟ್ಟಿ, ಜ್ಞಾನದಲ್ಲಿ ಪರ್ಯವಸಾನ ಹೊಂದುವ ನೈಸರ್ಗಿಕ ಅರ್ಥಾತ್ ಪ್ರಾಮಾಣಿಕ ಪ್ರವೃತ್ತಿ".[17]

---

[17] ಆರ್ ವ್ಹಿ. ಜಾಗೀರದಾರ, ಕರ್ನಾಟಕ ಜನಜೀವನ, ಮೊದಲ ಮಾತು. ಪು. 6.

# I. ಪೀಠಿಕೆ

ನಿಸರ್ಗ ರಮಣೀಯತೆಗೆ ನೆಲೆವೀಡಾದ ಮಲೆನಾಡಿನ ಮಡಿಲಲ್ಲಿ ಶೋಭಿಸುವ ಒಂದು ಪುಟ್ಟ ಗ್ರಾಮ ಕೆಳದಿ. ಇದು ಈಗಿನ ಶಿವಮೊಗ್ಗಾ ಜಿಲ್ಲೆಯ ಸಾಗರ ತಾಲ್ಲೂಕಿನಲ್ಲಿದೆ. ಸುಮಾರು ಇನ್ನೂರು ವರ್ಷಗಳ ಹಿಂದೆ ಇಂದಿನ ಈ ಹಳ್ಳಿ ವೈಭವದ ರಾಜಧಾನಿಯಾಗಿ ಮೆರೆದಿತ್ತು. ಮಲವರೆಂಬ ವೀರಶೈವರು ಆಳಿದ್ದರಿಂದ ಇದಕ್ಕೆ 'ಮಲ್ಲ ಸಾಮ್ರಾಜ್ಯ'[1] ವೆಂಬ ಖ್ಯಾತನಾಮವಿದೆ. ಮೊದಲು ಕೆಳದಿಯಲ್ಲಿ ಸ್ಥಾಪಿತವಾದ ಸಾಮ್ರಾಜ್ಯವು ಇಕ್ಕೇರಿಗೂ, ಅನಂತರ ಬಿದನೂರಿಗೂ ತನ್ನ ರಾಜಧಾನಿಯನ್ನು ಬದಲಿಸಿಕೊಂಡಿತು.[2] ಉತ್ತರಕ್ಕೆ ಈಗಿನ ಮಿರ್ಜಾನ್ ನದಿ, ಈಶಾನ್ಯಕ್ಕೆ ಮಾಸೂರು ಮತ್ತು ಹೊಳಲ್ಕೆರೆ, ಪೂರ್ವಕ್ಕೆ ಚಿಕ್ಕನಾಯಕನಹಳ್ಳಿ, ದಕ್ಷಿಣಕ್ಕೆ ಮಲ್ಲಿಪಟ್ಟಣ, ಪಶ್ಚಿಮಕ್ಕೆ ಆಸಮುದ್ರಾಂತವಾದ ಭೂಭಾಗ—ಇಷ್ಟು ಸುವಿಸ್ತಾರವಾದ ರಾಜ್ಯ

---

[1]. ಶಿವರತ್ನಾಕರ V, I, 6 ; Rice, Mysore II, p. 431 ; ಶ್ರೀ ಹಾಲಪ್ಪಗೌಡ, ಚನ್ನಬಸಪ್ಪಗೌಡ, ಗುಪ್ಪಿಮಾಸ್ತರ, "ಮರೆತುಹೋದ ಮಲ್ಲಸಾಮ್ರಾಜ್ಯ"; ವೀರಶೈವಾನಂದ ಚಂದ್ರಿಕಾ I. 16 ; ಕೆಳದಿ ರಾಜಾಭ್ಯುದಯಮ್, ಪು. 9.

[2]. ಈ ಬಗ್ಗೆ ವಾದ ವಿವಾದವಿದೆ :

i) ಕ್ರಿ. ಶ. 1639ರಲ್ಲಿ ವೀರಭದ್ರನಾಯಕನ ಕಾಲದಲ್ಲಿ ಇಕ್ಕೇರಿಯಿಂದ ಬಿದನೂರಿಗೆ ರಾಜಧಾನಿ ಬದಲಾಯಿತು—ಎಂದು ಕೆಳದಿನೃಪವಿಜಯವೂ (ಪು. 98), ರೈಸ್ ಸಾಹೇಬರೂ (M. C. I. - P. 156), ಪೀಟ್ರೊ ಡೆಲ್ಲಾವಿಲ್ಲೆಯೂ (Travels - P. 168) ಹೇಳಿದರೆ,

ii) ಕ್ರಿ. ಶ. 1645–46ರಲ್ಲಿ, ಎಂದು ಬುಕ್‌ನನ್ ಸಾಹೇಬರೂ,

iii) 1646ರಲ್ಲಿ ವೆಂಕಟಪ್ಪನ ಕಾಲದಲ್ಲಿ ಎಂದು ವಿಲ್ಕ್ಸ್ ಸಾಹೇಬರೂ ಹೇಳುತ್ತಾರೆ. ಆದರೆ–

ವಿಲ್ಕ್ಸ್‌ರವರ ಅಭಿಪ್ರಾಯ ತಪ್ಪು. ಏಕೆಂದರೆ ವೆಂಕಟಪ್ಪನ ಕಾಲ ಮುಗಿದದ್ದು 1629 ರಲ್ಲಿ ಎಂದು-ಚಿಟ್ನೀಸ್‌ರವರು ಸ್ಪಷ್ಟಪಡಿಸಿದ್ದಾರೆ. "Keladi Administration" P. 202.

ಕೆಳದಿ.[3] ಸುಮಾರು ಇಪ್ಪತ್ತು ಮಂದಿ ರಾಜ ರಾಣಿಯರಿಂದ ಸುಮಾರು ಎರಡೂ ಮುಕ್ಕಾಲು ಶತಮಾನಗಳ ಕಾಲ (ಕ್ರಿ. ಶ. ೧೫೦೦-೧೭೬೩) ಆಳಿಸಿಕೊಂಡ ಭಾಗ್ಯ ಇದರದ್ದಾಗಿದೆ. ಇದನ್ನಾಳಿದವರಿಗೆ ಇಕ್ಕೇರಿ ನಾಯಕರು, ಬಿದನೂರ ಪ್ರಭುಗಳು ಎಂಬ ಪರ್ಯಾಯ ನಾಮಗಳಿದ್ದರೂ, ಕೆಳದಿಯ ಅರಸರು ಎಂದು ಕರೆಯುವುದೇ ರೂಢಿ ಏಕೆಂದರೆ ಈ ರಾಜ್ಯದ ಎಲ್ಲ ಅರಸರ ಶಾಸನಗಳೂ ಕೆಳದಿ ಅರಸರು ಅಥವಾ ನಾಯಕರು ಎಂದೇ ಹೇಳುತ್ತವೆ.[4]

ಮಲೆನಾಡು ವೇದಗಳ ಕಾಲದಿಂದಲೂ ಋಷ್ಯಾಶ್ರಮಗಳ ಬೀಡಾಗಿತ್ತೆಂದು ಪ್ರತೀತಿಯಿದೆ. ಶೃಂಗೇರಿಯಲ್ಲಿ ತುಂಗಾತೀರದಲ್ಲಿ ವಿಭಾಂಡಕ ಋಷಿಗಳ ಆಶ್ರಮವೂ ಕಾಂಡ್ಯದಲ್ಲಿ ಭದ್ರಾತೀರದಲ್ಲಿ ಮಾರ್ಕಂಡೇಯ ಮುನಿಗಳ ಆಶ್ರಮವೂ, ಬಾಬಾಬುಡನ್ ಪರ್ವತದಲ್ಲಿ ದತ್ತಾತ್ರೇಯರ ಆಶ್ರಮವೂ, ಸೊರಬದಲ್ಲಿ ಜಮದಗ್ನಿಗಳ ಆಶ್ರಮವೂ ಇದ್ದುವೆಂತಲೂ, ತೀರ್ಥಹಳ್ಳಿಯು ಪರಶುರಾಮರ ಪುಣ್ಯಕ್ಷೇತ್ರವೆಂದೂ ಸ್ಥಳ ಪುರಾಣಗಳು ತಿಳಿಸುತ್ತವೆ. ಇದು ಕಾಮ್ಯಕವನವಾಗಿದ್ದರೂ ಪ್ರವಾಸಿಗರಿಗೆ ಇಲ್ಲಿ ಭೀತಿಯಿರಲಿಲ್ಲ. "ಈ ದೇಶದ ಜನತೆ ಧಾರ್ಮಿಕರು, ಕಳವು, ಕೊಲೆ ಮೊದಲಾದವು ಅವರಲ್ಲಿ ಕೇಳಿಬರುತ್ತಲೇ ಇರಲಿಲ್ಲ. ಯಾವ ಆಗಂತುಕನೇ ಆಗಲಿ ನಿರ್ಭೀತಿಯಿಂದ ಪ್ರಯಾಣ ಮಾಡಬಹುದಿತ್ತು. ಆತ ಹೋಗುವುದೆಲ್ಲಿಗೆ ? ಎಂದು ಯಾರೂ ವಿಚಾರಿಸುತ್ತಿರಲಿಲ್ಲ."[5]

ಕೆಳದಿಯ ನಿಸರ್ಗ ಸೌಂದರ್ಯ ಅನ್ಯಾದೃಶ್ಯವಾದುದು. "ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರಮಾದ."[6] ಬನವಾಸಿಯ ಭವ್ಯ ಬನಸಿರಿಯ ಸೆರಗು ಈ ನಾಡು. ಕರ್ನಾಟಕ ಕವಿಪರಮೇಶ್ವರಿ, ವಿದ್ವತ್ಸಭಾ ಸರಸ್ವತಿ, ಕೆಳದೀ ಗಂಗಾದೇವಿಯು ಮುಕ್ತಕಂಠದಿಂದ ಹೊಗಳಿದ್ದಾಳೆ.[7] ಅಂತೆಯೇ ಕೆಳದಿಯ

---

[3]"The Keladi Kingdom at its zenith extended upto Goa in the north and Cannanore in the south and included the present districts of Shimoga and portions of Hassan"- Karnataka Through the Ages, P. 669.

[4]Rice, E. C. VI, Introduction, P. 22.

[5].Hamilton, A New Account I, P. 158.

[6] ಪಂಪ, ವಿಕ್ರಮಾರ್ಜುನ ವಿಜಯ; ಆಶ್ವಾಸ 4, ಪದ್ಯ 29.

[7] ಕೆಳದಿ ರಾಜಾಭ್ಯುದಯಮ್, ಪು. 9-10.

ಸಂಪನ್ನ ಕವಿ ಲಿಂಗಣ್ಣನೂ ಸಹ—

ಆ ಕರ್ನಾಟಕ ದೇಶದ
ಭೂಕಾಂತೆಯ ವಕ್ತ್ರ ಪದ್ಮಮೆನೆ ರಾಜಿಸುಗುಂ
ಶ್ರೀ ಕರಮೆನಿಸಿಯಜಸ್ರಂ
ನಾಕವನಿಳಿಗೈದ ಕೆಳದಿಯೆಂದೆನಿಪ ಪುರಂ ||[8]

—ಎಂದು ಬಣ್ಣಿಸಿದ್ದಾನೆ. "ಸಿರಿ ಸರಸ್ವತಿಯರಿಗೆ ಕೇವಲ ನಾಟ್ಯರಂಗವೆನಿಸಿದ ಹಾಗೂ ದೈವದತ್ತವಾದ ಸುವೃಷ್ಟಿ ವೈಭವದಿಂದ ಸುಭಿಕ್ಷವಾದ 'ಕೆಳದಿ' ಎಂಬ ದೇಶವು ಸ್ವರ್ಗಕ್ಕಿಂತ ಮೀರಿದುದೆಂದು ಪ್ರಸಿದ್ಧವಾಗಿದೆ" ಎನ್ನುತ್ತಾನೆ ಕವಿ ಷಡಕ್ಷರಿ.[9] ತಿರುಮಲಭಟ್ಟನು ತನ್ನ ಕರ್ನಾಟಕ ಶಿವಗೀತೆಯಲ್ಲಿ ಇಕ್ಕೇರಿಯ ವರ್ಣನೆಯನ್ನು ಮಾಡಿದ್ದಾನೆ.[10]

ಇದೇ ರೀತಿ ಹಲವು ವಿದೇಶೀ ಪ್ರವಾಸಿಗರು ಈ ಮಲೆನಾಡಿನ ಪ್ರಕೃತಿ ಸೌಂದರ್ಯವನ್ನು ಕೊಂಡಾಡಿದ್ದಾರೆ.[11] ಪ್ರಸಿದ್ಧ ಜಾನಪದ ಕವಿ ಮೂಗೂರು ಮಲ್ಲಪ್ಪನವರು ಮೆಚ್ಚಿ ಹೊಗಳಿದ ಜೋಗದ ಜಲಪಾತವು[12] ಕ್ರಿ. ಶ. ೧೬೨೩ರಲ್ಲಿ ವೆಂಕಟಪ್ಪ ನಾಯಕನ ಆಸ್ಥಾನಕ್ಕೆ ಬಂದಿದ್ದ ಇಟಲಿ ಪ್ರವಾಸಿಯನ್ನು ಮೋಹಮುಗ್ಧನನ್ನಾಗಿಸಿದೆ. ಆತನು, "ಯಾವ ಕೃತಕ ಕಟ್ಟಡದ ಸುಣ್ಣ ಬಣ್ಣವೂ ಇಲ್ಲದ ನೈಸರ್ಗಿಕವಾದ ಸೌಂದರ್ಯದಿಂದ ತುಂಬಿರುವ ಗೆರುಸೊಪ್ಪೆಯು ನಾನು ನನ್ನ ಜೀವಿತದಲ್ಲಿ ಕಂಡ ಅತಿ ಮನೋಹರವಾದ ನದಿ"[13] ಎಂದಿದ್ದಾನೆ. ಹೀಗೆ ಬನಸಿರಿಯ ಚೆಲುವಿಂಗೆ ಸಿಲುಖಿಂಗೆ ನೆಲೆಯೆನಿಸ್ಪಾ.... ಮಲ್ಲದೇಶವನ್ನು ಹೊಗಳದ ನಾಲಗೆಯಿಲ್ಲ.

---

[8] ಕೆ.ನೃ.ವಿ.ಪು. 41.

[9] ಧರ್ಮಶಿರೋಮಣಿ, I ಪರಿಚ್ಛೇದ, ಪದ್ಯ 10.

[10] ಶಿವಗೀತೆ, ಪು.3

[11] J.B.B.R.A.S. XIX, P. 250; Della Valle, Travels II, PP. 221-22; Mundy, Travels, III, Pt. I, P. 76

[12] ಮೂಗೂರು ಮಲ್ಲಪ್ಪನವರ ಸಂಕ್ಷಿಪ್ತ ಜೀವನ (ಹಸ್ತಪ್ರತಿ), ಎಸ್. ಭೀಮಪ್ಪ, ಶಿರಾಳಕೊಪ್ಪ ಇವರಲ್ಲಿದೆ. ಮಾನವನಾಗಿ ಹುಟ್ಟಿದ ಮ್ಯಾಲೆ ಏನೇನ್ ಕಂಡೀ'—ಎಂಬ ಗೀತೆ.

[13] Della Valle, Travels P. 220.

# II. ಸ್ಥಾಪನೆ

## ೧. ಚೌಡಪ್ಪನಾಯಕ (ಕ್ರಿ. ಶ. ೧೫೦೦–೧೫೧೪)

ಕೆಳದಿಯನ್ನಾಳಿದವರ ಪೂರ್ವಜರು ಮಣ್ಣಿನ ಮಕ್ಕಳು. ಕೃಷಿಯೇ ಅವರ ಕಾಯಕ. ಆದರೆ ದೈವಯೋಗದಿಂದಲೂ, ಸ್ವಸಾಮರ್ಥ್ಯದಿಂದಲೂ ಅವರು ಸಾಮ್ರಾಜ್ಯ ಸ್ಥಾಪಕರೆನ್ನಿಸಿಕೊಳ್ಳುವ ಕೀರ್ತಿಗೆ ಕಾರಣರಾದರು.

ಹಲವು ದಾಕ್ಷಿಣಾತ್ಯ ರಾಜಮನೆತನಗಳಂತೆ ಕೆಳದಿಯ ಅರಸು ಮನೆತನದ ಮೂಲವು ಇನ್ನೂ ಚಿದಂಬರ ರಹಸ್ಯವಾಗಿಯೇ ಉಳಿದಿದೆ. ಈ ಬಗ್ಗೆ ಅಧಿಕಾರ ವಾಣಿಯಿಂದ ಹೇಳಲು ನಮಗೆ ಯಾವ ಶಾಸನವೇ ಮೊದಲಾದ ಪ್ರಬಲ ಆಧಾರಗಳಿಲ್ಲ. ಆದರೂ ಉಪಲಬ್ಧವಿರುವ ಹಲವು ದೇಶೀಯ ಗದ್ಯ ಗ್ರಂಥಗಳ [14] ಹಾಗೂ ಶ್ರೇಷ್ಠ ಸಾಮ್ರಾಟನಾಗಿ ಮೆರೆದ ಬಿದನೂರ ಪ್ರಭು ಬಸವರಾಜನಿಂದಲೇ ವಿರಚಿತವಾದ 'ಶಿವತತ್ತ್ವ ರತ್ನಾಕರ' ಮತ್ತು ಕೆಳದಿಯ ಆಸ್ಥಾನ ಕವಿ ಲಿಂಗಣ್ಣನ 'ಕೆಳದಿ ನೃಪವಿಜಯ' ಇವುಗಳನ್ನು ಮೂಲಾಧಾರವಾಗಿಟ್ಟುಕೊಂಡು ಕೆಳದೀ ರಾಜ್ಯ ಸ್ಥಾಪನೆಯ ಬಗ್ಗೆ ಸ್ವಲ್ಪ ಅವಲೋಕನ ನಡೆಸಬಹುದು.

ಪಳ್ಳಿಬೈಲು ಮಲೆನಾಡಿನ ಮಡಿಲಿನಲ್ಲಿದ್ದ ಒಂದು ಪುಟ್ಟ ಗ್ರಾಮ. ಅಲ್ಲಿದ್ದ ಶಿವಾಚಾರ ಸಂಪನ್ನರಾದ ಬಸವಪ್ಪ ಮತ್ತು ಬಸವಾಂಬೆ ಎಂಬ ರೈತ ದಂಪತಿಗಳಿಗೆ

---

[14] ಕೆಳದಿ ಅರಸಿನವರ ಚರಿತ್ರೆ, ಜೋಯಿಸರ ಮನೆತನದ ಕೆಳದಿಸಂಸ್ಥಾನದ ಚರಿತ್ರೆ, (ಈ ಎರಡೂ ಹಸ್ತಪ್ರತಿಗಳು ಕೆಳದಿ ಗುಂಡಾಜೋಯಿಸರ ಬಳಿ ಇವೆ.) ಕೆಳದಿ ರಾಯಪದ್ಧತಿ, ಇಕ್ಕೇರಿ ಅರಸರ ವಂಶಾವಳಿ ಇತ್ಯಾದಿ ಕೃತಿಗಳು. ಇವೆಲ್ಲವೂ ಎ. ಆರ್. ಕೃಷ್ಣ ಶಾಸ್ತ್ರಿಗಳವರು ಕೆಳದಿ ನೃಪವಿಜಯದಲ್ಲಿ ಹೇಳಿರುವಂತೆ "ಸ್ವಲ್ಪ ಹೆಚ್ಚು ಕಡಿಮೆ ಒಂದೇ ರೀತಿಯ ರಚನೆಗಳು." ಬಹುಶಃ ಇವು ಶಿವತತ್ತ್ವ ರತ್ನಾಕರ, ಇಲ್ಲವೇ ಕೆಳದಿನೃಪವಿಜಯ ಗ್ರಂಥಗಳನ್ನು ಆಧರಿಸಿ ಬರೆದವುಗಳೆಂದು ತೋರುತ್ತದೆ. ಆದರೆ ಕೆಲವು ತಮ್ಮ ಅನುಕೂಲಕ್ಕೆ ತಕ್ಕಂತೆ ಬರೆದುಕೊಂಡವುಗಳೆಂತಲೂ ಹೇಳಬಹುದು.

ನಾಲ್ಕುಜನ ಮಕ್ಕಳು. ಕಾಲಕ್ರಮದಲ್ಲಿ ಬಸವಪ್ಪನು ಶಿವೈಕ್ಯನಾಗುತ್ತಾನೆ.[15] ಚೌಡಪ್ಪ ಮತ್ತು ಅವನ ತಮ್ಮ ಭದ್ರಪ್ಪ ಇವರನ್ನು ಬಿಟ್ಟು, ಉಳಿದ ಇಬ್ಬರು ಮಕ್ಕಳೂ ತಮ್ಮ ತಂದೆಯ ಹಾದಿಯನ್ನೇ ಹಿಡಿಯುತ್ತಾರೆ.[16] ಚೌಡಪ್ಪ ಮತ್ತು ಭದ್ರಪ್ಪರನ್ನು ಸಾಕಿ ಸಲಹಿ ಅವರು ಪ್ರವರ್ಧಮಾನಕ್ಕೆ ಬಂದ ಮೇಲೆ ತಾಯಿ ಬಸವಾಂಬೆಯು ಇಬ್ಬರಿಗೂ ಮದುವೆ ಮಾಡಿ ಸುಖದಿಂದಿರುತ್ತಾಳೆ. ಒಂದು ದಿನ ಚೌಡಪ್ಪನು ತನ್ನ ಗದ್ದೆಯಲ್ಲಿ ಕೆಲಸ ಮಾಡಿ, ಆಯಾಸಗೊಂಡು ಒಂದು ಮಾವಿನ ಮರದಡಿಯಲ್ಲಿ ಮಲಗಿದ್ದಾಗ ಸರ್ಪವೊಂದು ಅವನ ತಲೆಯ ಮೇಲೆ ಹೆಡೆ ಎತ್ತಿ ಆಡುತ್ತಿತ್ತಂತೆ. ಮಗನನ್ನು ಹುಡುಕಿಕೊಂಡು ಬಂದ ತಾಯಿಯು ಭಯಚಕಿತಳಾಗಲು ಸರ್ಪವು ಸ್ವಲ್ಪ ಹೊತ್ತಿನನಂತರ ಅತ್ತ ಹರಿದು ಹೋಗುತ್ತದೆ.[17] ತತ್‌ಕ್ಷಣವೇ ಮಗನನ್ನು ಎಬ್ಬಿಸಿ ನಡೆದದ್ದನ್ನೆಲ್ಲಾ ವಿವರಿಸುತ್ತಾಳೆ. 'ಪೂರ್ವ ಪುಣ್ಯವೇ ಕಾಪಾಡುವುದು' ಎಂಬ ಮಾತಿನ ಸತ್ಯತೆಯನ್ನು ಕುರಿತು ಮಾತನಾಡುತ್ತಾ ಮನೆಗೆ ತೆರಳುತ್ತಾರೆ.

---

[15] ಇವರಿಗೂ ಪೂರ್ವದ ಇದೇ ವಂಶಕ್ಕೆ ಸೇರಿದ ಇಬ್ಬರ ಹೆಸರುಗಳು ಸಿಗುತ್ತವೆ—

ದೇವಗೊಂಡ

§

ಗೋಪಗೊಂಡ

M.A.R. 1928, No. 65; ಅನುಬಂಧ 18 ನೋಡಿ. ಶಿವರತ್ನಾಕರ. V, II, 29 ಹಾಗೂ ಕೆಳದಿ ರಾಜಾಭ್ಯುದಯಮ್, ಪು. 10-12, ಮೇಲಿನ ಈ ಎರಡು ಕೃತಿಗಳನ್ನು ಬಿಟ್ಟರೆ, ಬೇರೆಲ್ಲೂ ಬಸವಪ್ಪ ಬಸವಾಂಬೆಯರಿಗೆ ನಾಲ್ಕು ಜನ ಮಕ್ಕಳುಗಳಿದ್ದರೆಂದಿಲ್ಲ. ಮಿಕ್ಕ ಎಲ್ಲಾ ಕೃತಿಗಳೂ ಚೌಡಪ್ಪ ಭದ್ರಪ್ಪರೆಂಬ ಇಬ್ಬರು ಮಕ್ಕಳಿದ್ದರು ಎಂದೇ ಹೇಳುತ್ತವೆ. ವೀರಶೈವಧರ್ಮಶಿರೋಮಣಿಯು (ಪ್ರಥಮ ಪರಿಚ್ಛೇದದಲ್ಲಿ) ಚೌಡಪ್ಪನನ್ನು ಮಾತ್ರ ಹೆಸರಿಸಿ, ಭದ್ರಪ್ಪನನ್ನು ಕೈಬಿಟ್ಟಿದೆ. ಆದರೆ ಕೆಳದಿನೃಪವಿಜಯವು "ಚೌಡಪ್ಪಂ, ಭದ್ರಪ್ಪನೆಂಬಾಪುಣ್ಯಪುರುಷರುಜ್ವಲ ರೂಪಾನ್ವಿತರೆನಿಸಿ ಮೆರೆದರ್ ಇನ-ಶಶಿಗಳವೊಲ್- (ಪು.9) ಎಂದು ಹೇಳಿದ್ದರೆ, ಗಂಗಾದೇವಿಯ ಕೆಳದಿ ರಾಜಾಭ್ಯುದಯಮ್" "ಪುರುಷಾರ್ಥದಂತೆ ನಾಲ್ಕಾಗಿಯೊಪ್ಪುವ ನಂದನರಂ" (ಪು.10) ಎಂದು ಹೇಳಿದೆ. "ಅವರಿಗೆ ಚೌಡಪ್ಪ ಭದ್ರಪ್ಪ ಎಂಬ ಇಬ್ಬರು ಮಕ್ಕಳಿದ್ದರು" ಎಂದು ಸದಾಶಿವ ಒಡೆಯರ (ಜೀವನಕಲೆ, ಪು. 56) ಹೇಳುತ್ತಾರೆ.

[16]. ಶಿವರತ್ನಾಕರ V, II 30. ಕೆಳದಿರಾಜಾಭ್ಯುದಯಮ್, ಪು. 10.

[17] ಕೆಳದಿ ಗುಂಡಾಜೋಯಿಸರ ಪೂರ್ವಿಕರು ಬರೆದಿರುವ ಒಂದು ಹಸ್ತಪ್ರತಿಯನ್ನುಳಿದು ಮಿಕ್ಕೆಲ್ಲ ಗ್ರಂಥಗಳೂ ಸರ್ಪದೃಶ್ಯದ ಬಗ್ಗೆ ಇದಿಷ್ಟೇ ವಿಚಾರ ತಿಳಿಸುತ್ತವೆ. ಕೆಳದಿ ನೃಪವಿಜಯ ಮೊದಲಾದವುಗಳಲ್ಲಿ ಆ ಸರ್ಪವು ಹರಿದು ಹೋಗಿ ಬಿಚ್ಚಿದ ಹೆಡೆಯಿಂದ ನೆಲವನ್ನು ಬಡಿದು, ನಿಧಿ ಇರುವ ಸ್ಥಳವನ್ನು ಸೂಚಿಸುತ್ತದೆ ಎಂದಿದೆ. (ಪು. 12) ಆದರೆ ಶಿವತತ್ತ್ವರತ್ನಾಕರದಲ್ಲಿ ನಿಧಿ ತೋರುವ ವಿಷಯ ಇಲ್ಲ. ಜೋಯಿಸರ ಹಸ್ತಪ್ರತಿಯಲ್ಲಿ ಈ ಸರ್ಪಸಂಜ್ಞೆಯನ್ನು ಜ್ಞಾನಿಗಳಾದ ವೆಂಕಟಾದ್ರಿ ಜೋಯಿಸರು ಬಸವಾಂಬೆ ಮತ್ತು ಚೌಡಪ್ಪರಿಗೆ ತಿಳಿಸಿ, ಸಮಾಧಾನಪಡಿಸುತ್ತಾರೆ—ಎಂದಿದೆ. (ಕೆಳದಿಯ ಸಂಕ್ಷಿಪ್ತ ಇತಿಹಾಸ, ಪು. 3-4.)

ಹೀಗಿರಲು ಒಂದು ದಿನ ಚೌಡಪ್ಪನ ಮನೆಯ ಹಸುವು ಸಂಜೆ ಹಾಲು ಕರೆಯದಿರಲು, ಮೂರನೆಯ ದಿನ ಗೋಪಾಲಕನು ಪರೀಕ್ಷಿಸಲು, ಅದು ಒಂದು ಮೆಳೆಯಲ್ಲಿ ತನಗೆ ತಾನೇ ಹಾಲು ಕರೆದುಕೊಳ್ಳುತ್ತಿತ್ತು.[18] "ಈ ಕೌತುಕವನ್ನು ಚೌಡಪ್ಪನು ಕಣ್ಣಾರೆ ಕಂಡು ಶೋಧಿಸಲಾಗಿ ಅಲ್ಲಿ ಶಿವಲಿಂಗವೊಂದು ಕಂಗೊಳಿಸಿತು. ಮತ್ತಿನ್ನೇನಿರುವುದೋ ಎಂದು ಅಗೆಯುತ್ತಿರುವಾಗ ಅಲ್ಲಿ ಶಿಲಾಶಾಸನವೊಂದು ದೊರೆಯಿತು. ಅದರಿಂದ ಆ ಶಿವಲಿಂಗವು ಶ್ರೀ ರಾಮೇಶ್ವರಲಿಂಗವೆಂದು ತಿಳಿಯಿತು.[19] ಚೌಡಪ್ಪನು ನಿತ್ಯವೂ ಆರಾಧಿಸುತ್ತಿರಲು ಶ್ರೀ ರಾಮೇಶ್ವರನ ಅನುಗ್ರಹದಿಂದ ನಿಧಿ ಪ್ರಾಪ್ತಿಸೂಚಕವಾದ ಸ್ವಪ್ನವು ಬೆಳಗಿನ ಜಾವದಲ್ಲಿ ಆಯಿತು. ಪ್ರಾತಃಕಾಲ ಎದ್ದು ಸ್ವಪ್ನಫಲವನ್ನು ಪರಿಶೀಲಿಸಲು ಅಪಾರ ಸಂಪತ್ತಿನ ನಿಧಿಯೇ ದೊರೆಯಿತು."[20]

ಹೊನ್ನು ದೊರೆತದ್ದರಿಂದ ಚೌಡಪ್ಪನ ಪೌರುಷಕ್ಕೆ ಸಾಣೆ ಕೊಟ್ಟಂತಾಯಿತು. ಅಂದಿನ ಕರ್ನಾಟಕದ ಏಕೈಕ ಮಹಾಸಾಮ್ರಾಜ್ಯವಾಗಿ ಮೆರೆಯುತ್ತಿದ್ದ ವಿಜಯನಗರದ

---

[18] ಕೆ.ನೃ.ವಿ.ವು "ಸೀಗೆವಳ್ಳಿ ಎಂಬ ತಾಣದಲ್ಲಿ ಸೀಗೇಮೆಳೆಯ ಮಧ್ಯದಲ್ಲಿ...." ಎಂದು ತಿಳಿಸುತ್ತದೆ. (ಪು. 10). ಆದರೆ ಶಿವತತ್ತ್ವರತ್ನಾಕರದಲ್ಲಿ ಈ ಹೆಸರಿಲ್ಲ.

[19] ಕೆ.ನೃ.ವಿ. ದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಚೌಡಪ್ಪನಿಗೆ — ಶ್ರೀಮತ್ಪರಮೇಶ್ವರನೇ ವೃದ್ಧ ಜಂಗಮರೂಪದಲ್ಲಿ ಪ್ರಸನ್ನನಾಗಿ, ಕೆಳದಿ ಪುರದೆಡೆಯ ಸೀಗೇವಳ್ಳಿಯೆಂಬ ತಾಣದಲ್ಲಿ ಸೀಗೇಮೆಳೆಯ ಮಧ್ಯದಲ್ಲಿ ರಾಮೇಶ್ವರನೆಂಬ ಮಹಾದಿವ್ಯಲಿಂಗ ಇರುವುದಾಗಿಯೂ, ಅದನ್ನು ನಿತ್ಯವೂ ಹಾಲು ಕರೆವ ಹಸುವಿನಿಂದ ಗುರುತಿಸಬಹುದೆಂತಲೂ, ಅದನ್ನು ಸದ್ಭಕ್ತಿಯಿಂದ ಅರ್ಚಿಸಿದ್ದಾದರೆ 'ಅಖಂಡ ಪೃಥ್ವೀಪತಿತ್ವ'ವು ಕೈಸಾರುವುದೆಂತಲೂ ಸ್ವಪ್ನಾದೇಶವಾಗುತ್ತದೆ. ಅದರಂತೆಯೇ ಆ ರಾಮೇಶ್ವರಲಿಂಗವನ್ನು ಕಂಡು ಭಯಭರಿತ ಭಕ್ತಿಯಿಂದ ಪೂಜಿಸುತ್ತಾನೆ. —ಕೆ.ನೃ.ವಿ.ಪು. 10.

[20] ಶಿವರತ್ನಾಕರ V, II, 50; ಆದರೆ — ಕೆ.ನೃ.ವಿ. ಮೊದಲಾದುವುಗಳಿಗಿಂತ ಶಿವತತ್ತ್ವರತ್ನಾಕರ ಎತ್ತಿಕೊಂಡಿರುವ ಕಥೆಯ ಧಾಟಿ ಚೆನ್ನಾಗಿದೆ. ಒಂದನೆಯದಾಗಿ ಸರ್ಪ ಸಂಜ್ಞೆಯು ಅವರ ಪೂರ್ವಜನ್ಮದ ಪುಣ್ಯಪ್ರಭಾವ; ಎರಡನೆಯದಾಗಿ, ನಿಧಿ ದೊರೆತದ್ದು ಈ ಭವದ ಪೂಜಾಫಲ; ಮೂರನೆಯದಾಗಿ, ಚೌಡಪ್ಪನು ಗ್ರಾಮಾಧಿಪತ್ಯದಿಂದ ಮಂಡಲಾಧಿಪತ್ಯಕ್ಕೇರು ತ್ತಾನೆ—ಹೀಗೆ ಇತಿಹಾಸ ರಚನೆಗೆ ಸಹಕಾರಿಯಾಗಿ ಚೌಡಪ್ಪನ ಅಭ್ಯುದಯದ ಹಲವು ಮೆಟ್ಟಿಲುಗಳನ್ನು ಕಲಾತ್ಮಕವಾಗಿ ಚಿತ್ರಿಸಲಾಗಿದೆ. ಆದ್ದರಿಂದಲೇ ಇಲ್ಲಿ ಶಿವರತ್ನಾಕರವನ್ನೇ ವಿಶೇಷವಾಗಿ ಅನುಸರಿಸಿದ್ದೇವೆ; ಮರಿತೋಂಟದಾರ್ಯನ ವೀರಶೈವಾನಂದ ಚಂದ್ರಿಕೆಯೂ (ಕ್ರಿಯಾಕಾಂಡ) ಸಹ ಶಂಭುಪ್ರಸಾದದಿಂದ ಸ್ವಪ್ನದಲ್ಲಿ ಕಂಡ ನಿಧಿ ವಾಸ್ತವದಲ್ಲಿ ದೊರೆಯಿತೆಂದು ತಿಳಿಸುತ್ತದೆ. —ವೀರಶೈವಾನಂದ ಚಂದ್ರಿಕಾ (ಕ್ರಿಯಾಕಾಂಡ) ಶ್ಲೋಕ 19.

ಸಾರ್ವಭೌಮನ ಕೃಪೆಗೆ ಪಾತ್ರನಾಗಿ ಚೌಡಗೌಡನು ಅಭ್ಯುದಯದ ಹಂತವನ್ನೇರಿದ. ಶ್ರೀ ರಾಮೇಶ್ವರನ ದಯೆಯಿಂದ 'ಗ್ರಾಮಾಧಿಪತ್ಯ'ವನ್ನು ಪಡೆದ ಚೌಡಪ್ಪನು, ಸ್ವಂತ ಸೇನೆಯೊಂದನ್ನು ಕಟ್ಟಿ ಶತ್ರುನಿಗ್ರಹದಲ್ಲಿ ತೊಡಗುತ್ತಾನೆ. ಈ ಸುದ್ದಿಯನ್ನು ವಿಜಯನಗರದ ಸಾರ್ವಭೌಮನು ಕೇಳಿ, ಚೌಡಪ್ಪನನ್ನು ಸಾದರದಿಂದ ಬರಮಾಡಿ ಕೊಂಡು, ಮಹಾಸಾಮ್ರಾಜ್ಯದ ಉತ್ತರದ ಗಡಿಯನ್ನು ಸಂರಕ್ಷಿಸುವ ಸಮರ್ಥಶಾಲಿ ಯೆಂದು ಭಾವಿಸಿ, 'ತುರಗಾಂದೋಳಿಕಾ ಛತ್ರ ಚಾಮರಾದಿ ವಿಭವಂಗಳುಮನುಚಿತ -ಮಾಡುಡುಗೊರೆ ತೊಡವು, ತಾಂಬೂಲಂಗಳನಿತ್ತು ಮನ್ನಿಸಿ, ಕೆಲವಶ್ವಪದಾತಿಗಳಧೀನ ದೊಳಿರ್ದು ಸಂಗಡಮೆಡೆಯಾಡಲೆಂದು ನಿಯಮಿಸಲ್' ಚೌಡಪ್ಪನು ದುಷ್ಟಮರ್ದನ ಶಿಷ್ಟವರ್ಧನ ನಿರತನಾಗಿ ಉತ್ತರೋತ್ತರ ಅಭ್ಯುದಯ ಪಡೆದನು. ಸುಪ್ರೀತನಾದ ಪ್ರಭುವು ಚಂದ್ರಗುತ್ತಿ, ಕೆಳದಿ, ಇಕ್ಕೇರಿ, ಪೆರ್ಬಯಲು, ಎಲಗಳಲೆ, ಮೋದೂರು, ಕಲಸೆ, ಲಾತವಾಡಿ ಈ ಎಂಟು ಮಾಗಣಿಗಳನ್ನು ಚೌಡಪ್ಪನಿಗೆ ಕೊಟ್ಟು, 'ರಾಜಲಾಂಛ ನೋಪಯುಕ್ತಮಾದ ಬಿರುದುಗಳುಮನಿತ್ತು, ಮನ್ನಿಸಿ ತದಾರಭ್ಯ ಕೆಳದಿ ಮೂಲ ಸಂಸ್ಥಾನದ ಮನ್ನೆಯ ಚೌಡಪ್ಪನಾಯಕನೆಂದು ಕರೆವುದೆಂದು ನಿಯಮಿಸಿ ಪ್ರಖ್ಯಾತಮಪ್ಪಂತು ನಾಲ್ಗಡೆಯೊಳಿರ್ಪ ಮನ್ನೆಯರ್ಗಂ ರಾಯಸಮಂ ಬರೆಸುತ್ತಾನೆ.[21] ಶಕವರ್ಷಂ ೧೪೨೨ನೆಯ ಸಿದ್ಧಾರ್ಥಿ ಸಂವತ್ಸರದ ಮಾಘಶುದ್ಧ ೩ ರಲ್ಲಿ (ಕ್ರಿ. ಶ. ೧೫೦೦ ಜನವರಿ ೮ ರಂದು) ಚೌಡಪ್ಪನಿಗೆ ಕೆಳದಿಯರಮನೆಯಲ್ಲಿ ಪಟ್ಟಾಭಿಷೇಕವೂ ನಡೆಯುತ್ತದೆ.[22]

ಸಾರ್ವಭೌಮಾದೇಶದಂತೆ ಮಲ್ಲದೇಶಾಧಿಪತಿಯಾದ ಚೌಡಪ್ಪನಾಯಕನು ಶ್ರೀ ರಾಮೇಶ್ವರ ದೇವರ ಗರ್ಭಗೃಹವನ್ನು ಶಿಲಾಮಯವಾಗಿಸಿ, ಪೂಜಾರ್ಥವಾಗಿ

---

[21] ಕೆ.ನೃ.ವಿ. ಪು 21-26

ಈ ಎಂಟು ಮಾಗಣಿಗಳ ವಿಚಾರ ಶಿವತತ್ತ್ವರತ್ನಾಕರದಲ್ಲಿ ಇಲ್ಲ. ಕೆ.ನೃವಿ. ಮೊದಲಾದ ಎಲ್ಲ ಕೃತಿಗಳಲ್ಲೂ ಇದೆ. ಆದರೆ ಕೆಳದಿ ಗುಂಡಾಜೋಯಿಸರ ಬಳಿ ಇರುವ "ಕೆಳದಿಯ ಅರಸಿನವರ ಚರಿತ್ರೆ" ಎಂಬ ಹಸ್ತಪ್ರತಿಯಲ್ಲಿ "ಮೋದೂರು" ಬಿಟ್ಟು ಹೋಗಿದೆ; ಚಂದ್ರಗುತ್ತಿ ಇದೆ. (ಹಸ್ತಪ್ರತಿ ಪು. 18) ಕೆ.ನೃ.ವಿ. ದ ಪ್ರಥಮಾಶ್ವಾಸದ 97ನೆಯ ಪದ್ಯದಲ್ಲಿ ಮಧ್ಯೆ ಗ್ರಂಥಪಾತವಾಗಿದೆ. ಆದರೆ ಅದೇ 95ನೆಯ ಪದ್ಯದ ಆಧಾರದಿಂದ ಬಿಟ್ಟಿರುವ ಭಾಗ ಚಂದ್ರ ಗುತ್ತಿಯೆಂದು ಊಹಿಸಿಕೊಳ್ಳಬಹುದಾಗಿದೆ; ಜನ್ಮಭೂಮಿ ಪತ್ರಿಕೆಯ ಸಂಪಾದಕರು ಇವುಗಳನ್ನೇ ಹೆಸರಿಸಿದ್ದಾರೆ. (ಜನ್ಮಭೂಮಿ 26-10-1928 ರಲ್ಲಿ ಪ್ರಕಟವಾದ 25ನೆಯ ಸಂಚಿಕೆ)

[22] ಕೆ.ನೃ.ವಿ. ಪು. 26

ಪಳ್ಳಿಬಯಲು ಮತ್ತಿತರ ಭೂಭಾಗಗಳನ್ನು ಶಿವಾರ್ಪಣ ಮಾಡಿಬಿಡುತ್ತಾನೆ.[23] ಇಲ್ಲಿಗೆ ಕೆಳದಿರಾಜ್ಯ ಸ್ಥಾಪಕ ಚೌಡಪ್ಪನೆಂಬುದು ವೇದ್ಯವಾಯಿತು.

ಆದರೆ ಕೆಳದಿ ಸಂಸ್ಥಾನದ ಉದಯವನ್ನು ಕುರಿತು ಭಿನ್ನಾಭಿಪ್ರಾಯಗಳನ್ನು ಹೊಂದಿದ ಅನೇಕ ಐತಿಹ್ಯಗಳಿವೆ. ಗಣನೀಯವಲ್ಲದ ಒಂದೆರಡು ಬದಲಾವಣೆಗಳನ್ನು ಬಿಟ್ಟರೆ ಶಿವತತ್ತ್ವರತ್ನಾಕರ ಮತ್ತು ಕೆಳದಿ ನೃಪವಿಜಯ ಎರಡೂ ಒಂದೇ ಅಭಿಪ್ರಾಯವುಳ್ಳವಾಗಿವೆ. ಮುಖ್ಯವಾಗಿ "ಕೆಳದಿ ರಾಜ್ಯಸ್ಥಾಪಕ" ಚೌಡಪ್ಪ ಎಂಬುದನ್ನು ಸ್ಪಷ್ಟವಾಗಿ ತಿಳಿಸುತ್ತವೆ. ಆದರೆ ಜೈನ ರೀತ್ಯಾ ಹೊಂಬುಜದ ಕಡೆಯ ಅರಸು "ಗಂಟಿ ವಡೆಯರ್" ಈ ಕೆಳದಿಯ ಮೂಲಪುರುಷ ಎಂದು ತಿಳಿಯುತ್ತದೆ ಎಂಬುದಾಗಿ ಶ್ರೀ ರೈಸ್ ಹೇಳಿ, ಮಲವಗೌಡನಾದ ಭದ್ರಯ್ಯನು ಕೆಳದಿಯ ಮೂಲಪುರುಷನೆಂದು ತಿಳಿಸುತ್ತಾರೆ.[24] ಇವು ರೈಸ್ ಸಾಹೇಬರ ಬರಿಯ ಹೇಳಿಕೆಗಳಷ್ಟೇ ಹೊರತು ಸತ್ಯ ಸಂಗತಿಗಳಲ್ಲ. ಏಕೆಂದರೆ ರೈಸರ ಹೇಳಿಕೆಗಳಿಗೆ ಸಾಕಷ್ಟು ಸಮರ್ಥನೆ ಇಲ್ಲ. ಹಿಂದಿನ ಹಲವು ಮಾಹಿತಿಗಳ ಆಧಾರದಿಂದ ನಾವು ಸ್ಪಷ್ಟವಾಗಿ ಹೇಳಬಹುದು ಚೌಡಪ್ಪನೇ ಕೆಳದಿಯ ರಾಜ್ಯ ಸ್ಥಾಪಕ ಎಂದು.

ಎರಡನೆಯದಾಗಿ "ನಾಗರಮುರಿ"[25] ಎಂಬ ಕತ್ತಿಯನ್ನು ಚೌಡಪ್ಪನು ತನ್ನ ನೆಚ್ಚಿನ ಯಡವ ಮತ್ತು ಮುರಾರಿ ಎಂಬುವರಿಂದ ಬೇರೆ ಕುಡುಗೋಲು ಮಾಡಿಸಿಕೊಳ್ಳಲು ಕಬ್ಬಿಣವನ್ನು ಪಡೆದನೆಂತಲೂ, ಭೂಗತವಾದ ನಿಧಿಯು ಸಿಕ್ಕುವಾಗ ಇದೇ ಕತ್ತಿಯಿಂದ ಯಡವ ಮುರಾರಿಯರು ಕತ್ತರಿಸಲ್ಪಟ್ಟರೆಂತಲೂ, ಅವರ ಬಲಿದಾನದ ಪುಣ್ಯ ಸ್ಮರಣೆಗಾಗಿ ಯಡವ-ಮುರಾರಿ ಕಟ್ಟೆಯೆಂಬ ಎರಡು ಕೆರೆಗಳನ್ನು ಕೆಳದಿಯ ಹಾದಿಯ ಎಡಬಲ ಪಾರ್ಶ್ವಗಳಲ್ಲಿ ಕಟ್ಟಿಸಿದನೆಂತಲೂ, ತಿಳಿಯುತ್ತದೆ.[26] ಸ್ವಾಮಿಯೇ ಸೇವಕರನ್ನು ಬಲಿಗೈದ ಎಂಬ ಒಂದು ಅಭಿಪ್ರಾಯವಿದ್ದರೆ, ಸೇವಕರೇ

---

[23] ಶಿವರತ್ನಾಕರ VI,VI,43—14; ಕೆ.ನೃವಿ. ಪು, 27.

[24] Rice, Mysore, II, P. 431 n.

[25] ಕೆ.ನೃ.ವಿ. ಪು. 12—13.

— ಇಲ್ಲಿ ಇಂದು ಭೂನಿಕ್ಷೇಪದ ಜೊತೆಯಲ್ಲಿರುವ ಕತ್ತಿ ಅದರ ಪ್ರಭಾವ ಕೆಳದಿ ಸಂಸ್ಥಾನ ಚರಿತ್ರೆಯಲ್ಲಿರುವಂತೆ ಬಿತ್ತರಗೊಂಡಿಲ್ಲ. ಶಿವತತ್ತ್ವರತ್ನಾಕರದಲ್ಲಿ 'ನಾಗರಮುರಿ'ಯ ಹೆಸರಿಲ್ಲ. ಅಂಕುಶಖಾನನನ್ನು ದೊಡ್ಡ ಸಂಕಣ್ಣನು, "ಶ್ರೀರಾಮೇಶ್ವರ ಲಿಂಗಪ್ರಸಾದದಿಂದ ಸಂಪ್ರಾಪ್ತವಾದ, ತನ್ನದೇ ಆದ ಖಡ್ಗ" ದಿಂದ ಸಂಹರಿಸಿದ ಎಂದಿದೆ—ಶಿವತತ್ತ್ವರತ್ನಾಕರ V, IX, 17 ನಾಗರಮುರಿಯ ವಿಚಾರ ವೀರಶೈವಾನಂದ ಚಂದ್ರಿಕೆ (ಕ್ರಿಯಾಕಾಂಡ)ಯಲ್ಲಿ ಬಂದಿದೆ. I. ಶ್ಲೋಕ 30.

[26] ಕೆಳದಿಯ ಸಂಸ್ಥಾನದ ಚರಿತ್ರೆ. ಪು. 7 ಮತ್ತು 11.

ತಮ್ಮ ಸ್ವಾಮಿಯ ಅಭ್ಯುದಯಕ್ಕಾಗಿ ಆತ್ಮಾರ್ಪಣೆ ಮಾಡಿಕೊಂಡರು ಎಂಬ ಬೇರೊಂದು ಅಭಿಪ್ರಾಯವೂ ಇದೆ.[27]

ಶಿವತತ್ತ್ವ ರತ್ನಾಕರ, ಕೆಳದಿ ನೃಪವಿಜಯ, ಕುಬಟೂರಿನ ಒಂದು ಸನ್ನದು[28] ಹಾಗೂ ಒಂದು ಶಾಸನದ[29] ಆಧಾರದ ಮೇರೆಗೆ "ಯಡವ ಮುರಾರಿ" ಎಂಬುವರು ಜಾಲಹಾಳು ಕೋಟೆಯಲ್ಲಿದ್ದ ಪ್ರಚಂಡ ಪಾಳೇಗಾರರು. ಇವರನ್ನು ಚೌಡಪ್ಪನ ಮಗ ಸದಾಶಿವ ನಾಯಕನು ಸೋಲಿಸಿ, ಆ ಜಾಲಹಾಳು ಕೋಟೆಯನ್ನು ಸಾಧಿಸಿದ್ದರಿಂದ ಅವನಿಗೆ "ಯದವ ಮುರಾರಿ ಕೋಟಿ ಕೋಲಾಹಲ–" ಎಂಬ ಬಿರುದು ಬಂತೆಂದು ತಿಳಿಯುತ್ತದೆ.[30]

ಈ ಬಿರುದು ಇತಿಹಾಸ ರಚಕರಲ್ಲಿ ಒಂದು ಕೋಲಾಹಲವನ್ನೇ ಎಬ್ಬಿಸಿದೆ ಎನ್ನಬಹುದು. ಶಿವತತ್ತ್ವ ರತ್ನಾಕರ, ಕೆಳದಿ ನೃಪವಿಜಯ, ತೀರ್ಥಹಳ್ಳಿಯ ಒಂದು ಶಾಸನ[31] ಮತ್ತು ಕುಬಟೂರಿನ ಒಂದು ಸನ್ನದು–ಇವು "ಯಡವ ಮುರಾರಿ" ಎಂಬುವರು ಜಾಲಹಾಳಿನ ಪಾಳೇಗಾರರು; ಅವರನ್ನು ಸೋಲಿಸಿ, ಕೋಟೆಯನ್ನು ವಶಪಡಿಸಿ ಕೊಂಡ ಸದಾಶಿವನಾಯಕನಿಗೆ ಮಾತ್ರ "ಯಡವ ಮುರಾರಿ ಕೋಟಿಕೋಲಾಹಲ" ಎಂಬ ಬಿರುದು ಬಂತೆಂದು ತಿಳಿಸಿದರೆ, ದಿನಾಂಕ ೯ ಡಿಸೆಂಬರ್ ೧೫೦೬ ರಲ್ಲಿ ಹುಟ್ಟಿ

---

[27] Q.J.M.S. XXI, P. 372 ಮತ್ತು Rice, Mysore II, P. 458 ನೋಡಿ. ಮತ್ತೊಂದು ಐತಿಹ್ಯ ಹೀಗಿದೆ -- ಪ್ರತಿವರ್ಷವೂ ನಡೆಯುವ ಕೆಳದಿ ರಾಮೇಶ್ವರನ ರಥೋತ್ಸವದಲ್ಲಿ, ರಥದ ಮೇಲೆ ಎರಡು ದಪ್ಪನಾದ ಮರದ ಬೊಂಬೆಗಳನ್ನು ಇಡುತ್ತಾರೆ. ಅವನ್ನು ಎಡಮುರಾರಿ, ಬಲಮುರಾರಿ ಎಂದು ಕರೆಯುತ್ತಾರೆ. ಕೆಳದಿರಾಜ್ಯ ಸಂಸ್ಥಾಪಕನು ಸೇವಕರ ತ್ಯಾಗಕ್ಕೆ ಮೆಚ್ಚಿ ಅವರನ್ನು ಪ್ರತಿವರ್ಷವೂ ದೇವತಾಕಾರ್ಯದಲ್ಲಿ ಸ್ಮರಿಸಿಕೊಳ್ಳಲು ಈ ಏರ್ಪಾಟು ಮಾಡಲಾಗಿದೆ ಎನ್ನುತ್ತಾರೆ. ಕೆಳದಿ ರಥವು ಕೆಲವು ವರ್ಷಗಳ ಹಿಂದೆ ಸುಟ್ಟು ಹೋದದ್ದರಿಂದ ಆ ಬೊಂಬೆಗಳು ಈ ದೇವಾಲಯದ ಪ್ರಾಕಾರದ ಕೊಠಡಿಯಲ್ಲಿವೆ.

[28] ಅನುಬಂಧ 2 ನೋಡಿ

[29] E.C. VIII, Tl. 156 (630)

ಇದು ಆರಂಭದಲ್ಲಿ ಸಂಸ್ಕೃತದಲ್ಲೂ, ಅನಂತರ ಕನ್ನಡದಲ್ಲೂ ರಚಿತವಾಗಿದೆ.

[30] ಶಿವರತ್ನಾಕರV,V,91.

[31] Loc-cit.

ಕೊಂಡಿರುವ, ಚೌಡಪ್ಪನದೆಂದು ಹೇಳಲಾದ ಒಂದು ಶಾಸನದಲ್ಲಿ ಈ ಬಿರುದು ಚೌಡಪ್ಪನಿಗೂ ಇತ್ತೆಂದು ತಿಳಿಯುತ್ತದೆ.[32] ಈಗ ಶಿವತತ್ತ್ವ ರತ್ನಾಕರಾದಿ ಕೃತಿಗಳು ಹೇಳುವಂತೆ ಸದಾಶಿವನೊಬ್ಬನಿಗೇ ಆ ಬಿರುದಿದ್ದರೆ, ಡಾ|| ಎಮ್. ಎಚ್. ಕೃಷ್ಣ ಅವರು ತೋರಿಸಿಕೊಟ್ಟ ಶಾಸನವು[33] ಕೂಟಶಾಸನವಾಗಬೇಕಾಗುತ್ತದೆ. ಈ ಶಾಸನದಂತೆ ಚೌಡಪ್ಪನಿಗೂ ಆ ಬಿರುದು ಇರುವುದಾದರೆ ಶಿವತತ್ತ್ವ ರತ್ನಾಕರ, ಕೆಳದಿ ನೃಪವಿಜಯ ಹಾಗೂ ತೀರ್ಥಹಳ್ಳಿ ಶಾಸನಗಳು ಸುಳ್ಳು ಹೇಳುತ್ತಿವೆ ಎನ್ನಬೇಕಾಗುತ್ತದೆ. ಈ ಬಗ್ಗೆ ಅಂತಿಮ ನಿರ್ಧಾರ ಸಾಧ್ಯವಿಲ್ಲ. ಆದರೂ ಒಂದು ಊಹೆಯನ್ನು ಹರಿಸಬಹುದು: "ಯಡವ ಮುರಾರಿ" ಎಂಬುದು ಬಹುಶಃ "ಯಾದವ ಮುರಾರಿ" ಎಂದಿದ್ದಿರಬೇಕು. ಯಾದವ ಎಂಬುದು ಒಂದು ವಂಶದ ಹೆಸರಿನಂತೆ ತೋರುತ್ತದೆ. ಹೇಗೆಂದರೆ ಹೊಯ್ಸಳರಲ್ಲಿ "ನಾರಾಯಣ" ಎಂಬುವನು ಯಾದವ ವಂಶಸ್ಥನಾದ್ದರಿಂದ, ಅವನನ್ನು "ಯಾದವ ನಾರಾಯಣ" ಎಂದು ಕರೆದಂತೆ, ಇಲ್ಲಿಯೂ ಯಾದವ ವಂಶದ ಮುರರನ್ನು ಯಾದವ ಮುರರು ಎಂದು ಕರೆದು ಅವರಿಗೆ ಶತ್ರುಗಳಾದವರು ಕೆಳದಿಯವರು ಎನ್ನುವುದನ್ನು ತೋರಿಸಲು ಯಾದವ ಮುರರಿಗೆ ಅರಿಗಳು ಅಥವಾ ಯಾದವ ಮುರಾರಿ ಎಂದಾಗಿ, ಅದೇ ಯಡವ ಮುರಾರಿ ಎಂದು ಪ್ರಚಲಿತವಾಗಿರಬಹುದು.[34] ಆದರೆ ಈ

---

[32]M.A.R. 1930, No. 65, P. 219.

೩. ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನಷಕು

೪. ವರುಷ ಸ ೧೦ ೧೪೨೯ ಪರಿವರ್ತಕೆ ಶಲುವ ಕ್ಷಯ

೫. ಸಂವತ್ಸರದ ಮಾರ್ಗಶಿರ ಬಹುಳ ೧೦ ಮಿಯಲು ಎಡವ

೬. ಮೂರರಿ ಕೆಳದಿಯ ಚಉಡಗೌಡರು ಕಲಿಸೆಯ ಕಲು

೭. ಕುಟಿಗ ವೀರಪ್ಪೆಯನ ಮಕಳಿಗೆ ಕೊಟ ಭೂಮಿ ಹೆಂಣೆ (೦)

(—1429 ಅಲ್ಲ 1428 ಮಾರ್ಗಶಿರ ಬ.10ರಲ್ಲಿ ಎಂದಿರಬೇಕು. ಹಾಗಾದರೆ ಅದರ ಕಾಲ 9 ಡಿಸೆಂಬರ್ 1506 ಆಗುತ್ತದೆ ಎಂದು Archaeological Report ತಿಳಿಸುತ್ತದೆ.)

[33]ಅದೇ.

[34]ಯಡವ ಮುರಾರಿ ಕೋಟೆ ಕೋಲಾಹಲ ಎಂಬ ಸುದೀರ್ಘವಾದ ಬಿರುದನ್ನು ಕೆಳದಿಯನ್ನಾಳಿದವರ ಹೆಸರುಗಳ ಹಿಂದೆ ಅಂಟಿಸಿದರೂ ಇದು ಒಂದೇ ಬಿರುದಲ್ಲ; ಎರಡು —"ಯಡವ ಮುರಾರಿ" ಮತ್ತು "ಕೋಟೆ ಕೋಲಾಹಲ"—ಶಿವತತ್ತ್ವರತ್ನಾಕರವು ಸದಾಶಿವ ನಾಯಕನಿಗೆ ಈ ಬಿರುದಿತ್ತೆಂದು ಹೇಳಿದರೂ (V,V, 91) ಅದೇ ಸದಾಶಿವನಿಗೆ "ಕೋಟೆ ಕೋಲಾಹಲ" ಎಂಬ ಬಿರುದಿದ್ದುದೂ ತಿಳಿಸುತ್ತದೆ. (ಅದೇ. V,V, 19. ಮತ್ತು ಕೆ.ನೃ.ವಿ.ಪು. 33). ಆದ್ದರಿಂದ "ಯಡವ ಮುರಾರಿ" ಮತ್ತು 'ಕೋಟೆ ಕೋಲಾಹಲ' ಎಂಬುವು ಪ್ರತ್ಯೇಕ ಬಿರುದುಗಳು. ಇದರಿಂದ ಕೆಳದಿಯವರು 'ಯಾದವ ಮುರರಿಗೆ ಅರಿಗಳು' ಎಂಬ ಊಹೆಗೆ ಸಮರ್ಥನೆ ದೊರೆತಂತಾಯಿತು.

ಯಾದವ ಮುರರು ಯಾರು? ಎಂಬ ಪ್ರಶ್ನೆ ಬರುತ್ತದೆ. ಮರಾಠಿಗರಲ್ಲಿ "ಜಾದವ್" ಎಂಬ ಶೈವಪಂಥೀಯರಿದ್ದಾರೆ. ಅವರು ಸೇವುಣ ವಂಶದವರು. ಅವರಲ್ಲಿ ಮುರ ರೆಂಬುವರಿದ್ದರೇ ? ತಿಳಿಯದು. ಅದೇ ರೀತಿ ಮೈಸೂರು ಅರಸರು ಯದುವಂಶದವರು. ಇವರಂತೂ ಕೆಳದಿಯವರಿಗೆ ಮೊದಲಿನಿಂದಲೂ ಶತ್ರುಗಳು. ಈ ಶತ್ರುತ್ವವನ್ನೇ "ಯಾದವ ಮುರಾರಿ" ಎಂಬ ಬಿರುದಾಗಿ ಕೆಳದಿಯವರು ಪಡೆದಿರಬಹುದೆ? ಹೇಳುವುದು ಕಷ್ಟ. ಈ ಬಗ್ಗೆ ಸಂಶೋಧನೆ ನಡೆಯಬೇಕಾಗಿದೆ.

ಮೂರನೆಯದಾಗಿ, ಚೌಡಪ್ಪನಿಗೆ "ನಾಯಕ" ಎಂಬ ಬಿರುದಿರಲಿಲ್ಲ. ಇದೆ ಎಂದು ಹೇಳಲು ಹಿಂದೆ ಯಾವ ಶಾಸನಾಧಾರವೂ ಇಲ್ಲ. ಚೌಡಪ್ಪನ ಕಾಲದ್ದೆಂದು ತಿಳಿಸುವ ಒಂದು ಶಾಸನದಲ್ಲೂ,[35] ಅವನ ಮಗ ಸದಾಶಿವನಾಯಕನ ಒಂದು ಶಾಸನದಲ್ಲೂ[36] ಚೌಡಪ್ಪನಿಗೆ "ನಾಯಕ" ಎಂಬ ಬಿರುದು ಅಂಟಿಕೊಂಡಂತಿಲ್ಲ. ಕೇವಲ ಶಿವತತ್ತ್ವರತ್ನಾಕರ ಮತ್ತು ಕೆಳದಿ ನೃಪವಿಜಯಗಳು ಮಾತ್ರ ಚೌಡಪ್ಪನಿಗೆ "ನಾಯಕ"ನೆಂಬ ಬಿರುದಿತ್ತೆಂದು ಕರೆದಿವೆ.[37] ಸಾಹಿತ್ಯಾಧಾರಕ್ಕಿಂತ ಶಾಸನಧಾರ ಹೆಚ್ಚು ವಿಶ್ವಾಸಾರ್ಹವಾದ್ದರಿಂದ "ನಾಯಕ" ಎಂಬ ಬಿರುದು ಸದಾಶಿವನ ಅನಂತರ ಕೆಳದಿಯವರಿಗೆ ಬಂದಿದೆ ಎಂದು ಹೇಳುವುದು ಹೆಚ್ಚು ಸೂಕ್ತ.

ನಾಲ್ಕನೆಯದಾಗಿ, ಚೌಡಪ್ಪನಿಗೆ ಶ್ರೀ ಕೃಷ್ಣದೇವರಾಯನು[38] ಎಂಟು ಮಾಗಣೆಗಳನ್ನು ಕೊಟ್ಟ ಎಂದಿದೆ. ವಿಜಯನಗರದ ಅರಸು ಕೊಟ್ಟಿರಬಹುದು. ಆದರೆ ಕೊಟ್ಟವನು ಕೃಷ್ಣದೇವರಾಯನಾಗಲು ಸಾಧ್ಯವಿಲ್ಲ. ಏಕೆಂದರೆ ಕೃಷ್ಣದೇವರಾಯನ ಕಾಲ ಕ್ರಿ.ಶ. ೧೫೦೯-೧೫೩೦. ಆದರೆ ಚೌಡಪ್ಪನಿಗೆ ಪಟ್ಟವಾದದ್ದು ೧೫೦೦ ರಲ್ಲಿ. ಆದ್ದರಿಂದ ಕೆಳದಿ ನೃಪವಿಜಯವು ಕೃಷ್ಣದೇವರಾಯನೆಂದು ಹೇಳುವುದು ತಪ್ಪು.[39]

---

[35]M.A.R. 1930, No. 65, P. 219.

[36]ಅದೇ 1928, No. 65, P. 66

[37]ಶಿವರತ್ನಾಕರ V,IV, 42 ಮತ್ತು ಕೆ.ನೃ.ವಿ.ಪು. 26

[38]ಕೆ.ನೃ.ವಿ.ಪು. 19ರ 71ನೆಯ ಪದ್ಯದಲ್ಲಿ ಅಚ್ಯುತರಾಯನೆಂತಲೂ, ಅದೇ ಪುಟದ 75ನೆಯ ಗದ್ಯದಲ್ಲೂ, 24ನೆಯ ಪುಟದ 94ನೆಯ ಗದ್ಯ ಹಾಗೂ 25ನೆಯ ಪುಟದ 98ನೆಯ ಪದ್ಯಗಳಲ್ಲಿ ಕೃಷ್ಣರಾಯನೆಂತಲೂ ಹೇಳಿದೆ. ಶಿವತತ್ತ್ವ ರತ್ನಾಕರದಲ್ಲೂ ಅಚ್ಯುತರಾಯ ನೆಂದಿದೆ.

[39]ಕೆಳದಿಯ ಚೌಡಪ್ಪನನ್ನು ಸನ್ಮಾನಿಸಿದ ವಿಜಯನಗರದ ಚಕ್ರವರ್ತಿ ಅಚ್ಯುತರಾಯನೂ ಅಲ್ಲ, ಕೃಷ್ಣದೇವರಾಯನೂ ಅಲ್ಲ. ಅವನು ಶ್ರೀ ವೀರನರಸಿಂಹರಾಯ I. ನೋಡಿ Hayavadana Rao, Gaz. Vol. II, pt. III, P. 1757.

ಬಹುಶಃ ಒಂದು ಮಹತ್ಕಾರ್ಯಕ್ಕೆ ದೊಡ್ಡವರ ಹೆಸರು ಹೇಳುವುದು ರೂಢಿ.[40]

ಮೊಲ ಮತ್ತು ನಾಯಿಗಳ ದಂತಕಥೆಯಂತೆ ಚೌಡಪ್ಪನು ಇಕ್ಕೇರಿಯಲ್ಲಿ ಕೋಟೆ ಕಟ್ಟಿಸಿಕೊಂಡು, ಅನಂತರ, ಅದರಲ್ಲಿ 'ಇಂದ್ರನ ಸದನಕ್ಕಧಿಕವೆನೆ' ಅರಮನೆಯನ್ನು ರಚನೆಗೈಸುತ್ತಾನೆ. ಅದಕ್ಕೆ ಉಪಯುಕ್ತವಾದ ಬೊಕ್ಕಸ, ಭಂಡಾರ, ಲಾಯ, ಗಜಾಶ್ವಶಾಲೆ, ಉಗ್ರಾಣ, ಪಣತ, ಮುಂತಾದ ಮಹಲ್ಗಳಂ ನಿರ್ಮಾಣಂಗೈಸಿ, ಪುರ, ಪೇಟೆ, ತಳವಾರಗಟ್ಟೆ ಮುಂತಾದುವಂ ರಚನೆಗೈಸಿ, ಹೊರಗೆ ಉಕ್ಕುಡವನ್ ಒಡ್ಡುಮಂ ಬಲಿಯಿಸಿ ರಾಜಧಾನಿಯನ್ನು ಕೆಳದಿಯಿಂದ ಇಕ್ಕೇರಿಗೆ ವರ್ಗಾಯಿಸುತ್ತಾನೆ.[41] ಆದರೆ ರೈಸ್ ಸಾಹೇಬರ ಪ್ರಕಾರ ರಾಜಧಾನಿ ಬದಲಾವಣೆ ೧೫೬೦ ರಲ್ಲಿ.[42] ಈ ಬಗ್ಗೆ ಕೆಳದಿ ನೃಪವಿಜಯವೇ ಹೆಚ್ಚು ವಿಶ್ವಾಸಾರ್ಹವೆಂದು ಡಾ|| ಚಿಟ್ನೀಸರು ತಿಳಿಸಿದ್ದಾರೆ.[43]

ಇವೇನೇ ಭಿನ್ನಾಭಿಪ್ರಾಯಗಳಿದ್ದರೂ, ಕೆಳದಿ ಸಂಸ್ಥಾನದ ಮೂಲಪುರುಷನು 'ನಾಲ್ದೆಸೆಯ ಮನ್ನೆಯರ್ಕಳೊಳ್ ಕೆಳದಿಯ ಚೌಡಪ್ಪ ನಾಯಕನೆಂದು ಪರಮ ಪ್ರಸಿದ್ಧಿಯಂ ಪಡೆದಿಂತು'[44] ವರ್ತಿಸುತ್ತಿದ್ದನು ಎಂದು ಧಾರಾಳವಾಗಿ ಹೇಳಬಹುದು.

---

[40] ಒಂದು ಸಿಸ್ತಿನ ಕೆಲಸಕ್ಕೆ ಶಿವಪ್ಪನಾಯಕನ ಹೆಸರು ಹೇಳುವುದು; ಒಂದು ಶಿಲ್ಪಕ್ಕೆ ಜಕಣಾಚಾರಿಯ ಹೆಸರು ಹೇಳುವುದು (ಮಹಾರಾಷ್ಟ್ರದಲ್ಲಿ ಹೇಮಾಡಪತಿ ದೇವಾಲಯ ಎಂದು ಹಳೆಯ ದೇವಾಲಯಗಳಿಗೆ ಹೇಳುವುದು ವಾಡಿಕೆ) ಇಂದಿಗೂ ಇದೆ. - ಅದೇ ರೀತಿ ಕೃಷ್ಣದೇವರಾಯನಂತಹ ದೊಡ್ಡವನ ಹೆಸರು ಹೇಳಿಕೊಳ್ಳುವುದು ಒಂದು ಹೆಚ್ಚುಗಾರಿಕೆ ಇದ್ದಿರಬೇಕು.

[41] ಕೆ.ನೃವಿ.ಪು. 27--28 (ಪ್ರಜೋತ್ಪತ್ತಿ ಸಂವತ್ಸರದ ಮಾಘ ಶುದ್ಧ 5 ರಲ್ಲಿ ಅಂದರೆ ಕ್ರಿ.ಶ. 1511–12ರಲ್ಲಿ)

[42] Rice M.C.I. P. 156

[43] Chitnis, Keladi Administration, P, 23.

[44] ಕೆ.ನೃ.ವಿ. ಪು. 28

# III. ವಿಸ್ತರಣೆ

## ೨. ಸದಾಶಿವ ನಾಯಕ (ಕ್ರಿ. ಶ. ೧೫೧೪-೧೫೬೭)

ಚೌಡಪ್ಪನಿಗೆ ಇಬ್ಬರು ಮಕ್ಕಳು-ಸದಾಶಿವ ಮತ್ತು ಭದ್ರಪ್ಪ. ಹಿರಿಯವನಾದ ಸದಾಶಿವನು ತನ್ನ ತಂದೆಯ ಅನಂತರ ಶಕವರ್ಷ ೧೪೩೬ನೆಯ ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ೩ರಲ್ಲಿ ಇಕ್ಕೇರಿಯ ಅರಮನೆಯಲ್ಲಿ ಪಟ್ಟ ಕಟ್ಟಿಸಿಕೊಳ್ಳುತ್ತಾನೆ.[45] ಈತನು ಕೆಳದಿ ಸಂಸ್ಥಾನದ ಬುನಾದಿಯನ್ನು ಭದ್ರಪಡಿಸಿದವನು. ಆದ್ದರಿಂದ ಸದಾಶಿವನಾಯಕನೇ ಕೆಳದಿ ರಾಜ್ಯದ ನಿಜವಾದ ಸಂಸ್ಥಾಪಕನೆಂದು ಹೇಳಬಹುದು.[46]

ಸದಾಶಿವನಾಯಕನು ಮಹಾಯೋಧ. ವಿಜಯನಗರದ ದಂಡಿನಲ್ಲಿ ಅತ್ಯಂತ ಧೈರ್ಯಶಾಲಿ ದಳವಾಯಿಯೆಂದು ಖ್ಯಾತನಾದವನು. ಕೆಳದಿ ರಾಜ್ಯ ಸ್ಥಾಪನೆಯಾದ ತಾರುಣ್ಯದ ದಿನಗಳು ಅವು. ಆಗ ರಾಜ್ಯದ ಸುಭದ್ರತೆಯ ಅಗತ್ಯ ಬಹಳ ಇತ್ತು. ಆದ್ದರಿಂದ ಆತನು ಅನೇಕ ದಿಗ್ವಿಜಯಗಳನ್ನು ಕೈಕೊಂಡು ಜಯಶೀಲನಾಗ ಬೇಕಾಯಿತು. ಅಂತೆಯೇ ವಿಜಯನಗರಕ್ಕೆ ವಿಧೇಯನಾಗಿ ಸೇವೆ ಸಲ್ಲಿಸುವುದೂ ಅವನ ಕರ್ತವ್ಯವಾಗಿದ್ದಿತು. ಅದರಿಂದಾಗಿ, "ಎಮಗೆ ಮಾರ್ಮಲೆತಿರ್ಪಹಿತಾವನೀಶ್ವರ ಪ್ರಸರದ ಗರ್ವಮಂ ತವಿಸಿ ನೀಂ ಬಹುದೆಂದು ತೆರಳ್ಚಲು" ಸದಾಶಿವನು ಪ್ರಭುವಿನ ಆಜ್ಞೆಯನ್ನು ಶಿರಸಾವಹಿಸಿ, ಉತ್ತರದ ಕಡೆಗೆ ಪ್ರಚಂಡ ಜೈತ್ರಯಾತ್ರೆಯನ್ನು ಕೈಗೊಳ್ಳುತ್ತಾನೆ. ವಿಜಯನಗರದ ವಿರೋಧಿಗಳಾದ ಕಲ್ಯಾಣ ಕಲಬುರ್ಗಿಗಳವರ ಮೇಲೆ ದಂಡೆತ್ತಿ ಹೋಗಿ, ಮಾರ್ಗದಲ್ಲಿ ಅಡ್ಡಬಂದ ಬಿಜಾಪುರದ ಮುಸಲ್ಮಾನರನ್ನೂ, ಜಮಖಂಡಿಯ ಬಳಿಯಲ್ಲಿ ಅಹಮ್ಮದನಗರದ ಅನುಯಾಯಿಗಳನ್ನೂ ಬಡಿದು, ಅಷ್ಟ ವಜೀರರುಗಳೊಡನೆ "ಇದಿರ್ಚಿನಿಂದ" ಬೊಕ್ಕಸಸಿಂಗನಿಂದ ಪ್ರಬಲವಾದ ಪೆಟ್ಟು ತಿಂದರೂ ಕಡೆಯಲ್ಲಿ

---

[45] ಅದೇ. ಪು. 13; ಶಿವ.ರತ್ನಾಕರ. V,V, 46.

ಇವನ ತಾಯಿಯ ಹೆಸರು "ತಿರುಮಮ್ಮ" ಎಂದು ತಿಳಿಯುತ್ತದೆ.—ನೋಡಿ S.I.I. Vol. IX, Pt. II, 1941, No. 674 P. 666.

[46] ಜಿ. ಎಸ್. ದೀಕ್ಷಿತ್, ಕೆಳದಿ ನಾಯಕರು ಪು. 13

ಅಂತೆಯೇ ಕೆಳದಿಯ ರಾಜವಂಶವನ್ನು ತಿಳಿಸುವ ಎಲ್ಲ ಶಾಸನಗಳೂ ಮೊದಲು ಇವನ ಹೆಸರು ಹೇಳೀ ಮುಂದುವರಿಯುತ್ತವೆ. ಚೌಡಪ್ಪನ ಹೆಸರು ಹೆಚ್ಚಾಗಿ ಎಲ್ಲಿಯೂ ಬರುವುದಿಲ್ಲ.

"ತೌರುಷ್ಕ ಪತಿಯು ಖಾನರನೆಲ್ಲಂ ಕುರಿದರಿದು ಜೊಕ್ಕಸಿಂಗನ ಸೆರೆಪಿಡಿದೆಳ್ತಂದು ರಾಯರಿಗೊಪ್ಪಿಸಿದಂ."[47]

ಕಲ್ಯಾಣದ ಕೋಟೆಯನ್ನು "ಲಗ್ಗೆಯೋಜ್ನಾಧಿಸುವ ಸಮಯದಲ್ಲಿ ಒಂದು ಘಟನೆ ನಡೆಯುತ್ತದೆ. ವಿಜಯನಗರದ ಪ್ರಭುವು ತನ್ನ ಕೈಯಲ್ಲಿದ್ದ 'ಯಮದಂಷ್ಟ್ರ'ವೆಂಬ ಖಡ್ಗವನ್ನು ಆ ಕೋಟೆಯೊಳಕ್ಕೆ ಎಸೆದು, ಪ್ರಸಿದ್ಧ ಸೇನಾಪತಿಗಳನ್ನು ಕುರಿತು, ಯಾರಾದರೂ ಒಬ್ಬರು ಕೋಟೆಯನ್ನು ಭೇದಿಸಿ ಆ ಖಡ್ಗವನ್ನು ತರಬೇಕೆಂಬುದಾಗಿ ಆಜ್ಞಾಪಿಸುತ್ತಾನೆ. ಸರ್ವರೂ ಸುಮ್ಮನಿರಲು ಸದಾಶಿವನು ತಾನೊಬ್ಬನೆ ಆ ಅಭೇದ್ಯವಾದ ಕೋಟೆಯನ್ನು ನುಚ್ಚುನೂರು ಮಾಡಿ "ಯಮದಂಷ್ಟ್ರೆ"ಯನ್ನು ಸನ್ನಿಧಾನಕ್ಕೆ ತಂದೊಪ್ಪಿಸುತ್ತಾನೆ. ಆಗ ಪ್ರಭುವು ಅವನಿಗೆ "ಕೋಟೆ ಕೋಲಾಹಲ" ಎಂಬ ಬಿರುದಿತ್ತುದಲ್ಲದೆ, ಗುತ್ತಿ, ಬಾರಕೂರು, ಮಂಗಳೂರುಗಳನ್ನು ಪಾರಿತೋಷಕ ವಾಗಿ ಕೊಟ್ಟು, 'ರಾಯನಾಯಕ' ಎಂಬ ಬಿರುದನ್ನೂ ಕೊಟ್ಟು ಸನ್ಮಾನಿಸುತ್ತಾನೆ. ಅಂದಿನಿಂದ ಸದಾಶಿವನು 'ಸದಾಶಿವರಾಯನಾಯಕ' ಎಂದು ಪ್ರಖ್ಯಾತಿ ಪಡೆಯುತ್ತಾನೆ. ಅನಂತರ ಬಿದರೆಯ ಸೊಕ್ಕಿನ ಸುಲ್ತಾನನಿಗೆ ಪತನದ ಪೆಟ್ಟು ಕೊಟ್ಟು ಜಾಲಹಾಳಿನ ಯದವ ಮುರಾರಿಗಳ ಮೇಲೇರಿ ಹೋಗಿ ಜಯಗಳಿಸುತ್ತಾನೆ. 'ಯದವ ಮುರಾರಿ ಕೋಟೆ ಕೋಲಾಹಲ' ಎಂಬ ಬಿರುದು ಪಡೆಯುತ್ತಾನೆ. ಚಂದ್ರಗುತ್ತಿಯ ಪಾಳೇಗಾರರನ್ನು ಸದೆಬಡಿದು ಗಡಿಯನ್ನು ಭದ್ರಪಡಿಸುತ್ತಾನೆ. ಆ ತರುವಾಯ ಬರೀದ ಬಾದಶಹನನ್ನು, ಅವನ ಸಪ್ತಾಂಗ ಸಂಪತ್ತಿನೊಡನೆ ಸೆರೆಹಿಡಿದು ತಂದು ವಿಜಯನಗರಕ್ಕೆ ಕಾಣಿಕೆ ತೆರುವಂತೆ ಮಾಡುತ್ತಾನೆ. ಆಗ ಸಾರ್ವಭೌಮನು ಸದಾಶಿವ ನಾಯಕನಿಗೆ ಕೆಂಪು ನಿಶಾನೆ, ಪಂಚವಾದ್ಯಗಳು ಮತ್ತು ನವೀನ ವಸ್ತ್ರಾಭರಣಗಳ ಮನ್ನಣೆಯೊಡನೆ "ಶತ್ರುಸಪ್ತಾಂಗ ಹರಣ" ಎಂದು ಪ್ರೇಮಪೂರ್ವಕವಾಗಿ ಬಿರುದಿತ್ತು ಗೌರವಿಸುತ್ತಾನೆ. ಕೆಳದಿಯ ಸದಾಶಿವನು ಅನಂತರ ಬಲಾಢ್ಯನಾದ ಬಂಕಾಪುರದ ಮಾದರಸನನ್ನು ಸೋಲಿಸಿ, ಅನೇಕ ಪುಟ್ಟ ಪಾಳೇಗಾರರನ್ನು ಒಟ್ಟುಗೂಡಿಸಿ, ಅವರ ಮೇಲೆ ತನ್ನ ಪ್ರಭುತ್ವವನ್ನು ಇಟ್ಟುಕೊಳ್ಳಲು ಯತ್ನಿಸುತ್ತಾನೆ. ಸಾಮ್ರಾಟನಿಗೆ ತಿರುವಾಂಕೂರಿನ ದಂಡಯಾತ್ರೆಯಲ್ಲಿ ನೆರವಾಗಿ, ಉಪದ್ರವಕಾರಿಯಾದ ಸಾಳುವ ತಿಮ್ಮನಾಯಕ ಹಾಗೂ ಮಾಯೋಪಾಯ ಚತುರರಾದ ಕೇರಳ ಮತ್ತು ತುಳುವರನ್ನು ಯುದ್ಧದಲ್ಲಿ ಸಾಧಿಸಿ, ಸೋಲಿಸಿ, "ಮೆರೆವ ಕಾಸರಗೋಡೊಳ್ ತೊಲಗದ ಕಂಬವನಾ ನೃಪತಿ ತಿಲಕಂ ಮೆರೆದನತಿ ಸಾಹಸಮಂ"[48]

---

[47] ಕೆ.ನೃ.ವಿ. — ಪು. 30-32.

[48] ಅದೇ, ಪು. 40 ಮತ್ತು ವೀರಶೈವಾನಂದಚಂದ್ರಿಕಾ I ಶ್ಲೋಕ – 21; ಶಿವ. ರತ್ನಾಕರ V,V, 19--40 ಮತ್ತು 86--91; Rice, Mys. II, P.432; Q.J.M.s. XXI, P. 376--77

ಇಂತಹ ಸಾಹಸಿ ಸದಾಶಿವನ ಧವಳಕೀರ್ತಿಯು ದಿಗಂತ ವಿಶ್ರಾಂತವಾಗಿದ್ದಿತು. ದಕ್ಷಿಣದ ಸುಲ್ತಾನರನ್ನೆಲ್ಲಾ ಸದೆಬಡಿದವರಲ್ಲಿ ಇವನೇ ಮೊಟ್ಟಮೊದಲಿಗನೆನ್ನಬಹುದು. ಮೇಲೆ ತಿಳಿಸಿದ ಬಿರುದುಗಳೇ ಅಲ್ಲದೆ 'ಏಕಾಂಗವೀರ' 'ಬಲವಂತ' 'ಅರಿದಲೆ ಮೇಘ ಡಂಬರ', 'ದಿವಾಪ್ರದೀಪ', 'ಪಡುವಣ ಸಮುದ್ರಾಧೀಶ್ವರ' – ಇತ್ಯಾದಿ ಬಿರುದುಗಳನ್ನು ಪಡೆದು ಪ್ರಸಿದ್ಧನಾಗಿದ್ದಾನೆ.[49]

ಸದಾಶಿವನಾಯಕನು ಎಷ್ಟು ಪರಾಕ್ರಮಿಯೋ ಅಷ್ಟೇ ಧಾರ್ಮಿಕಪುರುಷ. ಶ್ರೀಕೃಷ್ಣದೇವರಾಯನ ಅನುಮತಿಯಂತೆ ಬಂಕಾಪುರದ ಮಾದಣಪೊಡೆಯರ[50] ಮುಖಾಂತರ ಮುದಗದ ಕೆರೆಯನ್ನು ಪೂರ್ಣಗೊಳಿಸಿ, ಶೃಂಗೇರಿಯ ಜಗದ್ಗುರುಗಳನ್ನು ಆ ತಟಾಕದೆಡೆಗೆ ಆಹ್ವಾನಿಸಿ, ಶ್ರೀಕೃಷ್ಣದೇವರಾಯನಿಗೆ ದರ್ಶನ ಮಾಡಿಸಿ ಉಭಯತ್ರರಿಂದಲೂ ಸನ್ಮಾನಿತನಾಗುತ್ತಾನೆ. "ಕೆಳದೀ ರಾಮೇಶ್ವರದೇವರ ನಂದಿ ಮಂಟಪವನಧಿಕ ಮನೋಹರಮಾಗೆ ಶಿಲ್ಪಶಾಸ್ತ್ರ ಕೌಶಲ ವಿಧಿಯಿಂ" ಮಾಡಿಸುತ್ತಾನೆ. ಶ್ರೀರಾಮೇಶ್ವರ ಸ್ವಾಮಿಯ ಎಡಭಾಗದಲ್ಲಿ ಪಾರ್ವತೀದೇವಿಯನ್ನು ಪ್ರತಿಷ್ಠಾಪಿಸಿ, ಕೆಳದಿಯ ಮಹತ್ತಿನ ಮಠವನ್ನು ಚಿತ್ರರಂಗೈಸಿ, ಜಂಗಮರಿಗೆ ಉತ್ತಮ ದಾನಧರ್ಮಗಳನ್ನು ನೀಡುತ್ತಾನೆ. ಸದಾಶಿವನಾಯಕನು ಶ್ರೇಷ್ಠ ಶಿವಭಕ್ತನೂ, ನಿಷ್ಠಾವಂತ ಜಂಗಮ ಪ್ರೇಮಿಯೂ ಆಗಿದ್ದನು. ಅಂತೆಯೇ ಬ್ರಾಹ್ಮಣರನ್ನೂ, ಗೋವುಗಳನ್ನೂ ರಕ್ಷಿಸಿದ್ದಾನೆ. ಕುಶಾವತೀ ತೀರದಲ್ಲಿ "ಸದಾಶಿವಪುರ" ವೆಂಬ ಅಗ್ರಹಾರವನ್ನು ಕಟ್ಟಿಸಿ ಬ್ರಾಹ್ಮಣರಿಗೆ "ಶಿವಾರ್ಪಿತವಾಗಿ ಧಾರೆಯನೆರೆದು, ಸ್ವನಾಮಾಂಕಿತ ಶಿವಲಿಂಗ (ಸದಾಶಿವೇಶ್ವರ)ವನ್ನೂ ಆವರಣ ದೇವತೆಗಳನ್ನೂ ಪ್ರತಿಷ್ಠಿಸಿ, ಇವುಗಳಿಗೂ ಕೆಳದಿ ಮತ್ತು ಚಂದ್ರಗಿರಿಯಲ್ಲಿ ಕೋಟೆ ಕಟ್ಟಿಸುತ್ತಾನೆ. ಹೂವಿನ ಹುಪಯ್ಯನೆಂಬುವನಿಂದ ಕಟ್ಟಲ್ಪಟ್ಟ ಮಹಂತರ ಮಠಕ್ಕೂ, ಭೂಸ್ವಾಸ್ಥೆಗಳನ್ನು ಬಿಟ್ಟು ಸ್ಥಿರಶಾಸನಗಳನ್ನು ಬರೆಯಿಸುತ್ತಾನೆ. "ಸದಾಶಿವಸಾಗರ" ವೆಂಬ ಪಟ್ಟಣವನ್ನು ನಿರ್ಮಿಸುತ್ತಾನೆ. (ಈಗಿನ ಸಾಗರ ಎಂಬ ಪಟ್ಟಣ) ಇಕ್ಕೇರಿಯಲ್ಲಿ ಒಂದು ಶಿವಾಲಯವನ್ನು ಕಟ್ಟಿಸಿ, ಕುಕ್ಕೆ ಸುಬ್ರಹ್ಮಣ್ಯ ಸ್ವಾಮಿ ದೇವಾಲಯಕ್ಕೆ ದತ್ತಿ ಬಿಟ್ಟು, ಆಲಹಳ್ಳಿ ಮಲ್ಲಿನಾಥನ ದೀಪಾರಾಧನೆ ಸೇವೆಯನ್ನು ಸಲ್ಲಿಸಿ ಧನ್ಯನಾಗಿದ್ದಾನೆ. ಈ ಜೈನ ಬಸದಿಗೆ ದತ್ತಿಯಿತ್ತು ತನ್ನ ಸರ್ವಧರ್ಮ ಸಮಾನತೆಯನ್ನು ಮೆರೆದಿದ್ದಾನೆ.

---

[49] ಷಡಕ್ಷರಿ. ಧರ್ಮ ಶಿರೋಮಣಿ. I–13.

[50] ಇವನು ವಿಜಯನಗರದ ಶತ್ರುವಾಗಿದ್ದು, ಸದಾಶಿವನಾಯಕನಿಂದಲೇ ಸೋಲಿಸಲ್ಪಟ್ಟನೆಂದು ಶಿವತತ್ತ್ವರತ್ನಾಕರ ತಿಳಿಸುತ್ತದೆ.

ಈ ಧರ್ಮಪ್ರಭುವು ಕಾಶಿಯಿಂದ ಹಿಂತಿರುಗಿ ಬಂದ ತನ್ನ ಸೋದರ ಭದ್ರಪ್ಪ ನಾಯಕನೊಡನೆ ಸ್ವಲ್ಪ ಕಾಲ ಸುಖದಿಂದಿದ್ದು, ಅನಂತರ ಅವನಿಗೆ "ಇಮ್ಮಡಿ ಸದಾಶಿವನಾಯಕ" ಎಂಬ ಹೆಸರಿಟ್ಟು ರಾಜ್ಯ ಪಟ್ಟಾಭಿಷೇಕ ಮಾಡುತ್ತಾನೆ. ಅದುವರೆಗೂ ಹೊರಗಣ ಶತ್ರುಗಳನ್ನು ಜಯಿಸಿದ ಸದಾಶಿವೇಂದ್ರನು ಅನಂತರದ ದಿನಗಳಲ್ಲಿ ಒಳಗಣ ಕಾಮಾದಿ ಶತ್ರುಗಳನ್ನು ಜಯಿಸಲು ತಪೋವನಕ್ಕೆ ತೆರಳಿ ಕೆಲವು ಕಾಲಾನಂತರ ಶಿವಸಾಯುಜ್ಯವನ್ನು ಹೊಂದುತ್ತಾನೆ.

## ೩. ಇಮ್ಮಡಿ ಸದಾಶಿವ (ಭದ್ರಪ್ಪ) ನಾಯಕ (ಕ್ರಿ. ಶ. ೧೫೩೭-೧೫೪೬)

ಧರ್ಮಪ್ರಭು ಸದಾಶಿವೇಂದ್ರನನಂತರ ಅವನಿಂದಲೇ ಅಭಿಷಿಕ್ತನಾದ ಅವನ ತಮ್ಮ ಭದ್ರಪ್ಪ ಅಥವಾ ಇಮ್ಮಡಿ ಸದಾಶಿವನಾಯಕನು ಕೆಲವು ಕಾಲ ರಾಜ್ಯವಾಳಿ, ತನ್ನ ಅಗ್ರಜನ ಸುತನಾದ ದೊಡ್ಡಸಂಕಣ್ಣನಿಗೆ ರಾಜ್ಯವನ್ನೊಪ್ಪಿಸಿ, ಚಿಕ್ಕಸಂಕಣ್ಣನನ್ನು ಯುವರಾಜನನ್ನಾಗಿ ನೇಮಿಸಿ, ಈರ್ವರಿಗೂ ರಾಜನೀತಿಯನ್ನು ಬೋಧಿಸಿ, ಕೆಲವು ದಿನಗಳನಂತರ ಶಿವಸಾಯುಜ್ಯವನ್ನು ಹೊಂದಿದನು. —ಹೀಗೆಂಬುದಾಗಿ ಶಿವತತ್ತ್ವ ರತ್ನಾಕರ ಮಾತ್ರ ತಿಳಿಸುತ್ತದೆ.[51] ಆದರೆ ಈ ಬಗ್ಗೆ ಹಲವು ವಾದ ವಿವಾದಗಳಿವೆ.[52] ಈಗ ಇಮ್ಮಡಿ ಸದಾಶಿವ ಯಾರು? ಎಂಬುದೇ ಪ್ರಶ್ನೆ. ಕೆಲವು ಅಭಿಪ್ರಾಯಗಳನ್ನು ಗಮನಿಸೋಣ—

ಮೊದಲನೆಯದಾಗಿ, ಚೌಡಪ್ಪನ ಮಗ ಕೆಳದಿಯ ಸದಾಶಿವನಾಯಕನೇ ಇಮ್ಮಡಿ ಸದಾಶಿವನಿದ್ದಿರಬಹುದು. ಹೇಗೆಂದರೆ ಅವನ ಆಳ್ವಿಕೆಯ ಅವಧಿಯಲ್ಲಿ ವಿಜಯನಗರದ ರತ್ನಸಿಂಹಾಸನವನ್ನೇರಿದ್ದ ಚಕ್ರವರ್ತಿ ಸದಾಶಿವರಾಯ. ಚಕ್ರವರ್ತಿಗೂ, ಸಾಮಂತನಿಗೂ ವ್ಯತ್ಯಾಸ ಸೂಚಿಸುವ ಸಲುವಾಗಿ ಕೆಳದಿಯ ನಾಯಕನನ್ನು, "ಇಮ್ಮಡಿ ಸದಾಶಿವ" ಎಂದು ಕರೆದಿರಬಹುದು. ಸ್ಥೂಲವಾಗಿ ಈ

---

[51] ಶಿವತತ್ತ್ವ ರತ್ನಾಕರ V. V. 103 - 106.

[52] Vijayanagar Sex - Centenery Commemoration Volume P. 259-60 ರಲ್ಲಿ ಎಸ್. ಲಕ್ಷ್ಮೀನಾರಾಯಣರಾಯರು ಇಮ್ಮಡಿ ಸದಾಶಿವನು ದೊಡ್ಡಸಂಕಣ್ಣನೆಂತಲೂ, ಕೆ. ಡಿ. ಸ್ವಾಮಿನಾಥನ್‌ರವರು The Nayakas of Ikkeri (P. 30-31) ಯಲ್ಲಿ ಸದಾಶಿವನ ತಮ್ಮನಾದ ಭದ್ರಪ್ಪನೆಂದೂ ಅಭಿಪ್ರಾಯಪಟ್ಟಿದ್ದಾರೆ.

Q.J.M.S.—Volume IV, PP-92-98.

ರಲ್ಲಿರುವ ಬಾ. ರಾ. ಗೋಪಾಲ್‌ರವರ 'ಇಮ್ಮಡಿ ಸದಾಶಿವನಾಯಕ' ಎಂಬ ಲೇಖನ ನೋಡಿ.

ಅಭಿಪ್ರಾಯವನ್ನುಳ್ಳದ್ದು ಕೆಳದಿಯ ನೃಪವಿಜಯ.[53] ಎರಡನೆಯದಾಗಿ, ಕೆಳದಿ ಸದಾಶಿವನಾಯಕನ ತಮ್ಮನಾದ ಭದ್ರಪ್ಪನಾಯಕನು ತನ್ನ ಅಣ್ಣ ಸದಾಶಿವನಿಂದ ಅಭಿಷಿಕ್ತನಾಗಿ, ಅವನಿಂದಲೇ "ಇಮ್ಮಡಿ ಸದಾಶಿವ" ಎಂದು ನಾಮಾಂಕಿತನಾದವನು ಎಂಬ-ಶಿವತತ್ತ್ವರತ್ನಾಕರದ ಈ ಅಭಿಪ್ರಾಯವನ್ನು ಶ್ರೀ ಕೆ. ಡಿ. ಸ್ವಾಮಿನಾಥನ್ ರವರು ಸಮರ್ಥಿಸುತ್ತಾರೆ.[54] ಮೂರನೆಯದಾಗಿ, ಸದಾಶಿವರಾಯನಾಯಕನ ಹಿರಿಯ ಮಗನಾದ ದೊಡ್ಡಸಂಕಣ್ಣನಿಗೇ "ಇಮ್ಮಡಿ ಸದಾಶಿವ" ಎಂಬ ಹೆಸರಿದ್ದಿರಬೇಕು. ಈ ಅಭಿಪ್ರಾಯ ಸೂಚಿಸುವ ಶಾಸನವೊಂದಿದೆ.[55] ನಾಲ್ಕನೆಯದಾಗಿ, ಬಹು ವಿಚಿತ್ರ ಅಭಿಪ್ರಾಯವುಳ್ಳದ್ದು ಕುಬಟೂರಿನಲ್ಲಿ ಸಿಕ್ಕಿದ ಒಂದು ಸನ್ನದು. ಇದು ಸದಾಶಿವರಾಯಕ ಭದ್ರಪ್ಪನಾಯಕ, ದೊಡ್ಡಸಂಕಣ್ಣನಾಯಕ – ಈ ಮೂವರನ್ನೂ ಕೂಡಿಸಿ ಒಂದೇ ಒಂದು ಹೆಸರಿನಿಂದ ಸದಾಶಿವನಾಯಕ ಎಂದು ಕರೆದಿದೆ.[56] ಇದು ನಂಬಿಕೆಗೆ ದೂರವಾದುದು.

ಹೀಗೆ ಹಲವು ಭಿನ್ನ ಭಿನ್ನ ಅಭಿಪ್ರಾಯಗಳಿರುವುದರಿಂದ[57] ಈ ಬಗ್ಗೆ ಅಂತಿಮ ನಿರ್ಧಾರವೇನೂ ಇಲ್ಲ. ಆದರೆ ಪ್ರಸ್ತುತದಲ್ಲಿ ಶಿವತತ್ತ್ವ ರತ್ನಾಕರವನ್ನು ಆಧಾರವಾಗಿಟ್ಟುಕೊಂಡು, ಸದಾಶಿವನ ತಮ್ಮ ಭದ್ರಪ್ಪ ನಾಯಕನೇ ಇಮ್ಮಡಿ ಸದಾಶಿವನೆಂದೂ, ಕುಬಟೂರು ಸನ್ನದಿನ ಒಂದು ಅಂಶವನ್ನು ಒಪ್ಪುವುದಾದರೆ ಅದು ಭದ್ರಯ್ಯನದೆಂದು ಹೇಳುವ ಶಕ ೧೪೮೫ (ಕ್ರಿ.ಶ. ೧೫೬೩)ನ್ನೇ ಇಮ್ಮಡಿ ಸದಾಶಿವನ ಕಾಲವೆಂದೂ ಹೇಳಿದರೂ ಹೇಳಬಹುದು. ಹೇಗೆಂದರೆ-ಡಾ|| ಗೋಪಾಲ್ ರವರು ವಿಶ್ಲೇಷಿಸಿರುವ ಧಾರವಾಡ ಜಿಲ್ಲಾ ಹೀರೆಕೆರೂರು ತಾಲ್ಲೂಕಿನ ಸಾತೇನಹಳ್ಳಿಯ ಶಾಂತೇಶದೇವಾಲಯದ ಒಂದು ಶಾಸನದಲ್ಲೂ, ಸಹ "ಕೆಳದಿಯ ಶ್ರೀ ಮನ್ಮಹಾನಾಯಕಾಚಾರ್ಯ ಇಮ್ಮಡಿ ಸದಾಶಿವನಾಯಕರ ಕುಮಾರ ಸಂಕಣ್ಣ ನಾಯಕರು ಸಕಲ ಧರ್ಮದಲ್ಲಿ ರಾಜ್ಯವ ಪಾಲಿಸುತ್ತಿರೆ........"[58]

---

[53] ಕೆ.ನೃ.ವಿ. ಪು. 32.

[54] The Nayakas of Ikkeri, p. 30-31.

[55] M.A.R. 1938, No. 86, P. 208.

[56] ಅನುಬಂಧ 2 ನೋಡಿ.

[57] M,A.R. 1928, No. 65. —ಇದರ ಪ್ರಕಾರ ಚೌಡಗವುಡನ ಮಗ ಭದ್ರಗೌಡ, ಅವನ ಮಗ ಸದಾಶಿವ. ಇದು ಇನ್ನೂ ಗೊಂದಲವನ್ನೊಡ್ಡುವುದಾಗಿದೆ.

[58] Karnataka Inscriptions, Vol. IV, No. 8., 16-18ನೆಯ ಸಾಲುಗಳು.

ಇತ್ಯಾದಿ ಇದೆ. ಇಲ್ಲಿ ಡಾ|| ಗೋಪಾಲ್‌ರವರು ಶ್ರೀ ಲಕ್ಷ್ಮೀನಾರಾಯಣರಾಯರ ಅಭಿಪ್ರಾಯವನ್ನೇ ಸಮರ್ಥಿಸಿ ಹೇಳಿರುವಂತೆ, ಚಿಕ್ಕ ಅಥವಾ ದೊಡ್ಡ ಎಂಬ ವಿಶೇಷಣಗಳಿಲ್ಲದೆ ಬರೀ 'ಸಂಕಣ್ಣ' ಎಂದಿದ್ದರೆ ಅದು ಚಿಕ್ಕ ಸಂಕಣ್ಣನನ್ನು ಕುರಿತದ್ದು ಎಂದು ಸ್ಪಷ್ಟಪಡಿಸುವುದರಿಂದ, ಈ ಶಾಸನದ ಸಂಕಣ್ಣನಾಯಕನು ಚಿಕ್ಕಸಂಕಣ್ಣನೇ. ಇವನೇ ಇಮ್ಮಡಿ ಸದಾಶಿವನಾಯಕನ ಕುಮಾರ ಅಂದರೆ ಭದ್ರಪ್ಪನಾಯಕನ ಕುಮಾರ. ಹೇಗೆಂದರೆ, ಭದ್ರಪ್ಪನು ದೊಡ್ಡ ಮತ್ತು ಚಿಕ್ಕಸಂಕಣ್ಣರುಗಳ ತಂದೆಯಾದ ಸದಾಶಿವನಾಯಕನ ತಮ್ಮ. ಅಣ್ಣನ ಮಕ್ಕಳು ತನಗೂ ಮಕ್ಕಳೇ ಆಗಬೇಕು. ಆದ್ದರಿಂದ ಶಾಸನದಲ್ಲಿ 'ಕುಮಾರ' ಎಂದು ಬಳಸಿದೆ. ಈ ಹಲವು ಅಂಶಗಳ ಆಧಾರದ ಮೇಲೆ ಭದ್ರಪ್ಪನೇ ಇಮ್ಮಡಿ ಸದಾಶಿವನೆಂದು ಹೇಳಬಹುದಾಗಿದೆ. ಆದರೂ ಈ ಬಗ್ಗೆ ಸಂಶೋಧನೆಯ ಅಗತ್ಯವಿದೆ.

### ೪. ದೊಡ್ಡಸಂಕಣ್ಣನಾಯಕ (ಕ್ರಿ.ಶ. ೧೫೪೬–೧೫೭೦)

ಭದ್ರಪ್ಪ ಅಥವಾ ಇಮ್ಮಡಿ ಸದಾಶಿವನ ಅನಂತರ ಸದಾಶಿವನಾಯಕನ ಜ್ಯೇಷ್ಠ ಪುತ್ರನಾದ ಸಂಕಣ್ಣನಾಯಕನು ಇಕ್ಕೇರಿಯರಮನೆಯಲ್ಲಿ ಪಟ್ಟ ಕಟ್ಟಿಸಿ ಕೊಳ್ಳುತ್ತಾನೆ ಆದರೆ ಇವನು ಪಟ್ಟಕ್ಕೆ ಬಂದ ತೇದಿಯ ಬಗೆಗೆ ಸರಿಯಾದ ಮಾಹಿತಿ ಇಲ್ಲ.[59]

ದೊಡ್ಡಸಂಕಣ್ಣ ಓರ್ವ ರಾಜರ್ಷಿ. ಭೋಗ ಯೋಗಗಳನ್ನು ಕಂಡು ಉಂಡವನು. ಅವನ ಬಾಳಿನಲ್ಲಿ ಈ ವಿರುದ್ಧಾಂಶಗಳ ಸುಂದರ ಸಮನ್ವಯತೆಯನ್ನು ಕಾಣುತ್ತೇವೆ. ಇದಕ್ಕೆ ನಿದರ್ಶನವಾಗಿ ಅವನ ಬದುಕಿನ ಹಲವು ಘಟನೆಗಳನ್ನು ಇಲ್ಲಿ ಗಮನಿಸಬಹುದು.

"ಅರಿಗಜಕೇಸರಿಯಾದ ಸಂಕಣ್ಣನು ಜಂಬೂರ ವಿರೂಪಣ ಒಡೆಯನನ್ನು ಸೋಲಿಸಿ ಜಂಬೂರನ್ನೂ, "ಕಣ್ಗಿಂಬಾಡ" ಉಡುಗುಣಿಯ ಕೋಟೆಯನ್ನು

---

[59] ಕೆ.ನೃ.ವಿ.ಪು. 53 —(ಶಾಲಿವಾಹನ ಶಕ 1486 ನೆಯ ವಿಶ್ವಾವಸು ಸಂವತ್ಸರದ ವೈಶಾಖ ಶುದ್ಧ 5 ರಲ್ಲಿ ಎಂದಿದೆ. ಇದು 1468 ಇದ್ದಿರಬೇಕು. ಎನ್. ಲಕ್ಷ್ಮೀನಾರಾಯಣ ರಾಯರು ಕ್ರಿ.ಶ, 1563 ರಿಂದ 1570 ಎಂದು Vij. Sex. Cent. Com. vol. P. 257ರಲ್ಲಿ ಹೇಳಿದ್ದಾರೆ. ಯಾವುದೂ ಸರಿಯಾದಂತಿಲ್ಲ. ಬಹುಶಃ ಸದಾಶಿವನಾಯಕ ಮತ್ತು ದೊಡ್ಡ ಸಂಕಣ್ಣ — ಇವರ ಮಧ್ಯೆ ಇಮ್ಮಡಿ ಸದಾಶಿವನೊಬ್ಬ ಆಳಿರಬೇಕು. ಕಾಲ ನಿರ್ಧಾರ ಸಾಧ್ಯವಾಗುತ್ತಿಲ್ಲ.

ವಶಪಡಿಸಿಕೊಳ್ಳುತ್ತಾನೆ. ವಿರೂಪಣ್ಣನು ವಿದ್ಯಾನಗರದ ಒಡೆಯರಿಗೆ ದೂರಲು, ಸಂಕಣ್ಣನು ತಾನು ವಶಪಡಿಸಿಕೊಂಡಿದ್ದ ಭಾಗಗಳನ್ನು ಅವನಿಗೇ ಬಿಟ್ಟು ಕೊಟ್ಟು ಸಂನ್ಯಾಸಿಯಂತೆ ವೇಷ ಧರಿಸಿ ಭಾರತ ಪ್ರವಾಸ ಕೈಗೊಳ್ಳುತ್ತಾನೆ. ದೆಹಲಿಯ ಸುಲ್ತಾನನ ಆಸ್ಥಾನದಲ್ಲಿದ್ದ ಅಂಕುಶಖಾನನನ್ನು ಶ್ರೀ ರಾಮೇಶ್ವರ ಲಿಂಗಪ್ರಸಾದದಿಂದ ಸಂಪ್ರಾಪ್ತವಾದ ತನ್ನದೇ ಆದ ಖಡ್ಗದಿಂದ ಗೆದ್ದು ತನ್ನ ತಾಯ್ನಾಡಿಗೆ ಹಿಂತಿರುಗಿ ಪ್ರಭುವಿನ್ನಣೆಯನ್ನು ಪಡೆದು ಮತ್ತೆ ತನ್ನ ರಾಜ್ಯಾಧಿಕಾರವನ್ನು ಸ್ವೀಕರಿಸುತ್ತಾನೆ. ತನ್ನ ರಾಜ್ಯಕ್ಕೆ ಹಿಂತಿರುಗುವ ಮುನ್ನ ದೆಹಲಿಯಲ್ಲಿ "ಚಾವಲಿಕೆಮುಂಡ್ಯೆ" ಎಂಬ ಸ್ಥಳದಲ್ಲಿ ಮನೋಹರವಾದ ಮಠವೊಂದನ್ನು ಕಟ್ಟಿಸಿ ಶಿವಜಂಗಮ ಧರ್ಮಕ್ಕೆ ಶಿವಾರ್ಪಣಗೈದು ಕಾಶೀಕ್ಷೇತ್ರಕ್ಕೆ ಹೋಗಿ, ಅಲ್ಲಿಯೂ ಸಹ ಶಿವಜಂಗಮ ಧರ್ಮಾರ್ಥವಾಗಿ ಪಂಚಮಠಗಳನ್ನು ಕಟ್ಟಿಸಿ, ಅವಕ್ಕೆ ಭೂಸ್ವಾಸ್ತೆ ಯನ್ನು ಬಿಡಿಸಿ ಕಪಿಲಧಾರಾತೀರ್ಥ, ಮಾನಸಸರೋವರ, ಗಂಧರ್ವ ಸಾಗರ ಎಂಬ ತೀರ್ಥಗಳನ್ನು ಶಿಲಾಮಯವನ್ನಾಗಿಸಿ ವೈಯಪ್ಪನೆಂಬ ಸೇನುಭೋವನ ಮುಖಾಂತರ ಕರ್ದಮೇಶ್ವರ, ನರ್ಮದೇಶ್ವರ, ಭೀಮಚಂಡಿಕೆ, ವೃಷಭಧ್ವಜೇಶ್ವರ ಮೊದಲಾದ ದೇವಸ್ಥಾನಗಳ ಜೀರ್ಣೋದ್ಧಾರಮಾಡಿಸಿ, ಕೇದಾರ, ಗಯೆ, ಹರಿದ್ವಾರ, ಕಾಶ್ಮೀರ, ನೇಪಾಳ, ಮೊದಲಾದೆಡೆಗಳಲ್ಲಿ ಸಂಚರಿಸಿ, ಪೈಠಣಕ್ಕೆ ಬಂದು ಅಲ್ಲಿ ಅಘೋರಮೂರ್ತಿಯನ್ನು ಕಂಡು "ಕಾಗದದೊಳ್ ತದ್ ಆಕಾರಮಂ ಚಿತ್ರಿಸಿ", ಪಂಪಾಕ್ಷೇತ್ರದ ಮಾರ್ಗವಾಗಿ ಮಾಸೂರು ಸೀಮೆಯ ಆಲವಳ್ಳಿ[60] ಎಂಬ ಗ್ರಾಮದಲ್ಲಿ ಬಂದು ಮಲಗಿರಲು ಆ ಊರ ಕೆರೆಯಲ್ಲಿದ್ದ ವೀರಭದ್ರಮೂರ್ತಿಯು ಸಂಕಣ್ಣನ ಸ್ವಪ್ನದಲ್ಲಿ ಜಂಗಮ ರೂಪದಲ್ಲಿ ಕಾಣಿಸಿಕೊಂಡು "ಎನ್ನಂ ನಿನ್ನ ರಾಷ್ಟ್ರಕ್ಕೆ ತೆಗೆದುಕೊಂಡು ಪೋಗಿ ಪ್ರತಿಷ್ಠೆಯಂ ರಚಿಸಿ ಪೂಜಿಸಲ್ ನಿನಗೆ ಸಮಸ್ತ ಮನೋಭಿಷ್ಟಂಗಳನೀವೆನೆಂದು ಉಸಿರ್ದು ಅಂತರ್ಧಾನನಾಗಲು, ಸಂಕಣ್ಣನು ಕೆಳದಿಪುರಕ್ಕೆ ಬಂದು, ರಾಮೇಶ್ವರನ ಬಲ ಭಾಗದಲ್ಲಿ ಆ ವೀರಭದ್ರನನ್ನು ಪ್ರತಿಷ್ಠಾಪಿಸಿ, ಶಿಲಾಮಯವಾದ ಗರ್ಭಗುಡಿಯನ್ನು ಕಟ್ಟಿಸಿ, ಅದಕ್ಕೆ ಭೂಸ್ವಾಸ್ತೆ ಯನ್ನು ಬಿಡಿಸಿ ಪೈಠಣದಿಂದ ತಂದಿದ್ದ ಅಘೋರನಂತೆ, ಇಕ್ಕೇರಿಯಲ್ಲಿ ಅಘೋರೇಶ್ವರನನ್ನು ಪ್ರತಿಷ್ಠಾಪಿಸುತ್ತಾನೆ.[61]

ಈ ನಿದರ್ಶನಗಳಿಂದ ದೊಡ್ಡ ಸಂಕಣ್ಣನಾಯಕನ ಪರಾಕ್ರಮ, ಔದಾರ್ಯ,

[60] ಶಿವ.ರತ್ನಾಕರದಲ್ಲಿ 'ಪಟಹಳ್ಳಿ' ಎಂದಿದೆ. V, IX, 69-70.

[61] ಅದೇ, v, x, 183-184; ವೀರಶೈವಾನಂದಚಂದ್ರಿಕಾ I ಶ್ಲೋಕ - 33.

ಧಾರ್ಮಿಕಶ್ರದ್ಧೆ, ಕಲಾಭಿಜ್ಞತೆಗಳು ವೇದ್ಯವಾಗುತ್ತವೆ.[62] ಅವನ ಆಸ್ಥಾನ ಕವಿ ಚೆನ್ನವೀರ ಮಾಹೇಶ್ವರ. ಕುಲಗುರುವೂ ಹೌದು. ಚೆನ್ನವೀರನು ಸುಮಾರು ಆರು ಗ್ರಂಥಗಳನ್ನು ರಚಿಸಿದ್ದಾನೆ. ದೊಡ್ಡ ಸಂಕಣ್ಣನ ಬಗೆಗೆ ಹೆಚ್ಚು ಶಾಸನಗಳು ದೊರಕಿಲ್ಲವಾದರೂ ಸಾಕಷ್ಟು ಗ್ರಾಂಥಿಕ ಆಧಾರಗಳಿವೆ.[63] ಅವುಗಳಿಂದ ಇನ್ನೂ ಹಲವು ವಿಷಯಗಳು ತಿಳಿಯುತ್ತವೆ.

ದೊಡ್ಡ ಸಂಕಣ್ಣನು, ಮಲೆತ ಅತಿ ತಾಮಸದ ತುರುಷ್ಕರ ಆದಟನ್ನು ಉಡುಗಿಸಿ, ಎರ್ರಪಂಣನಂತಹ ಸಾಧಾರಣ ಸಾಮಂತನನ್ನು ಗೆದ್ದು, ಗೆರುಸೊಪ್ಪೆಯ ಭೈರಾದೇವಿಯ ಕೋಟೆಯನ್ನು ಧೂಳಿಪಟಮಾಡಿ ಗೋವೆಯ ಪೋರ್ಚುಗೀಸರನ್ನು ರಾಮರಾಯನ ತಮ್ಮನಾದ ವಿಠಲರಾಯನೊಡನೆ ಹೋಗಿ, ಸೋಲಿಸಿ, ಅವರ ಗೌರ್ನರನ್ನು ಸೆರೆ ಹಿಡಿದದ್ದಕ್ಕಾಗಿ ವಿಜಯನಗರದ ಅರಸನಿಂದ ಮಹಾದೇವಪುರವನ್ನು ಬಳುವಳಿಯಾಗಿ ಪಡೆಯುತ್ತಾನೆ. ಮಾಸೂರು, ಹೊಳೇಹೊನ್ನೂರು ಜೀವಿಮಲ್ಲೂರು —ಇವುಗಳನ್ನು ತನ್ನ ಮಕ್ಕಳ 'ಪಾಲ್ಬೆಣ್ಣೆ ಉಂಬಳಿಯಾಗಿ ಪಡೆಯುತ್ತಾನೆ.'

ಇವೆಲ್ಲಕ್ಕಿಂತಲೂ ಗಮನಾರ್ಹವಾದದ್ದು ದೊಡ್ಡಸಂಕಣ್ಣನ ಕಾರ್ಕಳದ ದಂಡಯಾತ್ರೆ. ಅಲ್ಲಿದ್ದ ಭೈರಸವೊಡೆಯನನ್ನು ಪರಾಭವಗೊಳಿಸಿ, ಸಂಕಣ್ಣನು ಆವನಿಂದ ಕಪ್ಪವನ್ನು ಸ್ವೀಕರಿಸುತ್ತಾನೆ. "ಕಾರ್ಕಳದ ಭೈರಸವೊಡೆಯನೂ ಸಹ ಕೆಳದಿಯ ದೊಡ್ಡಸಂಕಣ್ಣನಂತೆ ವಿಜಯನಗರದ ಸಾಮಂತ. ಆದರೂ ದೊಡ್ಡ ಸಂಕಣ್ಣನು ಅವನ ಮೇಲೆ ದಂಡೆತ್ತಿಹೋದದ್ದು ಅವನ ಸ್ವತಂತ್ರ ಮನೋಭಾವವನ್ನು ವ್ಯಕ್ತಪಡಿಸುತ್ತದೆ. ಅಲ್ಲದೆ, ವಿಜಯನಗರವು ನಿಧಾನವಾಗಿ ಕೆಳದಿಯ ಮೇಲಿದ್ದ ತನ್ನ ಪ್ರಭುತ್ವವನ್ನು ಕಳೆದುಕೊಳ್ಳುತ್ತಿದ್ದಿತು" ಎಂಬುದಾಗಿ ಶ್ರೀ ಕೆ. ಎನ್. ಚಿಟ್ನೀಸರು ಅಭಿಪ್ರಾಯಪಟ್ಟಿದ್ದಾರೆ.[64] ಆದರೆ ದೊಡ್ಡಸಂಕಣ್ಣನಲ್ಲಿದ್ದ ಸ್ವಾತಂತ್ರ್ಯ ಪ್ರವೃತ್ತಿಯು ಅವನು ಜಂಬೂರ ವಿರೂಪಂಣನ ಮೇಲೆ ಧಾಳಿ ನಡೆಸಿದಾಗಲೇ ತಿಳಿಯುತ್ತದೆ.

---

[62] "Sankanna Nayaka, a great king a distinguished hero, unparallelled in sword-fight, a great Artist, a great Scholar, a great donar of gifts and Charties and one of the rare kings who have been raised to devenity as a "SARANA" had his Samadhi in Koppala cremetery at Ikkeri" - Dr. Kadadevaranath, Kannada - During Keladi.

[63] ಕೆ.ನೃ.ವಿ.; ಶಿವತತ್ವರತ್ನಾಕರ; ವೀರಶೈವಧರ್ಮಶಿರೋಮಣಿ; ಹಾಗೂ ಇವುಗಳನ್ನೇ ಆಧರಿಸಿ ರಚಿಸಿದ Q.J.M.S. ಲೇಖನಗಳು; Father Herasರವರ The Aravidu dynasty ಮೊದಲಾದವುಗಳು.

[64] Chitnis, Keladi Administration, P. 27.

ದೊಡ್ಡಸಂಕಣ್ಣ ನಿಜಕ್ಕೂ ದೊಡ್ಡವನು-ಹೆಸರಿನಲ್ಲಿ, ಆಳ್ವಿಕೆಯಲ್ಲಿ, ಹಾಗೂ ಆಂತರಿಕ ವ್ಯಕ್ತಿತ್ವದಲ್ಲಿ. ಕವಿಲಿಂಗಣ್ಣನು ಅವನ ಬಗೆಗೆ-

ಬಗೆ ಬಗೆಯ ದಾನಧರ್ಮ
ದಿಗಳಂ ಶಾಸ್ತ್ರೋಕ್ತ ಮಾರ್ಗದಿಂ ವಿರಚಿಸಿ ಮೂ
ಜಗವ್ಮೆದೆ ಪೊಗಳೆ ತನ್ನಪ
ನಗಣಿತ ಸದ್ಧರ್ಮದಿಂದಮಿಳೆಯಂ ಪೊರೆದಂ ||[65]

—ಹೀಗೆ ಹೇಳಿದ್ದಾನೆ. ದೊಡ್ಡಸಂಕಣ್ಣನ ಹಿರಿಮೆಗೆ ಇದಿಷ್ಟೇ ಮಾತು ಸಾಕು.

## ೫. ಚಿಕ್ಕಸಂಕಣ್ಣನಾಯಕ (ಕ್ರಿ. ಶ. ೧೫೫೯-೧೫೭೦)

ದೊಡ್ಡಸಂಕಣ್ಣನನಂತರ ಚಿಕ್ಕಸಂಕಣ್ಣನು ಪಟ್ಟಕ್ಕೆ ಬರುತ್ತಾನೆ. ಬಹು ದಕ್ಷತೆಯಿಂದಲೇ ರಾಜ್ಯವಾಳಿದುದಾಗಿ ತಿಳಿದುಬರುತ್ತದೆ. ಸೋದೆಯ ಹಿರಿಯ ಅರಸಪ್ಪ ನಾಯಕನನ್ನೂ, ಅವನೊಡನೆ ಬಂದ ವಿಜಾಪುರದ ಸಲಾಬಿತ್‌ಖಾನನನ್ನೂ. ಗೋಲ್ಕೊಂಡ ಅಹಮ್ಮದ್ ನಗರಗಳ ಕುತುಬ್‌ಶಾಹ, ನಿಜಾಮುಶಾಹರನೂ ಸದೆಬಡಿಯುತ್ತಾನೆ. ಭೈರಾದೇವಿಯ ಮೇಲೆ ದಂಡೆತ್ತಿ ಹೋಗಿ ಜಯಶೀಲನಾಗುತ್ತಾನೆ. ಉಡುಗಣಿಯ ಕೋಟೆಯನ್ನು ಹಿಡಿದು ರಾಜ್ಯವಿಸ್ತರಣೆಯ ಕಾರ್ಯವನ್ನು ನೆರವೇರಿಸುತ್ತಾನೆ. ಈ ಪೌರುಷ ಪ್ರದರ್ಶನ ಅವನಲ್ಲಿದ್ದ ಸ್ವಾತಂತ್ರ್ಯ ಮನೋವೃತ್ತಿ ಮತ್ತು ಸಾರ್ವಭೌಮತ್ವಗಳಿಗೆ ಒಡ್ಡಿದ ನಿದರ್ಶನ ಎನ್ನಬಹುದು.

## ೬. ರಾಮರಾಜ ನಾಯಕ (ಕ್ರಿ. ಶ. ೧೫೭೦-೧೫೮೩)

ಚಿಕ್ಕಸಂಕಣ್ಣನ ಅನಂತರ ದೊಡ್ಡಸಂಕಣ್ಣನ ಮಗನಾದ ರಾಮರಾಜನು ಪಟ್ಟಕ್ಕೆ ಬರುತ್ತಾನೆ. ತನ್ನ ಚಿಕ್ಕಪ್ಪನಿಗೆ ಆಡಳಿತದಲ್ಲಿ ನೆರವು ನೀಡಿದ್ದಾನೆ.[66] 'ಅಂಕೆ, ಝುಂಕೆ, ಆಣೆ ಘೋಷಣೆ' ಮುಂತಾದ ರಾಜಧರ್ಮದೊಳಾವುದರಲ್ಲಿಯುಂ ಕೊರತೆ ಬಾರದಂತು ವರ್ತಿಸುತ್ತುಂ' ಚಾರುಯಶನೆನಿಸಿ, ರಾಜ್ಯಪಾಲನೆ ಮಾಡುತ್ತಾನೆ.[67]

---

[65] ಕೆ.ನೃ.ವಿ.ಪು. 64.

[66] A.R.S.I.E. 267 of 1931 - 32.

ಎಚ್. ತಿಪ್ಪೇರುದ್ರಸ್ವಾಮಿಯವರು — ಈತನು ತನ್ನ ಚಿಕ್ಕಪ್ಪನನ್ನು ಕೊಂದು ತಾನೇ ರಾಜನಾದನೆಂದು ಹೇಳುತ್ತಾರೆ. (ಕರ್ನಾಟಕ ಸಂಸ್ಕೃತಿ ಸಮೀಕ್ಷೆ. ಪು. 156) ಆದರೆ ಅದಕ್ಕೆ ಹೆಚ್ಚಿನ ಆಧಾರಗಳು ಇದ್ದಂತಿಲ್ಲ.

[67] ಕೆ.ನೃ.ವಿ. ಪು. 68-69.

# IV ಏಳಿಗೆ

## ೬. ಹಿರಿಯ ವೆಂಕಟಪ್ಪನಾಯಕ (ಕ್ರಿ. ಶ. ೧೫೮೬-೧೬೩೦)

ಕೆಳದಿಯ ಇತಿಹಾಸದಲ್ಲಿ ಹಿರಿಯ ವೆಂಕಟಪ್ಪನ ಆಳ್ವಿಕೆ ಒಂದು ಸುವರ್ಣಸಂಪುಟ. ಕರ್ನಾಟಕದ ಹಾಗೂ ದಕ್ಷಿಣ ಭಾರತದ ಇತಿಹಾಸದಲ್ಲಿ ಈತನ ಕಾಲಕ್ಕೆ ಅತ್ಯಂತ ಮಹತ್ವದ ಸ್ಥಾನವಿದೆ. ಏಕೆಂದರೆ ರಕ್ಕಸತಂಗಡಿಯ ಯುದ್ಧಾನಂತರ (ಕ್ರಿ.ಶ.೧೫೬೫) ದುಷ್ಟ ಪರಿಣಾಮಕ್ಕೆ ದಕ್ಷಿಣ ಭಾರತ ಬಲಿಯಾಗುತ್ತಿತ್ತು. ರಕ್ಷಕರಿಲ್ಲದೆ ದಾಕ್ಷಿಣಾತ್ಯರ ಧರ್ಮ, ಸಂಸ್ಕೃತಿ, ಸಾಮ್ರಾಜ್ಯ ಯಾವುದೂ ಉಳಿಯುವಂತಿರಲಿಲ್ಲ. ಅಂತಹ ಸಂದಿಗ್ಧ ಸಮಯದಲ್ಲಿ ಹಿರಿಯ ವೆಂಕಟಪ್ಪನಂತಹ ಮಹಾಪುರುಷನು ರಾಜ್ಯ ಸೂತ್ರವನ್ನು ಹಿಡಿದು ರಾಷ್ಟ್ರರಕ್ಷಣೆ ಮಾಡಿದ. ಅವನ ದಕ್ಷತೆ, ನಿಷ್ಠೆ, ಸ್ವಾಭಿಮಾನ, ಆಡಳಿತ ಕುಶಲತೆ ಇವುಗಳು ಆದರ್ಶಪ್ರಾಯವಾದುವು. ಕೆಳದಿಯ ಕಿರೀಟಪತಿಗಳಲ್ಲಿ ಹಿರಿಯ ವೆಂಕಟಪ್ಪ ಬಹು ಸಮರ್ಥ ಹಾಗೂ ಹಿರಿಯ ವ್ಯಕ್ತಿ[68]

ಕೆಳದಿ ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆದದ್ದು ಇವನ ಕಾಲದಲ್ಲೇ. ಕಡೆಯ ಪಕ್ಷ ೧೬೧೮ರವರೆಗಾದರೂ ಇವನು ವಿಜಯನಗರಕ್ಕೆ ಅಧೀನನಾಗಿದ್ದಿರಬಹುದು. ಆದರೆ ಪಿಟ್ರೊಡೆಲ್ಲಾ ವಿಲ್ಲಿಯು ಇವನ ಆಸ್ಥಾನಕ್ಕೆ ಭೇಟಿ ಕೊಟ್ಟಾಗ (ಕ್ರಿ. ಶ. ೧೬೨೩) ವೆಂಕಟಪ್ಪ ಸ್ವತಂತ್ರನಾಗಿದ್ದನೆಂದು ತಿಳಿಯುತ್ತದೆ.[69] ಆದರೆ ಸ್ವಾತಂತ್ರ್ಯದ ಅರ್ಥ ಸ್ವೇಚ್ಛಾಚಾರವಲ್ಲ. ಇದನ್ನರಿತಿದ್ದ ಮಹಾಪ್ರಾಜ್ಞನಾದ ವೆಂಕಟಪ್ಪನು ವಿಜಯನಗರದ ರತ್ನಸಿಂಹಾಸನಕ್ಕೆ ವಿಧೇಯತೆಯಿಂದ ಗೌರವವನ್ನು ಸಲ್ಲಿಸುತ್ತಾ, ಧರ್ಮವನ್ನೂ ದೇಶವನ್ನೂ ಪರಕೀಯರ ದುರಾಕ್ರಮಣದಿಂದ ರಕ್ಷಿಸಿ ಭಾರತೀಯರ ಕೃತಜ್ಞತೆಗೆ ಪಾತ್ರನಾಗಿದ್ದಾನೆ. ರಾಜಕೀಯ ಹಾಗೂ ಸಂಸ್ಕೃತಿ–ಈ ಎರಡು ದೃಷ್ಟಿಯಿಂದಲೂ ವೆಂಕಟಪ್ಪನ ಆಳ್ವಿಕೆ ಶ್ರೇಷ್ಠತೆಯನ್ನು ಪಡೆದಿದೆ ಎಂದರೆ ಅತಿಶಯೋಕ್ತಿಯಾಗಲಾರದು.

ಕೆಳದಿಯ ರಾಜರ್ಷಿ ದೊಡ್ಡಸಂಕಣ್ಣ ನಾಯಕನ ಪುತ್ರನಾದ ವೆಂಕಟಪ್ಪ ನಾಯಕನು ಕ್ರಿ.ಶ. ೧೫೮೬ ರಿಂದ ೧೬೩೦ ರವರೆಗೆ ಕೆಳದಿಯನ್ನಾಳಿದ್ದಾನೆ. ಈತನು ದೊಡ್ಡಸಂಕಣ್ಣನ ತೀರ್ಥಯಾತ್ರೆಯ ಪುಣ್ಯಫಲವಂತೆ! ಕಲಿಯುಗ

---

[68]Chitnis, Keladhi Administration, P. 28

[69]Della Valle, Travels I, P. 191.

ರಾಮನಂತೆ! ಈ ಪ್ರಖ್ಯಾತ ಪುರುಷನು "ಖ್ಯಾತ ಕರ್ನಾಟಕಕ್ಕೆ ವಜ್ರಪಂಜರ" ನೆನಿಸಿ ಮೆರೆದಿದ್ದಾನೆ.[70]

ಒಡೆಸು ಆಳುವ ನೀತಿಯಲ್ಲಿ ಪರಿಣತರಿದ್ದ ಪೋರ್ಚುಗೀಸರಿಗೆ ವೆಂಕಟಪ್ಪ ಸರಿಯಾದ ಪಾಠ ಕಲಿಸುತ್ತಾನೆ. ಅವರ ಪರವಾಗಿ ಬಂದ ದೇಶೀಯ ರಾಜ ಬಂಗಾರರಾಜನನ್ನೂ ಪೋರ್ಚುಗೀಸರಿಗೆ "ಮೆಣಸು ಮಹಾರಾಣಿ" ಎಂದು ಪ್ರಖ್ಯಾತ ಳಾಗಿದ್ದ ಗೆರುಸೊಪ್ಪೆಯ ಭೈರಾದೇವಿಯನ್ನೂ ಸದೆಬಡಿದು, ಕ್ರಿ.ಶ. ೧೬೨೩ ರಲ್ಲಿ ತನ್ನ ಆಸ್ಥಾನಕ್ಕೆ ಅವರ ಕಡೆಯಿಂದ ಬಂದ ರಾಯಭಾರಿಗಳೊಡನೆ ಸಂಬಾರ ಪದಾರ್ಥಗಳ ವಾಣಿಜ್ಯದ ಬಗ್ಗೆ ಒಂದು ಕೌಲು ಮಾಡಿಕೊಳ್ಳುತ್ತಾನೆ. ಬ್ರಿಟಿಷ ರೊಡನೆಯೂ ಇಂಥದೇ ಸಂಬಂಧ ಹಾಗೂ ವ್ಯವಹಾರ ತಂತ್ರವನ್ನು ತಳೆದಿದ್ದನೆಂದು ತಿಳಿಯುತ್ತದೆ.

ರಣದುಲ್ಲಾ ಖಾನನ ನೇತೃತ್ವದಲ್ಲಿ ದಂಡೆತ್ತಿ ಬಂದ ಬಿಜಾಪುರದ ಸೇನೆಯನ್ನೂ, ಉಲ್ಲಾಳದ ರಾಣಿಯನ್ನೂ, ಜಡೆಯ ಕೋಂಟೆಯನ್ನು ವೇಢೈಸಿದ ಹಲವು ಮುಸಲ್ಮಾನರನ್ನೂ ತಡೆದು, ಹೊಳೇಹೊನ್ನೂರಿನ ಹನುಮಪ್ಪ ಮತ್ತು ಮಂಜುಳಖಾನ –ಇವರ ಒಟ್ಟುಗೂಡಿದ ಸೇನೆಯನ್ನು ಸದೆಬಡಿದು ತನ್ನ ವೈಜಯಂತಿಯನ್ನು ಮೇಲೇರಿಸಿ, ಹಾನಗಲ್ಲಿನವರೆಗೂ ರಾಜ್ಯ ವಿಸ್ತರಣೆ ಮಾಡುತ್ತಾನೆ. ಮಲೆನಾಡಿನ ಮಹಾಭಾಗಕ್ಕೆ ಒಡೆಯನಾಗಿದ್ದುದಷ್ಟೇ ಅಲ್ಲದೆ, ಈತನು, "ಕೊಡಗರನೊಳಗೆನಿಸಿ ಸಾರ್ದು ಗೋರಾಷ್ಟ್ರದ ನಾಲ್ಗಡೆಯಂ ಸಾಧಿಸಿ, ಪಡುಗಡಲೊಡೆಯ ಎಂಬ ಬಿರುದಿಗೂ, 'ತುಳು ಮಲೆರಾಯರ ಒಡೆಯ'ನೆಂಬ ಖ್ಯಾತಿಗೂ ಪಾತ್ರನಾಗಿದ್ದಾನೆ. ಈತನಿಗೆ 'ದೋಖಂಡೇರಾಯ' 'ದೋನೇಜ' ಮೊದಲಾದ ಬಿರುದುಗಳೂ ಇದ್ದುವು. ಈತ ಮಹಾಯೋಧ. ತನ್ನ ಬಾಹುಬಲದಿಂದಲೇ ರಾಜ್ಯವನ್ನು ಸುವ್ಯವಸ್ಥೆಗೊಳಿಸಿ ನಾಡಿನ ಅಭ್ಯುದಯಕ್ಕೆ ಕಾರಣನಾಗಿದ್ದಾನೆ. ಕುಂಭಸೆ ಮತ್ತು ದಾನಿವಾಸಗಳನ್ನು ಆಳುತ್ತಿದ್ದ ಬೊಂಮಣ, ವೀರಣರೆಂಬ ಅದಟರನ್ನು ಮುರಿದು, ಆ ಕೋಟೆಗಳನ್ನೂ, ಹೆಬ್ಬೆ, ಆಗರ ಕೋಟೆಗಳನ್ನೂ ತನ್ನ ವಶಕ್ಕೆ ತೆಗೆದುಕೊಳ್ಳುತ್ತಾನೆ. ಬಂಕೀಪುರದ ನರಶಿಂಗ ನಾಯಕನ ಶೌರ್ಯಾತಿಶಯವನ್ನು ಉಡುಗಿಸಿ, ಹೊಸಂಗಡಿಯ ಹೊನ್ನೆಯ ಕಂಬಳಿ ಎಂಬ ಮನ್ನೆಯನ ಮಂತ್ರಿಯಾದ ಶಂಕರನಾರಾಯಣಭಟ್ಟನೆಂಬುವನು ಸ್ವತಂತ್ರನಾಗಿ ಮೆರೆಯುತ್ತಿರಲು, ಅವನನ್ನೂ ಸೆರೆಹಿಡಿಸಿ ಕೊಲ್ಲದೆ ಕರುಣಿಸುತ್ತಾನೆ.

ನಮ್ಮ ಧರ್ಮ, ಸಂಸ್ಕೃತಿ, ಸಾಹಿತ್ಯ ಇತ್ಯಾದಿಗಳೂ ವೆಂಕಟಪ್ಪನ

---

[70] ಕರ್ನಾಟಕ ಶಿವಗೀತೆ. ಪು. 3; ಪದ್ಯ. 9—10.

ಆಶ್ರಯದಲ್ಲಿ ಬೆಳಕು ಕಂಡಿವೆ. ಈಗಿನ ಕವಿಲೆದುರ್ಗದ ಕೋಟೆಯನ್ನು[71] ಬಲಪಡಿಸಿ ಅದಕ್ಕೆ "ಭುವನಗಿರಿದುರ್ಗ" ವೆಂದು ಹೆಸರಿಟ್ಟು, ಅಲ್ಲಿ ದೊಡ್ಡ ಸಂಕಣ್ಣ ನಾಯಕನು ಕಾಶೀಕ್ಷೇತ್ರದಿಂದ ತಂದಿದ್ದ, "ದಿವ್ಯ ಶಿವಲಿಂಗಮಂ ವಿಶ್ವೇಶ್ವರಲಿಂಗ ಮೆಂದಾಗಮ ವಿಧಾನದಿಂ" ಪ್ರತಿಷ್ಠೆ ಮಾಡಿಸುತ್ತಾನೆ. ಅನಂತಶಿವಪೂರ್ವಕವಾದ ಸ್ಥಳವನ್ನು "ಆನಂದಾಪುರ" ಎಂಬುದಾಗಿ ಕರೆದು, ಅಲ್ಲಿ ತಾಂಡವೇಶ್ವರ, ಶ್ರೀರಂಗನಾಥ, ಮೊದಲಾದ ದೇವಾಲಯಗಳನ್ನು ಕಟ್ಟಿಸಿ, ಕೆಳದಿಯಲ್ಲಿ ಶ್ರೀರಾಮೇಶ್ವರ ದೇವಾಲಯ ವನ್ನು ಶಿಲಾಮಯ ಮಾಡಿಸುತ್ತಾನೆ. ಭದ್ರರಾಜಪುರವೆಂಬ ಪೇಟೆಯನ್ನು ಕಟ್ಟಿಸಿ, ತನ್ನ ತಾತನ ಹೆಸರಿನಲ್ಲಿ ಇಕ್ಕೇರಿಪುರವರದ ಮಧ್ಯದಲ್ಲಿ ಸದಾಶಿವಸಾಗರವೆಂಬ ಪೊಳಲನ್ನೂ, ಅಲ್ಲಿ ಚಂದನಬನವೆಂಬ ನಂದನವನ್ನೂ ರಚನೆಗೊಳಿಸಿ, ಮಹಾಗಣಪತಿ ದೇವಾಲಯ ವನ್ನೂ, ವರದಾನದೀ ತೀರದಲ್ಲಿ ವಿಶ್ವನಾಥಪುರವೆಂಬ ಅಗ್ರಹಾರವನ್ನೂ, ಭೀಮನ ಕಟ್ಟೆಯಲ್ಲಿ ವೀರಾಂಬಾಪುರವೆಂಬ ಅಗ್ರಹಾರವನ್ನೂ, ಭಾರಂಗಿಯಲ್ಲಿ ಶರಾವತೀ ತೀರದಲ್ಲಿ ಸ್ವಪತ್ನಿಯ ಹೆಸರಿನಲ್ಲಿ ಅಭಿನವ ವೀರಾಂಬಾಪುರವೆಂಬ ಅಗ್ರಹಾರವನ್ನೂ ನಿರ್ಮಿಸಿ, ಶ್ರೋತ್ರೀಯ ಬ್ರಾಹ್ಮಣರಿಗೆ ಧಾರೆಯೆರೆದು ಸ್ಥಿರಶಾಸನ ಹಾಕಿಸಿಕೊಡು ತ್ತಾನೆ. ಅನೇಕ ಕಡೆಗಳಲ್ಲಿ ಅರಮನೆಗಳನ್ನೂ, ತಟಾಕಗಳನ್ನೂ ಕಟ್ಟಿಸುತ್ತಾನೆ. "ಗಣೇಶದೀಕ್ಷಿತರ ಕಯ್ಯಿಂದ ವಾಜಪೇಯ" ಯಾಗವನ್ನು ನೆರವೇರಿಸಿಕೊಡುತ್ತಾನೆ. ಬಾರಕೂರು, ಬೆಣ್ಣೆವಳ್ಳಿ, ಅರಗ, ಶಂಕರನಾರಾಯಣ, ಸಾಗರ, ಬೋಳೂರು, ಕೊಡೆಯಾಲ ಮೊದಲಾದೆಡೆಗಳಲ್ಲಿ ಹಲವು ಮಹತ್ತಿನ ಮಠಗಳನ್ನು ಕಟ್ಟಿಸಿ, ಜಂಗಮಪ್ರೀತ್ಯರ್ಥವಾಗಿ ನಿವೇದಿಸುತ್ತಾನೆ. ಶೃಂಗೇರಿ, ಬಾಳೇಹಳ್ಳಿ ಮೊದಲಾದ ಮಹಾಪೀಠಗಳಿಗೆ ಕೊಡಗಿ, ಮಾನ್ಯ, ಉಂಬಳಿ, ಉತ್ತಾರ, ಪಳ್ಳಿ ದಾಸರಧರ್ಮ ಇತ್ಯಾದಿಗಳನ್ನು ಸಲಿಸಿ, ಹಲವು ಸಂನ್ಯಾಸಿಗಳ ಮಠ, ಮಹತ್ತಿನಮಠ, ಅಗ್ರಹಾರ ಗಳನ್ನು ನಿರ್ಮಿಸುತ್ತಾನೆ. ಅದರಲ್ಲೂ ಶೃಂಗೇರಿಯ ಶಾರದಾಪೀಠಕ್ಕೆ ವಿಶೇಷ ಭಕ್ತಿ ಯಿಂದ ನಡೆದುಕೊಂಡು, ಅದರ ಪುನರ್ ರಚಕನೆನಿಸಿದ್ದಾನೆ. ಜಗದ್ಗುರುಗಳಾಗಿದ್ದ ಶ್ರೀ ಅಭಿನವ ನರಸಿಂಹ ಭಾರತಿಯವರನ್ನೂ, ಅವರ ಶಿಷ್ಯರಾದ ಶ್ರೀ ಸಚ್ಚಿದಾನಂದ ಭಾರತಿಯವರನ್ನೂ ಅತ್ಯಂತ ಭಕ್ತಿಯಿಂದ ಗೌರವಿಸಿದ್ದಾನೆ. ಶ್ರೀ ರಾಮಾನುಜ ಪಂಥದವರಿಗೆ ದತ್ತಿಯನ್ನೂ, ಮುಸಲ್ಮಾನರಿಗೆ ಮಸೀದಿಗಳನ್ನೂ ಕಟ್ಟಿಸಿ, ಜೈನ ಚೈತ್ಯಾಲಯಕ್ಕೆ ಭೂಸ್ವಾಸ್ಥೆಯನ್ನೇರ್ಪಡಿಸಿ ಸರ್ವಧರ್ಮಗಳನ್ನೂ ಮಾನಿಸಿ ದ್ದಾನೆ. ಕೊಲ್ಲೂರು ಮೂಕಾಂಬಿಕೆಯ ಪದಭಕ್ತನಾದ ಈತನು ಅಲ್ಲಿಯ ದೇವಾಲಯ ವನ್ನು ವಿಸ್ತಾರಗೊಳಿಸಿದ್ದಲ್ಲದೆ, ಶಿಲಾಮಯವನ್ನಾಗಿಸಿ ಭೂಸ್ವಾಸ್ಥೆಯನ್ನು ಬಿಟ್ಟು, "ತತ್ಪೂಜಾ ವಿಭವಂಗಳಂ ಲೋಪವಾಗದಂತೆ ನಡೆಸಿ ತಾಂ ಸಾಧಿಸಿದ ಘಟ್ಟದ

[71] ಶಿವ-ರತ್ನಾಕರವು "ಕೌರವದುರ್ಗ" ಎಂದು ಕರೆದಿದೆ. — VI, XIII, 154.

ಮೇಗಣ ಕೆಳಗಣ ಮಹಾದೇವತಾಸ್ಥಳಂಗಳೊಳ್ ಪ್ರತಿವರ್ಷ ಶ್ರಾವಣ ಮಾಸದೊಳ್ ವಿಶೇಷಗಟ್ಟಲೆಯಾಗಿ ಪೂಜೆ ಕಾರ್ತಿಕ ಮಾಸದೊಳ್ ಲಕ್ಷದೀಪಾರಾಧನೆ ರಥೋತ್ಸವಾದಿ ಕಟ್ಟಲೆಗಳ್ ನಡೆವಂತು ನಿಯಾಮಕಂಗೈಸಿ, ಗುರು ಜಂಗಮಾದಿ ಪೂಜಾ ನಿರತನಾಗಿದ್ದರೂ, ರಸಿಕಶಿರೋಮಣಿಯಾದ ವೆಂಕಟಪ್ಪನು ಸದಾಶಿವನಗರದಲ್ಲಿ, ಜಲಕ್ರೀಡಾ ಪ್ರಾಸಾದವನ್ನೂ, ಸಂಗಳ ಗ್ರಾಮವನ್ನೂ, ಅಲ್ಲಿ ವಿಹಾರಾರ್ಥವಾಗಿ ಉದ್ಯಾನವನವನ್ನೂ ನಿರ್ಮಿಸಿದನು.

ಹಿರಿಯ ವೆಂಕಟಪ್ಪನ ಸಾಹಿತ್ಯ ಸೇವೆ ಮತ್ತು ಕಲಾಪ್ರೋತ್ಸಾಹ ಶ್ಲಾಘನೀಯವಾದದ್ದು. ಇಕ್ಕೇರಿಯಲ್ಲಿ ಅರಮನೆಯನ್ನು ನಿರ್ಮಿಸಿ, ಅಲ್ಲಿ ನಾಟಕಶಾಲೆಯೊಂದನ್ನು ಕಟ್ಟಿಸುತ್ತಾನೆ.[72] ತನ್ನ ಆಸ್ಥಾನದಲ್ಲಿ ರಾಮಾನುಜಶೃಂಗಿಗೂ, ಭಟ್ಟೋಜಿದೀಕ್ಷಿತನಿಗೂ, ವಿಶಿಷ್ಟಾದ್ವೈತ ಶಾಸ್ತ್ರಗಳಲ್ಲಿ ಪ್ರಸಂಗವನ್ನೇರ್ಪಡಿಸಿ, ತನ್ನ ಪಾಂಡಿತ್ಯ ಪ್ರತಿಭೆಗಳಿಂದ ವಾದದಲ್ಲಿ ಗೆದ್ದು, ಸಕಲ ವಿದ್ವಜ್ಜನ ಸಮ್ಮತಿಯಿಂದ "ವಿಶಿಷ್ಟವೈದಿಕಾದ್ವೈತ ಸಿದ್ಧಾಂತ ಸ್ಥಾಪನಾಚಾರ್ಯ "ಎಂಬ ಬಿರುದನ್ನು ಧರಿಸುತ್ತಾನೆ." ಇಂತಹ ಸ್ವಯಂ ವಿದ್ವಾಂಸನಾದ ವೆಂಕಟಪ್ಪನು ತಿರುಮಲಭಟ್ಟ, ರಂಗನಾಥದೀಕ್ಷಿತ, ಅಶ್ವಪಂಡಿತ ಮೊದಲಾದ ಕವಿಗಳಿಗೂ ಆಶ್ರಯಕೊಟ್ಟು, ಸಾಹಿತ್ಯ ಪೋಷಕನಾಗಿದ್ದಾನೆ. ಇವನು ಕರ್ನಾಟಕದ ನವಭೋಜನೂ ಹೌದು.[73] ಅಂತೆಯೇ ಚಾತುರೀ ಧುರಂಧರನಾದ ವೆಂಕಟಾದ್ರಿ ಮಹೀಪಾಲನು, "ವಿವೇಕಶರಣನೂ, ಸಾಹಿತ್ಯ ರತ್ನಾಕರನೂ, ನಾರೀಚಿತ್ತ ಮನೋಭವನೂ, ಬುಧನುತನೂ, ಸಂಗೀತ ಗಂಗಾಧರನೂ, ವೈರಿವ್ರಾತ ಮದೇಭಗಳಿಗೆ ಪಂಚವದನನೂ ಆಗಿ ಮೆರೆದಿದ್ದಾನೆ."[74]

ಹೀಗೆ ಲೌಕಿಕ ಪಾರಮಾರ್ಥಗಳನ್ನೂ, ರಾಜಕೀಯ ಮತ್ತು ಧರ್ಮಗಳನ್ನೂ ಸಮನ್ವಯಗೊಳಿಸಿ, ಸಾಧಿಸಿ ತೋರಿಸಿದ ಸವ್ಯಸಾಚಿ ವೆಂಕಟಪ್ಪನು ಶ್ರೀ ಕಾಡದೇವರ ಮಠ ಹೇಳುವಂತೆ ಪರಾಕ್ರಮ ಮತ್ತು ಚತುರತೆಗಳಲ್ಲಿ ಶಿವಾಜಿಗೆ ಜೆಗಲೆಣೆಯಾಗಿ ನಿಲ್ಲುತ್ತಾನೆ.[75] ಕರ್ನಾಟಕದ ರತ್ನಸಿಂಹಾಸನವನ್ನೇರಿದ ಇಮ್ಮಡಿ ಪುಲಕೇಶಿ, ನೃಪತುಂಗ, ದೋರಸಮುದ್ರದ ಶ್ರೀ ವಿಷ್ಣುವರ್ಧನರಾಯ, ವಿಜಯನಗರದ ಶ್ರೀ ಕೃಷ್ಣದೇವರಾಯ, ಮೊದಲಾದವರ ಕೀರ್ತಿ ಮಾಲಿಕೆಯಲ್ಲಿ ಕೆಳದಿಯ ಹಿರಿಯ ವೆಂಕಟಪ್ಪನಾಯಕನ ಹೆಸರೂ ಸೇರಲು ಅರ್ಹವೆನಿಸಿದೆ. ಅನೇಕ

---

[72] ಶಿವ-ರತ್ನಾಕರ VI, I, 3; VI, I, 4.

[73] ಕರ್ನಾಟಕ ಶಿವಗೀತೆ, ಪೀಠಿಕಾಸಂಧಿ. ಪದ್ಯ 14 ಮತ್ತು 17

[74] E.C. VIII, Tl. 166.

[75] "Kadadevara Math, Kannada during Keladi" p. 51

ಶಾಸನಗಳೂ,[76] ಕಾವ್ಯಗಳೂ ಅವನ ಹಿರಿಮೆಗರಿಮೆಗಳಿಗೆ ಸಾಕ್ಷಿಯಾಗಿ ನಿಂತಿವೆ. "ಹಲವು ಮಾತೇನಾತನಂ ಪೋಲ್ವದೊರೆಗಳೇ ಕಲಿಯುಗದೊಳಿಲ್ಲ; ಧರೆಯೆಲ್ಲ ಬಲ್ಲುದು"[77] ಎಂದ ಮೇಲೆ ಹೆಚ್ಚೇನು ಹೇಳುವ ಅಗತ್ಯ ಉಳಿಯುವುದಿಲ್ಲ. ಮಹಾನುಭಾವನಾದ ವೆಂಕಟಪ್ಪನು ಸಾಕ್ಷಾತ್ ಧರ್ಮದೇವತೆ ಎಂದೆನಿಸಿ, ಶಿವಯೋಗ ನಿರತನಾಗಿ ಕ್ರಿ. ಶ. ೧೬೩೦ ರಲ್ಲಿ ಲಿಂಗೈಕ್ಯನಾಗುತ್ತಾನೆ.[78]

### ೮. ವೀರಭದ್ರನಾಯಕ (ಕ್ರಿ. ಶ. ೧೬೩೦-೧೬೪೬)

ವೆಂಕಟಪ್ಪನಾಯಕನ ಮರಣಾನಂತರ ಕೆಳದಿಯ ದೊರೆತನ ಎರಡಾಗಿ ಕವಲೊಡೆಯಿತು. ವೆಂಕಟಪ್ಪನ ಮಗನಾದ ಭದ್ರಪ್ಪನು ಅವನು ಬದುಕಿದ್ದಾಗಲೇ ತೀರಿಕೊಂಡದ್ದರಿಂದ, ಅವನ ಮೊಮ್ಮಗನಾದ ವೀರಭದ್ರನು ಸಿಂಹಾಸನಕ್ಕೆ ಬರುತ್ತಾನೆ. ಅಷ್ಟರಲ್ಲಿ ಪರಮ ಕುಹಕಿಯಾದ ಲಕ್ಷ್ಮೀಪತಿ ಮತ್ತು ಸೇವಕನಿಕರದಲ್ಲಿ ಅಧಮನಾದ ಠಾಣದಾರ ತಿಮ್ಮಣ್ಣ — ಇವರುಗಳು ರಾಮರಾಜನಾಯಕನ ಮಗನಾದ ವೀರವೊಡೆಯನನ್ನು ಪ್ರಚೋದಿಸಿ, ಅವನನ್ನು ಇಕ್ಕೇರಿಯಲ್ಲಿ ಪಟ್ಟಕ್ಕೇರಿಸುತ್ತಾರೆ. ವೀರಭದ್ರನು ಕೆಲಕಾಲ ಆನಂದಪುರದಲ್ಲೇ ಉಳಿಯಬೇಕಾಗುತ್ತದೆ. ಆದರೆ ಇದಾದ ಮೂರು ತಿಂಗಳಲ್ಲಿ ವೀರವೊಡೆಯನು ತೀರಿಕೊಳ್ಳಲು ವೀರಭದ್ರನಾಯಕನ ಮೈದುನನಾದ ಸದಾಶಿವನೆಂಬುವನು[79] ತನಗೆ ಪಟ್ಟವಾಗಲೇಬೇಕೆಂಬಭಿಲಾಷೆಯಿಂ ಮುಂದುವರಿದು ವೀರವೊಡೆಯರ ಸಹೋದರ ಬಸವಲಿಂಗನಾಯಕನನ್[80] ಅಂಗವಿಕಲನಂ ಮಾಡಿ ತಾಂ ಪಟ್ಟಕ್ಕೆ ಕುಳ್ಳಿರ್ಪನಿತರೊಳ್, ವೀರಭದ್ರನು ಸೇನಾಸಮೇತನಾಗಿ ಹೋಗಿ ಇಕ್ಕೇರಿಯನ್ನು ಮುತ್ತಲು, ಸದಾಶಿವನು ಅಲ್ಲಿಂದ ಪಲಾಯನಗೊಂಡು ಸೋದೆಯವರ ಮರೆಹೊಗುತ್ತಾನೆ. ತನ್ನ ಶತ್ರುವಾದ ಸದಾಶಿವನನ್ನು ಬಿಟ್ಟು ಕೊಡಬೇಕೆಂದು ವೀರಭದ್ರನು ಕೇಳಿದರೂ ಅವರು ಬಿಟ್ಟುಕೊಡದಿರಲು, ದಂಡೆತ್ತಿ ಹೋಗಿ ಸ್ವಾದಿ ಮತ್ತು ಬೀಳಗಿಯವರನ್ನು ಸದೆಬಡಿದು ಅವರ ರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳುತ್ತಾನೆ. ಈ ಮಧ್ಯೆ ದಂಗೆಕೋರ ಸದಾಶಿವನೂ ತೀರಿಕೊಳ್ಳುತ್ತಾನೆ.

---

[76] E.C. VII, Sh. 2; Ibid VIII, Tl. 166.

[77] ಶಿವಗೀತೆ; ಪೀಠಿಕಾಸಂಧಿ ಪದ್ಯ 13.

[78] ಶಿವ.ರತ್ನಾಕರ. VI, XIII, 174 - 175;
ಕೆ.ನೃ.ವಿ.ಪು. 90; E.C. VIII, Sb. 266.

[79] ಇವನು ಜಂಬೂರು ಶಿವೋಪಂಣ ಮತ್ತು ಹಿರಿಯ ವೆಂಕಟಪ್ಪನ ಮಗಳು ಹಿರಿಯಮ್ಮ, ಇವರ ಮಗ. ಅನುಬಂಧ 18 ನೋಡಿ.

[80] ರಾಮರಾಜನಾಯಕನ ಎರಡನೆಯ ಮಗ — ಅದೇ. 18 ಅನುಬಂಧ ನೋಡಿ.

ಇಂತಹ ಜ್ಞಾತಿಕಲಹಗಳ ಜೊತೆಗೆ, ಸಮಯ ಕಾಯುತ್ತಿದ್ದ ಹಲವು ಪುಟ್ಟ ಪಾಳೆಯಗಾರರು ದಂಗೆಯೆದ್ದು ಯಾದವೀ ಕಲಹಗಳಿಗೆ ಕಾರಣರಾಗುತ್ತಾರೆ. ಆದರೂ ಪರಾಕ್ರಮಶಾಲಿಯಾದ ವೀರಭದ್ರನು ಸುಭದ್ರವಾಗಿ ನಿಲ್ಲಲು ಯತ್ನಿಸುತ್ತಾನೆ. ಸೋತ ಸೋದೆ ಮತ್ತು ಬೀಳಗಿಯವರು ಅಡಿವಿಡಿದು ಬಡಬಡಿಸಲು, ಬಿಜಾಪುರದ ರಣದುಲ್ಲಾ ಖಾನನು, ಬಸವಾಪಟ್ಟಣದ, ಕೆಂಗೆ ಹನುಮನಾಯಕನೊಡನೆ ಬಂದು ಭುವನಗಿರಿಯನ್ನು ವೇಢೈಸಲು, 'ಕಾಲ ಸಾಧನೆಯಂ ಮಾಡಿ ಶತ್ರುವಂ ಮುರಿದು ಮಹಾಕಾರ್ಯಮಂ ಸಾಧಿಸಬೇಕೆಂಬ' ರಾಜನೀತಿಯಂ ನಿಶ್ಚಯಿಸಿ ಉಚಿತರಪ್ಪ ನಿಯೋಗಿಗಳ ಮುಖದಿಂದ, ಆ ಬಾದಶಹನೊಡನೆ ಸಂಧಿ ಮಾಡಿಕೊಳ್ಳುತ್ತಾನೆ. ತನ್ಮೂಲಕ ರಕ್ತಪಾತವನ್ನು ತಡೆದು ದಕ್ಷಿಣದ ದೊರೆಗಳನ್ನೆಲ್ಲಾ ರಕ್ಷಿಸುತ್ತಾನೆ. ಕೆಲಕಾಲ ಕೆಳದಿಗೂ ಬಿಜಾಪುರಕ್ಕೂ ಮೈತ್ರಿ ಇದ್ದುದು ಕಂಡುಬರುತ್ತದೆ. ವೀರಭಪ್ರನು ಕಾರ್ಕಳದ ಭೈರವನನ್ನು ನಿಗ್ರಹಿಸಿ, ರಾಜಧಾನಿಯನ್ನು ಇಕ್ಕೇರಿಯಿಂದ ಬಿದನೂರಿಗೆ ವರ್ಗಾಯಿಸಿ,[81] ಅಪುತ್ರವಂತನಾದ ಈತನು ಸಮಸ್ತವನ್ನೂ ಶಿವಪ್ಪನಿಗೂ, ವೆಂಕಟಪ್ಪನಿಗೂ ವಹಿಸಿಕೊಟ್ಟು ನಿಶ್ಚಿಂತೆಯಿಂದ ಶಿವಾರ್ಚನಾದಿ ಸತ್ಕೃತ್ಯ ನಿತ್ಯನಿಯಮಂಗಳಲ್ಲಿ ನಿರತನಾಗುತ್ತಾನೆ.[82]

ವೀರಭದ್ರನು ಹೇಳಿಕೊಳ್ಳುವಷ್ಟು ದಕ್ಷನಲ್ಲದಿದ್ದರೂ ಮಹಾ ಧಾರ್ಮಿಕ. ಇವನ ದಾನ ವೈಭವವನ್ನು ಕೇಳಿ, ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ, ಹರಿಚಂದನಗಳೆಂಬ ಪಂಚವೃಕ್ಷಗಳು ನಾಚಿಕೆಯಿಂದ ತಲೆತಗ್ಗಿಸಿದುವಂತೆ. ಕಾಮಧೇನು ಹುಲ್ಲುಮೇಯುವುದಕ್ಕೆ ಪ್ರಾರಂಭಿಸಿತಂತೆ. ಚಿಂತಾಮಣಿ ಅಚೇತನತ್ವವನ್ನು ಪಡೆಯಿತಂತೆ.[83] ಅಂತಹ ದಾನಗುಣಸಂಪನ್ನ. ಆಡಳಿತದಲ್ಲಿ ಅನೇಕ ಕಷ್ಟನಷ್ಟಗಳಾದರೂ ಹಲವು ಮಠಗಳಿಗೂ; ದೇವಾಲಯಗಳಿಗೂ ದಾನದತ್ತಿಗಳನ್ನು ದಯಪಾಲಿಸಿದ್ದಾನೆ.[84] ಕೊಂಡಭಟ್ಟನೆಂಬ ಸಂಸ್ಕೃತ ವೈಯಾಕರಣಿಗೆ ಆಶ್ರಯದಾತನಾಗಿದ್ದಾನೆ.

---

[81]Mac. Coll. 18-15-15.

[82]M.A.R. 1928, PP. 18—19,

ಶಿವ.ರತ್ನಾಕರ VI,XXVII, 133-36. (ಪುತ್ರದೋಹಳ ಇದೆ) ಮತ್ತು ಕೆ.ನೃ.ವಿ.ಪು. 104.

[83]ಷಡಕ್ಷರಿ, ಧರ್ಮಶಿರೋಮಣಿ I, ಪದ್ಯ. 19

[84]E.C. VII, Hl. 83; Ibid VIII, Tl. 43; 84, 165; Ibid. Sb. 451; Ibid. Sa. 157.

## ೯. ಶಿವಪ್ಪನಾಯಕ (ಕ್ರಿ. ಶ. ೧೬೪೬-೧೬೬೧)

ಶ್ರೇಷ್ಠ ಆಡಳಿತಗಾರನೂ, "ಸಿಸ್ತುಗಾರ" ನೆಂದು ವಿಖ್ಯಾತನೂ ಆದ ಶಿವಪ್ಪ ನಾಯಕನನ್ನು ಪಡೆದ ಭಾಗ್ಯ ಕೆಳದಿ ಸಾಮ್ರಾಜ್ಯದ್ದು. ತುಳುವರನ್ನು ತುಳಿದು ಹೊನ್ನಾವರದ ಕೋಟೆಯಿಂದ ಪೋರ್ಚುಗೀಸರನ್ನು ಓಡಿಸಿ, ಬೇಲೂರು, ವಸುಧಾರೆ (ವಸ್ತಾರೆ) ಸಕ್ರೆಪಟ್ಟಣ, ಹಾಸನ ಇತ್ಯಾದಿಗಳನ್ನು ಡಚ್ಚರ ನೆರವಿನಿಂದ ಪಡೆದು ಕಾಸರಗೋಡುವರೆಗೂ ಸುವಿಸ್ತಾರನಾದ ಸಾಮ್ರಾಜ್ಯವನ್ನು ಸೌಖ್ಯದಿಂದ ಪರಿಪಾಲಿಸಿದ ಮಹಾಪುರುಷ. ಕೊಡಗು, ಮಲೆಯಾಳ, ಕಾರ್ಕಳ, ನೀಲೇಶ್ವರ, ಶಿವಸಿ, ಹೇರೂರು, ಸೋದೆ ಮತ್ತಿತರ ಪಾಳೇಗಾರರನ್ನು ಸ್ವಾಧೀನಪಡಿಸಿಕೊಂಡು, ಪಶ್ಚಿಮ ಸಮುದ್ರ ದಿಂದ ಹಿಡಿದು, ಅರಗ, ಗುತ್ತಿ, ಬಾರಕೂರು, ಮಂಗಳೂರು ಮೊದಲಾದ ಪ್ರದೇಶಗಳಿಗೆ ತಾನೇ ಸರ್ವಾಧಿಕಾರಿಯಾಗಿದ್ದನು.[85] ಸವಣೂರನ್ನು ಸ್ವಾಧೀನ ಪಡಿಸಿಕೊಂಡು ಹಾಲು ಮತ್ತು ಬೆಣ್ಣೆಯ ರೂಪದಲ್ಲಿ 'ಹವನು' ಎಂಬ ಗೊತ್ತಾದ ಪ್ರಮಾಣದ ತೆರಿಗೆಯನ್ನು ಕೊಡುವಂತೆ ನಿಗದಿ ಮಾಡಿದ್ದನು.[86] ಪೌರುಷ, ಸ್ವಾಮಿನಿಷ್ಠೆಗಳಂತೆ ಅವನಲ್ಲಿ ಧಾರ್ಮಿಕ ಶ್ರದ್ಧೆಯೂ ಇರುವುದು ಕಂಡುಬರುತ್ತದೆ. ಶೃಂಗೇರಿಮಠಕ್ಕೆ ಎಂದಿನಂತೆ ಸೇವೆ ಸಲ್ಲಿಸಿಕೊಂಡು ಬಂದಿದ್ದಾನೆ. ಹಿರಿಯ ವೆಂಕಟಪ್ಪನಂತೆ ತಾನೂ ಒಂದು ವಾಜಪೇಯ ಯಜ್ಞವನ್ನು ನೆರವೇರಿಸಿದ್ದಾನೆ. ತೀರ್ಥರಾಜಪುರೀ ಕ್ಷೇತ್ರದಲ್ಲಿ ಶ್ರೋತ್ರೀಯ ಬ್ರಾಹ್ಮಣರಿಗೆ ಕಾಲಪುರುಷ ದಾನ, ತುಲಾಪುರುಷ ದಾನ, ಸಹಸ್ರ ಗೋಪ್ರದಾನಗಳನ್ನು ನೆರವೇರಿಸಿ ಧನ್ಯನೆನಿಸಿದ್ದಾನೆ.

ಶಿವಪ್ಪನಾಯಕನಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದದ್ದು ಅವನ 'ಸಿಸ್ತುಗಾರಿಕೆ'ಯನ್ನು. ರಾಷ್ಟ್ರದ ಸುವ್ಯವಸ್ಥೆಯಲ್ಲಿ ನಿರತನಾಗಿದ್ದ ಆತನಿಗೆ ಸಾಹಿತ್ಯಾದಿ ಲಲಿತ ಕಲೆಗಳಿಗೆ ಗಮನವೀಯುವಷ್ಟು ವ್ಯವಧಾನವಿದ್ದಿರಲಾರದು. ಆದರೂ ಅವನ ಕಾಲದಲ್ಲಿ ಒಂದು ವ್ಯಾಖ್ಯಾನ ಗ್ರಂಥ[87] ಹೊರಬಂದಿರುವುದು ಕಂಡುಬರುತ್ತದೆ.

ಕೆಳದಿಯ ಚಿಕ್ಕಸಂಕಣ್ಣನ ಮೊಮ್ಮಗನಾದ ಈತನು, ಕ್ರಿ.ಶ. ೧೬೪೬ ರಿಂದ ೧೬೬೧ ರವರೆಗೆ ಕೆಳದಿಯನ್ನಾಳಿ, ಶಿವರಾಜಪುರವೆಂಬ ಅಗ್ರಹಾರವನ್ನು, ನಿರ್ಮಿಸಿ ಬ್ರಾಹ್ಮಣೋತ್ತಮರಿಗೆ ಶಿವಾರ್ಪಿತ ಮಾಡಿ, ಭೂರುದ್ರರನ್ನು ಸಂತುಷ್ಟಿಪಡಿಸಿ,

---

[85] E.C. VI, Sg. 11

[86] Q.J.M.S. XII, P. 48.

[87] ಚರಮೂರ್ತಿ ಬಸವಲಿಂಗದೇವರು "ವೀರಮಾಹೇಶ್ವರಾಚಾರ ಸುಧಾವಾರ್ಧಿ"ಗೆ ಕನ್ನಡ ಟೀಕು ಬರೆದಿದ್ದಾರೆ.

ಕೊಲ್ಲೂರು, ಕೇದಾರ ಮೊದಲಾದ ಷೋಡಶ ದಿವ್ಯಕ್ಷೇತ್ರಗಳಲ್ಲಿ ಕೋಟಿದೀಪಾರಾಧನೆಯನ್ನು ನೆರವೇರಿಸಿ ತನ್ನ ಸ್ವಾಮಿಗಾಗಿ – ಅಂದರೆ ರಾಜ್ಯಭ್ರಷ್ಟನಾಗಿ ಬಂದ ವಿಜಯನಗರದ ಶ್ರೀರಂಗರಾಯನಿಗಾಗಿ – ಮೈಸೂರರಸನ ಗಾಢಗರ್ವವನ್ನು ಮುಗ್ಗಿಸಿ, ಶ್ರೀರಂಗಪಟ್ಟಣದ ಬಳಿ ಕಾವೇರಿಗೆ ಸೇತುವೆಯೊಂದನ್ನು ಕಟ್ಟಿಸಿ, ರೋಗಗ್ರಸ್ಥನಾಗಿ ಅಸು ನೀಗುತ್ತಾನೆ. ಈ ಮಹಾನುಭಾವನು ಆಡಳಿತ ವ್ಯವಸ್ಥೆಯಲ್ಲಿ ಇಂದಿಗೂ ಆದರ್ಶಪುರುಷನಾಗಿದ್ದಾನೆ. ಸಿಸ್ತಿನ ಶಿವಪ್ಪನಾಯಕನ ಬಗೆಗೆ ಒಂದು ಮಾತು :

ಪಲವುಕ್ತಿಗಳಿಂದೇಂ ರಿಪು
ಕುಲಭೈರವ ಶಿವನೃಪಾಲಗೆಣೆಯಹನೃಪರೀ
ಕಲಿಯುಗದೊಳಿಲ್ಲಮವನಿಪ
ಕುಲಕಂ ತಾಂ ತಿಲಕನೆನಿಸಿ ರಾರಾಜಿಸಿದಂ ||[88]

## ೧೦. ಕಿರಿಯ ವೆಂಕಟಪ್ಪನಾಯಕ (ಕ್ರಿ. ಶ. ೧೬೬೧-೧೬೬೨)

ಶಿವಪ್ಪನಾಯಕನ ಮಲತಮ್ಮನಾದ ವೆಂಕಟಪ್ಪನು ಕೇವಲ ಒಂದು ವರ್ಷಕಾಲ ಮಾತ್ರ ಕೆಳದಿಯನ್ನಾಳಿದಂತೆ ತಿಳಿದುಬರುತ್ತದೆ. ಇಂಗ್ಲೀಷರು ಮತ್ತು ಪೋರ್ಚುಗೀಸರೊಡನೆ ವ್ಯಾಪಾರದಲ್ಲಿ ಸ್ಪರ್ಧಿಸಲು ಬಂದ ಡಚ್ಚರೊಡನೆ ಮೈತ್ರಿಯಿಟ್ಟುಕೊಂಡಿರುತ್ತಾನೆ.[89]

ಕಿರಿಯ ವೆಂಕಟಪ್ಪನು ಶಿವರಾಜನ ಉಪದೇಶದಂತೆ ಶ್ರೇಷ್ಠ ಶಿವಾಧಿಕ್ಯ ಸ್ಥಾಪಕನಾಗುತ್ತಾನೆ. ತ್ಯಾಗಭೋಗಗಳ ಸಮನ್ವಯತೆಯನ್ನು ಇವನ ಬದುಕಿನಲ್ಲಿ ಕಾಣಬಹುದು. ಶಿವಸ್ವರೂಪಿಗಳಾದ ಗುರುಜಂಗಮರ ತುಷ್ಟಿಗಾಗಿ 'ಪಾದಪೂಜಾ' ವಿಧಾನವನ್ನು ನೂತನವಾಗಿ ಕಲ್ಪಿಸಿಕೊಟ್ಟು, ಶಿವಯೋಗನಿರತನಾಗುತ್ತಾನೆ.[90]

## ೧೧. ಭದ್ರಪ್ಪನಾಯಕ (ಕ್ರಿ.ಶ. ೧೬೬೨-೧೬೬೪)

ಕೇವಲ ಎರಡೇ ವರ್ಷಗಳ ಕಾಲ ರಾಜ್ಯವಾಳಿದ, ಶಿವಪ್ಪನಾಯಕನ ಜ್ಯೇಷ್ಠ ಪುತ್ರನಾದ ಭದ್ರಪ್ಪನಾಯಕನು ಶಿರ್ರಾ, ಮೈಸೂರು, ಬಿಜಾಪುರಗಳ ಮೇಲೆ ದಂಡೆತ್ತಿ ಹೋಗಿ ಆ ರಣಕ್ಷೇತ್ರಗಳಲ್ಲಿ ಕೆಲವೆಡೆ ವಿಫಲನಾಗುತ್ತಾನೆ. ಆದರೂ

---

[88] ಕೆ.ನೃ.ವಿ.ಪು. 114.

[89] J.B.H.S. 1929, II, pp. 248-49.

[90] ಶಿವ.ರತ್ನಾಕರ. VIII, I, 6 - 15.

ಧರ್ಮಕ್ಷೇತ್ರದಲ್ಲಿ ಅದ್ಭುತ ವಿಜಯಿಯಾಗಿದ್ದಾನೆ. ತೀರ್ಥರಾಜಪುರ ಮತ್ತು ರಾಮಚಂದ್ರಪುರ ಅಗ್ರಹಾರಗಳಲ್ಲಿ ತುಲಾಪುರುಷ ಮತ್ತು ಹಿರಣ್ಯಗರ್ಭದಾನವನ್ನು ಸುಬ್ರಹ್ಮರಿಗಿತ್ತು, ಉಪನಯನಾದಿ ಸುದಾನವನ್ನೂ, ಅಪರಿಮಿತವಾದ ಅನ್ನದಾನವನ್ನೂ ಮಾಡಿ ಪುಣ್ಯಭಾಗಿಯಾಗಿದ್ದಾನೆ. ಶಿವರಾಜಪುರ, ಭದ್ರರಾಜಪುರ ಮೊದಲಾದ ಅಗ್ರಹಾರಗಳನ್ನು ಬ್ರಾಹ್ಮಣೋತ್ತಮರಿಗಾಗಿ ಕಲ್ಪಿಸಿ, ಉಡುಪಿಯ ಕೃಷ್ಣ, ಸದ್ಬ್ರಾಹ್ಮಣ್ಯದ ಷಣ್ಮುಖ, ಕೋಟೀಶ್ವರದ ಶಂಕರನಾರಾಯಣ, ಇಷ್ಟದೇವತೆಯಾದ ಕೊಲ್ಲೂರ ಮೂಕಾಂಬಿಕೆ ಮೊದಲಾದ ದೇವತೆಗಳಿಗೆ ತಕ್ಕ ಪೂಜಾವ್ಯವಸ್ಥೆ ಮಾಡಿ, ಹಲವು ಜಂಗಮ ಮಠಗಳನ್ನು ಕಟ್ಟಿಸಿ, ಸೋದರ ಸೋಮಶೇಖರನಿಗೆ ಹಿತೋಪದೇಶವಿತ್ತು ಶಿವೈಕ್ಯನಾಗುತ್ತಾನೆ.[91]

## ೧೨. ಹಿರಿಯ ಸೋಮಶೇಖರನಾಯಕ (ಕ್ರಿ.ಶ. ೧೬೬೪-೧೬೭೧)

ಭದ್ರಪ್ಪನ ಸೋದರನಾದ ಸೋಮಶೇಖರನು, "ಅನೀತಿ ಸಂಕುಲವಾದ ರಾಜ್ಯವನ್ನು ವಹಿಸಿಕೊಂಡಮೇಲೆ ಯಾವುದೇ ವಿಧವಾದ ಅನೀತಿಯು ಲೇಶಮಾತ್ರವೂ ಇರಲಿಲ್ಲವಂತೆ." ನೀತಿಜ್ಞನೂ, ಧರ್ಮಭೀರುವೂ ಆದ ಈತನು ಧರ್ಮರಕ್ಷಣೆಗಾಗಿ ಶತ್ರು ನಿಗ್ರಹವನ್ನು ಕೈಕೊಂಡು 'ರಾಜಾಧಿರಾಜ' ಎಂಬ ಹೆಸರನ್ನು ಪಡೆದಿದ್ದಾನೆ. ವೀರಶೈವ ಮಠಗಳನ್ನು ಕಟ್ಟಿಸಿ, ಅವುಗಳಿಗೆ ದತ್ತಿ ಬಿಟ್ಟು, ಶೃಂಗೇರಿಪೀಠಕ್ಕೆ ಪದ್ಧತಿಯ ಪ್ರಕಾರ ಸೇವೆ ಸಲಿಸಿದ್ದಾನೆ. ಸತ್ಕುಲ, ಸೌಂದರ್ಯ, ಸೌಶೀಲ್ಯಗಳಲ್ಲಿ ತನಗೆ ಅನುರೂಪಳಾದ ಕನ್ಯೆ ದೊರೆಯದಿದ್ದುದಕ್ಕಾಗಿ, ಪರಶಿವನು ವಿಳಂಬ ಮಾಡಿದಂತೆ ಹಲವು ವರ್ಷಗಳು ಅವಿವಾಹಿತನಾಗಿದ್ದು, ಅನಂತರ ಸಾಕ್ಷಾತ್ ಮೂಕಾಂಬಿಕಾ ಸದೃಶಳಾದ ಚೆನ್ನಾಂಬೆಯನ್ನು ಪತ್ನಿಯಾಗಿ ಸ್ವೀಕರಿಸುತ್ತಾನೆ.[92] ಅವಳಿಗೆ 'ಶಿವಪೂಜಾ ವಿಧಾನ'ವನ್ನು ಬೋಧಿಸಿ, ಶುದ್ಧ ಸಾತ್ತ್ವಿಕ ಹಾಗೂ ಸಾರ್ಥಕ ಬದುಕು ಬದುಕಿದ್ದಾನೆ. ಆದರೆ ಅವನ ಕಡೆಯ ದಿನಗಳು ತುಂಬಾ ದಾರುಣವಾದುವೆಂದು ಕೆಲವು ಕೃತಿಗಳು ಉಲ್ಲೇಖಿಸುತ್ತವೆ. ಸತ್ಯಾಸತ್ಯತೆಯ ಬಗ್ಗೆ ನಿರ್ಧಾರವಿಲ್ಲ. ಆದರೂ ಬರಮೆ ಮಾವುತನೆಂಬ ಕ್ಷುಲ್ಲಕನ ಕೈತವಕ್ಕೆ ಗುರಿಯಾದ ಸೋಮಶೇಖರನು ಬುದ್ಧಿಭ್ರಮಣೆ

---

[91] ಕೆ.ನೃ.ವಿ.ಪು. 124; E.C. VIII, Sa. 39,

[92] ಶಿವ.ರತ್ನಾಕರ. VIII, V, 11 - 13.

ಹೊಂದಿ, ಕಡೆಗೆ ಸೋಮಯ್ಯನೆಂಬ ಬ್ರಾಹ್ಮಣನಿಂದ ಹತನಾದ ಎಂಬುದಾಗಿ ತಿಳಿಯುತ್ತದೆ.[93]

## ೧೩. ಕುತ್ಸಿತ ಶಿವಪ್ಪನಾಯಕ (--) ಮತ್ತು ೧೪. ಚೆನ್ನಮ್ಮಾಜಿ (ಕ್ರಿ.ಶ. ೧೬೭೨-೧೬೯೭)

ಕೊಲ್ಲೂರು ಮುಕಾಂಬಿಕೆಯ ಅಂಶಸಂಭೂತಳೂ, ಲೋಕೋತ್ತರ ಸುಂದರಿಯೂ, ಮಂಗಳಾಂಗಿಯೂ, ಭೃಂಗಕುಂತಳೆಯೂ ಆದ ಕೆಳದಿಯ ಮಹಾರಾಜ್ಞಿ ಚೆನ್ನಮಾಂಬೆ ನಿಜಕ್ಕೂ ಬಿದನೂರು ಸಾಮ್ರಾಜ್ಯದ ದ್ವಿತೀಯ ರಾಜ್ಯಶ್ರೀ. ತನ್ನ ಪತಿ ಸೋಮಶೇಖರ ನಾಯಕನು ಗತಿಸಿದನಂತರ, ವಿಧವೆಯಾದ ತಾನು ರಾಷ್ಟ್ರರಕ್ಷಣೆಗಾಗಿ ಕೆಳದಿಯ ರಾಜ್ಯಸೂತ್ರವನ್ನು ಹಿಡಿಯುತ್ತಾಳೆ.

ಶಿವಪ್ಪನಾಯಕನ ತರುವಾಯ ರಾಜ್ಯದ ಪರಿಸ್ಥಿತಿ ಮತ್ತೆ ಹದಗೆಟ್ಟಿರುತ್ತದೆ. ಸೋಮಶೇಖರ ನಾಯಕನಿಗೆ ಆನೆಯ ಮದೋದಕವನ್ನು ಕುಡಿಸಿ, ಅವನ ಬುದ್ಧಿ ಭ್ರಮಣೆಗೆ ಕಾರಣನಾದ ಬರಮೆಮಾವುತ, ಮೈದುನ ಬಸವಲಿಂಗ, ದೂರದ ಬಂಧುವೆನಿಸಿದ ಕುತ್ಸಿತ ಶಿವಪ್ಪ, ಮೊದಲಾದ ದ್ರೋಹಿಗಳು ಸೋಮಶೇಖರ ನಾಯಕ ಮತ್ತು ಚೆನ್ನಮ್ಮಾಜಿ ಇವರ ಔದಾರ್ಯವನ್ನು ದುರುಪಯೋಗಪಡಿಸಿಕೊಂಡು ರಾಜ್ಯದ ಅಶಾಂತಿಗೆ ಕಾರಣರಾದರು. ಈ ಜ್ಞಾತಿಕಲಹಾದಿಗಳನ್ನು ದೂರಮಾಡಿ, ಆಗಾಗ ದಾಳಿ ನಡೆಸುತ್ತಿದ್ದ ಮೈಸೂರು ಮಾಯಾವಿಗಳನ್ನೂ,[94] ಬಿಜಾಪುರದ ಸುಲ್ತಾನನನ್ನೂ, ಹಲವು ಪುಟ್ಟ ಪಾಳೇಗಾರರನ್ನೂ, ಬಡಿದೋಡಿಸಿ, ಮೊಟ್ಟಮೊದಲು ರಾಷ್ಟ್ರರಕ್ಷಣೆ

---

[93] Buchanan, a Journey II, P.290; Rice.Mys. II, P. 435.

ಆದರೆ ರಾಮಚಂದ್ರಮಹಲೆ ಎಂಬುವನು ರಾಜನಿಂದ ಒಂದು ಘಳಿಗೆಯ ಕಾಲ, ರಾಜಸೂತ್ರವನ್ನು ಬೇಡಿ ಪಡೆದು, ಗಾದಿಯನ್ನೇರಿದ ಕೂಡಲೇ ಪ್ರಚಂಡಪ್ರಳಯವನ್ನೇ ನಡೆಸಿದನೆಂದು ಸಿಲ್ವ ತಿಳಿಸುತ್ತಾರೆ. ತಮ್ಮ ಹೇಳಿಕೆಯನ್ನು ಹೊನ್ನಾವರದ ವೆಂಕಟೇಶ ದೇವಾಲಯದಲ್ಲಿ ರಾಮಚಂದ್ರಮಹಲೆ ಎಂಬುವನ ಹೆಸರಿನಲ್ಲಿರುವ, ಸುಮಾರು 1663 ರಲ್ಲಿ ಹುಟ್ಟಿರಬಹುದಾದ ಒಂದು ಶಾಸನವನ್ನು ಕೊಟ್ಟು ಸಮರ್ಥಿಸಿಕೊಂಡಿದ್ದಾರೆ.

S.Silva, History of North Canara, Chtr. 14.

[94] ಅರಕಲಗೂಡು ಯುದ್ಧದಲ್ಲಿ ಚೆನ್ನಮ್ಮಾಜಿಯ ಸೇನೆ ಮೈಸೂರು ಚಾಮರಾಜಒಡೆಯರ ಸೇನೆಗೆ ಸೋತು ಹೆಚ್ಚು ನಷ್ಟಕ್ಕೆ ಗುರಿಯಾಯಿತೆಂದು ವಿಲ್ಕ್ಸ್ ಹೇಳುತ್ತಾರೆ.

History of Mysore, Vol. I. P. 58.

ಮಾಡಿದಳು. ಅನಂತರ ನಾಯರುಗಳು ಕೆಳದಿಗೆ ಸೇರಿದ ಮಲಬಾರ ತೀರದ ದಕ್ಷಿಣ ಭಾಗವನ್ನು ಒತ್ತಿಕೊಂಡು ಬರದಂತೆ, ಅವರೊಡನೆ ಒಪ್ಪಂದ ಮಾಡಿಕೊಳ್ಳುತ್ತಾಳೆ.

ಮತ್ತೊಂದು ಮಹತ್ವದ ಘಟನೆ ಇವಳ ಬಾಳಿನ ದಿನಗಳಲ್ಲಿ ನಡೆದು ಭಾರತದ ಅದರಲ್ಲೂ ದಕ್ಷಿಣ ಭಾರತದ – ಇತಿಹಾಸದಲ್ಲಿ ಹೊಸ ಅಧ್ಯಾಯವನ್ನೇ ತೆರೆದಿದೆ. ಮಹಾರಾಷ್ಟ್ರದ ಶಿವಾಜಿ ಮತ್ತು ಕೆಳದಿಯ ಶಿವಪ್ಪನಾಯಕರು ತೀರಿಕೊಂಡಮೇಲೆ, ದುರಾಶಾಪರನಾದ ದೆಹಲಿಯ ಸುಲ್ತಾನನಿಗೆ ದಕ್ಷಿಣದ ಮೇಲೆ ಕಣ್ಣು ಬೀಳುತ್ತದೆ. ಶಿವಾಜಿಯ ಹಿರಿಯಮಗನಾದ ಸಾಂಬಾಜಿಯನ್ನು ನೀತಿಭ್ರಷ್ಟ, ಜಾತಿಭ್ರಷ್ಟನನ್ನಾಗಿಸಲು ಯತ್ನಿಸಿ, ಅವನನ್ನು ಕಗ್ಗೊಲೆಗೈದು, ಅವನ ತಮ್ಮನಾದ ರಾಜಾರಾಮನನ್ನೂ ಸೆರೆಹಿಡಿಯಲು ಯತ್ನಿಸಿದಾಗ, ಆತನು ತಪ್ಪಿಸಿಕೊಂಡು ಬಂದು ಕೆಳದಿಯ ರಾಣಿ ಚೆನ್ನಮ್ಮಾಜಿಯನ್ನು ಮರೆಹೊಗುತ್ತಾನೆ. ವಾತ್ಸಲ್ಯಮಯಳಾದ ಮಹಾಮಾತೆ ಚೆನ್ನಮ್ಮಾಜಿಯು ರಾಜಾರಾಮನಿಗೆ ಅಭಯವಿತ್ತು, ಔರಂಗಜೇಬನ ದ್ವೇಷಕ್ಕೆ ಪಾತ್ರಳಾಗುತ್ತಾಳೆ. ಪರಿಣಾಮವಾಗಿ ದಂಡೆತ್ತಿ ಬಂದ ಸುಲ್ತಾನನನ್ನು ಸದೆಬಡಿದು ಜಯಶೀಲಳಾಗುತ್ತಾಳೆ.

ಹೀಗೆ ರಾಜ್ಯದ ಒಳ-ಹೊರ ಶತ್ರುಗಳನ್ನು ದಂಡಿಸಿ, ದೇಶರಕ್ಷಣೆ ಮಾಡಿ, ಪ್ರಜೆಗಳನ್ನು ತಾಯಿಯಂತೆ ಪೋಷಿಸಿದ ಕೀರ್ತಿ ರಾಣಿ ಚೆನ್ನಮ್ಮಾಜಿಗೆ ಸಲ್ಲುತ್ತದೆ. ಇವಳ ಕಡೆಯ ದಿನಗಳಲ್ಲಿ ಹಿರಿಯ ಬಸವರಾಜನ ಆಸ್ಥಾನಕವಿ ಮೌನಪ್ಪನು ರಾಜಕೀಯ ಮುತ್ಸದ್ಧಿಯಾಗಿ ನೆರವು ನೀಡಿರಬಹುದು. ಅವಳ ಕಾಲದಲ್ಲಿ ಬದುಕು ಮಾಡಿಕೊಂಡು ಬಂದವರ ಪಟ್ಟಿಯಲ್ಲಿ ಮೌನಪ್ಪ ಪಂಡಿತನ ಹೆಸರು ಸಿಗುತ್ತದೆ.[94](a)

ವೀರರಾಣಿ ಚೆನ್ನಮ್ಮಾಜಿಯ ಧಾರ್ಮಿಕ ಜೀವನ ತುಂಬಾ ಶ್ಲಾಘನೀಯವಾದದ್ದು. ಶೃಂಗೇರಿಯ ಜಗದ್ಗುರು ಶ್ರೀ ನರಸಿಂಹಭಾರತಿಯವರಿಗೆ ಅತ್ಯಂತ ಭಕ್ತಿಯಿಂದ ನಡೆದುಕೊಂಡಿದ್ದಾಳೆ.[95] ಹಲವು ವೇಳೆ ಶ್ರೀಗಳವರಿಗೆ ನೆರವು ನೀಡಿದ್ದಾಳೆ. ಲಕ್ಷದ ತೊಂಬತ್ತಾರು ಸಾವಿರ ಜಂಗಮಸ್ತೋಮಕ್ಕೆ ಮಹಾಸೋಹ ನಡೆಸಿದ್ದಾಳೆ. ತನ್ನ ಪತಿ ಸೋಮಶೇಖರನ ಹೆಸರಿನಲ್ಲಿ ಸೋಮಶೇಖರಪುರವೆಂಬ ಅಗ್ರಹಾರವನ್ನು ನಿರ್ಮಾಣ ಮಾಡಿಸಿ, ಶ್ರೋತ್ರೀಯ ಬ್ರಾಹ್ಮಣರಿಗೆ ಶಿವಾರ್ಪಿತವಾಗಿ ಧಾರೆಯೆರೆದಿದ್ದಾಳೆ. ಬಸವಾಪಟ್ಟಣದ ಗಡಿಪ್ರದೇಶದ ಕೋಟೆಯನ್ನು ಸ್ವಾಧೀನಪಡಿಸಿಕೊಂಡು ಚನ್ನಗಿರಿ ಎಂದು ತನ್ನ ಹೆಸರನ್ನಿಟ್ಟು ಕೋಟೆಯನ್ನು ಭದ್ರಗೊಳಿಸಿದ್ದಾಳೆ. ಬಿದನೂರಿನ

---

[94](a)ಕೆ.ನೃ.ವಿ.ಪು. 169.

[95]ಶೃಂಗೇರಿ ಶ್ರೀ ಮಠೀಯ ಪ್ರಾಕ್ತನಲೇಖನಮಾಲಾ ಸಂಗ್ರಹ (ಸಂಸ್ಥಾನದ ಕೈಫಿಯತ್ತು) - ಭಾಗ ಎರಡು, ಲೇಖ. 20 - 21 (ಪುಟ. 35–36.)

ನೀಲಕಂಠೇಶ್ವರ ಸ್ವಾಮಿಗೆ ಪ್ರತಿವರ್ಷವೂ ರಥೋತ್ಸವವು ನಡೆಯುವಂತೆ ಕಟ್ಟಳೆ ಮಾಡಿಸಿ ಕೊಲ್ಲೂರು ಮುಕಾಂಬಿಕಾ, ಕೆಳದಿಯ ರಾಮೇಶ್ವರ, ವೀರಭದ್ರ ಮೊದಲಾದ ದೇವತೆಗಳಿಗೂ, ಕಾಶಿ, ರಾಮೇಶ್ವರ, ಶ್ರೀಶೈಲ, ತಿರುಪತಿ ಮೊದಲಾದ ಪುಣ್ಯ ಕ್ಷೇತ್ರಗಳಿಗೂ ವರ್ಷಾಸನಾದಿಗಳನ್ನೂ ಮತ್ತೆ ಕೆಲವು ದಾನ ದತ್ತಿಗಳನ್ನೂ, ನೀಡಿ ಧರ್ಮ ದೇವತೆಯೆನಿಸಿದ್ದಾಳೆ. ಅಂತೆಯೇ, ಕೆಳದಿಯ ವೀರಭದ್ರ ದೇವಾಲಯದ ಶಿಖರವನ್ನೂ, ಅದರ ರಂಗಮಂಟಪವನ್ನೂ ಸುಂದರಗೊಳಿಸಿ ಧ್ವಜಸ್ತಂಭವನ್ನು ಸ್ಥಾಪಿಸಿದ್ದಾಳೆ.

ಹೀಗೆ ಬಿದನೂರಿನ ಮಹಾರಾಣಿ ಚೆನ್ನಮ್ಮಾಜಿಯು ವೀರಪತ್ನಿಯಾಗಿ, ವೀರ ಮಾತೆಯಾಗಿ, ಧರ್ಮದೇವತೆಯಾಗಿ, ದಕ್ಷ ಆಡಳಿತಗಾರ್ತಿಯಾಗಿ, ಕನ್ನಡಾಂಬೆಯ ಕಣ್ಮಣಿಯಾಗಿ ವಿಖ್ಯಾತಳಾಗಿದ್ದಾಳೆ. ಅವಳ ಕೀರ್ತಿ ದಿಗಂತವಿಶ್ರಾಂತವಾದದ್ದು. ಷಡಕ್ಷರ ಮಂತ್ರಿಯು ಹೇಳುವಂತೆ "ಸಮಸ್ತ ದಿಗ್ವನಿತೆಯರ ಕುಚಪ್ರದೇಶಕ್ಕೆ ತನ್ನ ಕೀರ್ತಿಯೆಂಬ ವಿಮಲ ವಸ್ತ್ರವನ್ನು ಹೊದಿಸಿ, ಸುಜನ ರಂಜನಕಾರ್ಯಗಳನ್ನೆಸಗುತ್ತಾ, ಸರ್ವಶ್ಲಾಘ್ಯವಾದ ಸಮಸ್ತ ಮಂಗಳಗುಣಶ್ರೀಯಾಗಿ ಜಗತ್ತನ್ನಾಳಿದ್ದಾಳೆ."[96]

## ೧೫. ಹಿರಿಯ ಬಸವಪ್ಪನಾಯಕ (ಕ್ರಿ.ಶ. ೧೬೯೮-೧೭೧೫)

ತನ್ನ ಎಳಮೆಯಲ್ಲೇ ಗಂಡನನ್ನು ಕಳೆದುಕೊಂಡ ಚೆನ್ನಮ್ಮಾಜಿಯು ಅಪುತ್ರವತಿಯಾದ್ದರಿಂದ ರಾಜ್ಯನಿರ್ವಹಣೆಗೆ ಯೋಗ್ಯನೊಬ್ಬನನ್ನು ದತ್ತುವಾಗಿ ಪಡೆಯುವುದು ಅನಿವಾರ್ಯವಾಗಿತ್ತು. ಆದ್ದರಿಂದ ಮಹಾಮಾತೆ ಚೆನ್ನಮ್ಮಾಜಿಯು ಸರ್ವಜನ ಸಮ್ಮತಿಯಿಂದ ಓರ್ವ ಕುಮಾರನನ್ನು ದತ್ತುವಾಗಿ ಸ್ವೀಕರಿಸುತ್ತಾಳೆ. ಆ ದತ್ತಕನೇ ಬಿದುನೂರ ಬಸವಪ್ರಭು. ಈತ ಕ್ರಿ.ಶ. ೧೬೯೮ ರಲ್ಲಿ ಪಟ್ಟಕ್ಕೆ ಬರುತ್ತಾನೆ.

ಈತನ ಆಳ್ವಿಕೆಯ ಕಾಲ ಸುಭಿಕ್ಷವಾದ ಸುಖಶಾಂತಿಗಳಿಂದ ತುಂಬಿದ್ದ ಕಾಲ. ಆದ್ದರಿಂದ ರಾಜಕೀಯ ಗೊಂದಲದ ಘಟನೆಗಳು ಅಷ್ಟಾಗಿ ಇಲ್ಲ. ಈತನು ನಿರ್ವಾಣಯ್ಯನ ಸಹೋದರನಾದ ಚನ್ನಬಸಪ್ಪನೊಡನೆ ಸೇನೆಯನ್ನು ಕಳುಹಿಸಿ ಕಡಲೆಡೆಯೊಳೆಸೆವ ನವಿಲ್‌ಗಡಮಂ ಸಾಧಿಸಿ, ಆ ಗಡಕ್ಕೆ 'ಬಸವರಾಜದುರ್ಗವೆಂಬ ಸ್ವನಾಮಾಂಕಿತವನ್ನು ರಚಿಸಿ, ಮಲೆಯಾಳದವರಿಗೆ ಸಹಾಯಕರಾಗಿ ಬಂದ ಮೈಸೂರಿನ ಮಾಯಾವಿಗಳನ್ನು ಬಡಿದೋಡಿಸುತ್ತಾನೆ.'[97]

---

[96] ಷಡಕ್ಷರಿ, ಧರ್ಮಶಿರೋಮಣಿ 1 ಪದ್ಯ. 26.

[97] ಗುರುಬಸವನ "ವೀರಶೈವಸುಧಾನಿಧಿ" – ಪದ್ಯ 13. (ಹಸ್ತಪ್ರತಿ)
O.R.I. No. 5287
ಮತ್ತು ಕೆ.ನೃ.ವಿ. ಪು. 173-174.

ಬಸವರಾಜೇಂದ್ರ ಸಕಲ ವಿದ್ಯಾಪಾರಂಗತ. ಸಾಧನೆ, ಗಜತುರುಗವೈಹಾಳಿ ಮೊದಲಾದ ರಾಜೋಪಯುಕ್ತ ವಿದ್ಯೆಗಳೇ ಅಲ್ಲದೆ, ಸಂಸ್ಕೃತ ಮತ್ತು ಕನ್ನಡ-ಭಾಷಾಕವಿಯೂ ಆಗಿದ್ದಾನೆ. ಈ ಉಭಯ ಭಾಷೆಗಳ ಮೇಲೂ ಅವನಿಗೆ ಸಾಕಷ್ಟು ಪ್ರಭುತ್ವ ಇದೆ. ಮಂತ್ರಿವರ್ಯ ಶರಜಾ ನಾಗಪ್ಪಯ್ಯ, ಮೌನಪ್ಪ ಪಂಡಿತ, ಅಪ್ಪಯ್ಯ, ಗಂಗಾದೇವಿ, ಮೊದಲಾದ ಕವಿ, ಕವಯಿತ್ರಿಯರಿಗೆ ಆಶ್ರಯವಿತ್ತು ಅನೇಕ ಕೃತಿಗಳ ರಚನೆಗೆ ಕಾರಣನಾಗಿದ್ದಾನೆ. ಅಲ್ಲದೆ ಸುಭಾಷಿತ ಸುರದ್ರುಮ ಎಂಬ ನೀತಿಗ್ರಂಥವನ್ನೂ, ಶಿವತತ್ತ್ವ ರತ್ನಾಕರ ಎಂಬ ಬೃಹತ್ ವಿಶ್ವಕೋಶವನ್ನೂ ರಚಿಸಿದ್ದಾನೆ ಸಂಸ್ಕೃತದಲ್ಲಿ. ಸೂಕ್ತಿ ಸುಧಾಕರ ಎಂಬ ವಸ್ತುಕಕಾವ್ಯವನ್ನು ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ವಿರಚಿಸಿ 'ಸೂರಿನಿಕರ ಕಲ್ಪದ್ರುಮ' ಎಂಬ ಬಿರುದನ್ನು ಪಡೆದಿದ್ದಾನೆ.

ಈ ಧರ್ಮಪ್ರಭು ಪ್ರತಿವರ್ಷದ ಕಾರ್ತೀಕ ಮಾಸದ ಪ್ರತಿ ಸೋಮವಾರದಲ್ಲೂ ಜಂಗಮ ಪಾದಪೂಜಾ ಪದ್ಧತಿಯನ್ನು ಜಾರಿಗೆ ತಂದು ಸಕಲ ಜನ ಹಿತಾರ್ಥಂ ವೇಣುಪುರೀ ನದಿಗೆ ಶಿಲಾಸೇತುವಂ ಕಟ್ಟಿಸಿ, ಪರಮಹಂಸ ಪಕೀರರ್ಗಂ ಪ್ರತಿದಿನದೊಳ್ ರೊಟ್ಟಿಗಳನೀವ ಧರ್ಮಮುಮಂ, ಮತ್ತಂ ಪಸಿದವರ್ಗನ್ನಮುಂ, ಶಿಶುಗಳ್ಗೆ ಪಾಲ್ಬೆಣ್ಣೆಗಳ ನೀವಂತು ಕಟ್ಟಳೆಯುಮಂ ರಚಿಸಿ, ದಾಸೋಹಂ, ಪುರವರ್ಗಂ, ಭಾಸುರ ಮಠಮಾನ್ಯ ಸತ್ರಮೆಂಬಿವು ಮೊದಲಾದ ಸಕಲ ಧರ್ಮಮಂ ವಿರಚಿಸಿ, ಹಲವು ದೇವಾಲಯಗಳಿಗೆ ದಾನದತ್ತಿಗಳನ್ನಿತ್ತು, ಶೃಂಗೇರಿಯ ಶ್ರೀ ಸಚ್ಚಿದಾನಂದ ಭಾರತಿಗಳವರಿಗೆ ಭಕ್ತಿಯ ಕಾಣಿಕೆ ಸಲ್ಲಿಸಿ, ಧರ್ಮಪೀಠದ ರಕ್ಷಣೆ ಮಾಡಿದ್ದಾನೆ. "ಸರ್ವ ವಿದ್ವಜ್ಜನ ಸಂಕುಲಮಂ ರಕ್ಷಿಸಿ, ಧರ್ಮದೊಳಿಳೆಯಂ ಪಾಲಿಸಿದನೊಲ್ದು ಬಸವಮಹೀಶಂ."[೯೮]

ಈ ಪುಣ್ಯಪುರುಷನ ಗುಣಕಥನಕ್ಕೆ ಮಾತು ಸೋತು ಹೋಗುತ್ತವೆ. ಏಕೆಂದರೆ "ಆಕಾಶದ ನಕ್ಷತ್ರಗಳನ್ನೆಲ್ಲ ಎಣಿಸುವ ಪ್ರೌಢಿಮೆಯೂ, ಸಮುದ್ರತೀರದ ಮಳಲನ್ನೆಣಿಸುವ ಸಾಮರ್ಥ್ಯವೂ, ಕುದುರೆಯ ಮೈಗೂದಲನ್ನೆಣಿಸುವ ಕೌಶಲವೂ ಲೋಕದಲ್ಲಿ ಯಾವನಿಗಾದರೂ ಇದ್ದರೆ, ಅಂಥವನು ಆ ಬಸವರಾಜೇಂದ್ರನ ಗುಣಗಳನ್ನು ಎಣಿಸಬಹುದು ಅಷ್ಟೆ."[೯೯]

### ೧೬. ಕಿರಿಯ ಸೋಮಶೇಖರ ನಾಯಕ (ಕ್ರಿ.ಶ. ೧೭೧೪-೧೭೪೦)

'ರಿಪು ಭೀಮ'ನೆಂದು ಪ್ರಖ್ಯಾತನಾದ, ಶ್ರೀಮತ್ ಬಸವಮಹೀಶಲಲಾಮಾನ್ವಯ ದುಗ್ಧವಾರ್ಧಿಗೆ ಪೂರ್ಣಶಶಾಂಕನೆನಿಸಿದ ಸೋಮಶೇಖರನು ಶಕವರ್ಷ ೧೬೩೭ನೆಯ

---

[೯೮] ಕೆ.ನೃ.ವಿ. ಪು. 176-177.

[೯೯] ಷಡಕ್ಷರಿ, ಧರ್ಮಶಿರೋಮಣಿ I ಪದ್ಯ· 28.

ಜಯ ಸಂವತ್ಸರದ ಪುಷ್ಯ ಬಹುಳ ೧೦ರಲ್ಲಿ ಕೆಳದಿಯ ರಾಜ್ಯರಮೆಗೆ ಅರಸಾಗುತ್ತಾನೆ. ಈತ ಮಹಾಯೋಧ. ದಿಗ್ಗಜದ ಸೊಂಡಿಲಿಗೆ ಸಮಾನವಾದ ತನ್ನ ದೋರ್ದಂಡ ಖಡ್ಗದಿಂದ ಹೊಡೆದ ಕೂಡಲೇ, ಗಾಯಗೊಂಡ ಶತ್ರುರಾಜರ ವಕ್ಷಸ್ಥಳದಿಂದ ಸುರಿದ ರಕ್ತಪ್ರವಾಹವು ಹರಿದುಹೋಗಿ ಸಮುದ್ರಗಳನ್ನು ಸಮೃದ್ಧಿಪಡಿಸಿತಂತೆ. ಅಂತಹ ಪ್ರಚಂಡ ಪರಾಕ್ರಮಿಯಾದ ಸೋಮಶೇಖರ ಭೂಪನು ಮೈಸೂರ ಮನ್ನೆಯರನ್ನೂ, ಚಿಂತನಕಲ್ಲು ಪಾಳೇಗಾರರನ್ನೂ, ಉಚ್ಚಂಗಿಯಲ್ಲಿದ್ದ ಬಿಳಿಜೋಡಿ ಬರಮಾನಾಯಕ ಮೊದಲಾದವರ ಸೊಕ್ಕು ಮುರಿದು, ರಕ್ಷಣೆ ಬೇಡಿ ಬಂದು ಮರೆವೊಕ್ಕ ಹರಪನಹಳ್ಳಿ, ತರೀಕರೆ, ರಾಯದುರ್ಗಗಳ ನಾಯಕರುಗಳಿಗೆ ಅಭಯವಿತ್ತು ಕಾಪಾಡಿ, ಆ ರಾಜ್ಯಗಳಲ್ಲಿ ರಾಜಕೀಯ ಸುವ್ಯವಸ್ಥೆಯನ್ನು ಏರ್ಪಡಿಸುತ್ತಾನೆ.

ದಂಡೆಯಾತ್ರೆಗಳಂತೆ ಈತನು ಶೃಂಗೇರಿ, ಸುಬ್ರಹ್ಮಣ್ಯ, ವಸುಪುರ, ಶಂಕರ ನಾರಾಯಣ. ಗೋಕರ್ಣ, ಕೊಲ್ಲೂರು ಮೊದಲಾದ ಪುಣ್ಯಕ್ಷೇತ್ರಗಳಿಗೆ ತೀರ್ಥಯಾತ್ರೆಯನ್ನೂ ಕೈಗೊಂಡಿದ್ದಾನೆ. ಶೃಂಗೇರಿಯ ಶ್ರೀ ಸಚ್ಚಿದಾನಂದ ಭಾರತಿ ಮಹಾಸ್ವಾಮಿಗಳವರನ್ನು ಬರಮಾಡಿಕೊಂಡು ತನ್ನ ಭಕ್ತಿಯನ್ನು ವ್ಯಕ್ತಪಡಿಸಿದ್ದಾನೆ. ಚಂದ್ರಶೇಖರಪುರವೆಂಬ ನಗರವನ್ನೂ ನಾಗಪಟ್ಟಣವೆಂಬ ಪೇಟೆಯನ್ನೂ ನಿರ್ಮಾಣಂಗೈಸಿ, ಅಲ್ಲಿ ಅನೇಕ ಅರಮನೆ, ಆರವೆ, ಛತ್ರಗಳನ್ನೂ, ರಾಷ್ಟ್ರದ ಅನೇಕ ಕಡೆಗಳಲ್ಲಿ ಮಠಗಳನ್ನೂ ದೇವಾಲಯಗಳನ್ನೂ ಕಟ್ಟಿಸಿ ಧರ್ಮಭಾಗಿಯಾಗಿದ್ದಾನೆ.[100]

ಕಿರಿಯ ಸೋಮಶೇಖರನು ಸಾಹಿತ್ಯಾಭಿಮಾನಿಯೂ ಹೌದು. ಇವನ ಮಾವನೂ, ಹಿರಿಯ ಮುತ್ಸದ್ದಿಯೂ ಆದ ನಿರ್ವಾಣಯ್ಯನು ಕನ್ನಡ ಸಂಸ್ಕೃತ ಭಾಷೆಗಳಲ್ಲಿ ಹಲವು ಗ್ರಂಥಗಳನ್ನು ಬರೆದಿದ್ದಾನೆ.

ದೈವಭಕ್ತನೂ, ರಿಪುಗಜ ವಿದಾರಣೋದ್ಧತಸಿಂಹನೂ ಆದ ಸೋಮಶೇಖರ ನೃಪನು ಶಿವಮೊಗ್ಗೆಯಲ್ಲಿ ಶಿವಾಧೀನನಾಗುತ್ತಾನೆ.

### ೧೭. ಕಿರಿಯ ಬಸಪ್ಪನಾಯಕ (ಕ್ರಿ.ಶ. ೧೭೪೦ – ೧೭೫೫)

ಕಿರಿಯ ಸೋಮಶೇಖರನಾಯಕನನಂತರ ಅವನ ತಮ್ಮ ವೀರಭದ್ರನ ಪತ್ನಿ ಮಲ್ಲಮ್ಮಾಜಿಯ ಹೊಟ್ಟೆಯಲ್ಲಿ ಹುಟ್ಟಿದ ವಿದ್ವಜ್ಜನ ಸುಬಂಧುವಾದ ಬಸಪ್ಪನಾಯಕನು ಶಕವರ್ಷ ೧೬೬೨ ನೆಯ ಸಿದ್ಧಾರ್ಥಿ ಸಂವತ್ಸರದಲ್ಲಿ ಪಟ್ಟಕ್ಕೆ ಬರುತ್ತಾನೆ. ಈತನ ಆಡಳಿತದ ಅವಧಿಯನ್ನು 'ಕೆಳದೀ ಸಾಹಿತ್ಯದ ಸುಗ್ಗಿಯ ಕಾಲ' ಎಂದು ಕರೆಯಬಹುದು.

---

[100] E.C.VII, Sh. 98; Ibid, VI, Kp, 48; Ibid. Sk.42; M.A.R. 1927, N0. 62,

ಏಕೆಂದರೆ ಕೆಳದಿಯ ಆಸ್ಥಾನದಲ್ಲಿ ಹಿಂದೆಂದೂ ಕಾಣದ, ಕೇಳದ ಸಂಖ್ಯೆಯ ಕವಿಗಳನ್ನೂ, ಕಾವ್ಯಗಳನ್ನೂ ಅದರಲ್ಲೂ ವೈವಿಧ್ಯಮಯ ವಸ್ತುವಿನ್ಯಾಸದ ಕೃತಿಗಳನ್ನೂ ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ರಚಿಸಿರುವುದು ಕಂಡುಬರುತ್ತದೆ. 'ಎರಡನೆಯ ಸೋಮಶೇಖರನನಂತರ ಕೆಳದಿಯ ಆಸ್ಥಾನವು ಆಲಸಿಗಳೂ, ವಿಷಯಾಸಕ್ತರೂ, ಪಿತೂರಿಕಾರರೂ ಆದವರನ್ನು ಕಂಡಿತೇ ಹೊರತು ಪ್ರಾಜ್ಞರೂ, ರಾಜನೀತಿ ನಿಪುಣರೂ ಆದ ರಾಜರನ್ನು ಕಾಣಲಿಲ್ಲ.'[101] ಎಂಬ ಡಾ|| ಚಿಟ್ನೀಸ್‌ರವರ ಅಭಿಪ್ರಾಯಕ್ಕೆ ಕಿರಿಯ ಬಸಪ್ಪನಾಯಕ ಅಪವಾದವಾಗಿ ನಿಂತಿದ್ದಾನೆ. ಬಹುಶಃ ಇವನಾದಮೇಲೆ ರಾಜಸೂತ್ರ ಹಿಡಿದ ವ್ಯಕ್ತಿಗಳಿಗೆ ಶ್ರೀಯುತರ ಹೇಳಿಕೆ ಒಪ್ಪಬಹುದೋ ಏನೋ; ಅದೂ ಸಂದೇಹವೇ. ಆದರೆ ಕಿರಿಯ ಬಸಪ್ಪನಾಯಕನಿಗಂತೂ ಈ ಮಾತು ಸರ್ವಥಾ ಒಪ್ಪುವುದಿಲ್ಲ. ಏಕೆಂದರೆ ಕೆಳದೀ ರಾಜವಂಶದಲ್ಲಿ ಶಿವಾಂಶಿಕನಾಗಿ ಅವತರಿಸಿದ ಈ ಬಸವರಾಜೇಂದ್ರನು, ರೂಪಿನಲ್ಲಿ ರತಿಪತಿ, ರಾಜನೀತಿಯಲ್ಲಿ ಬೃಹಸ್ಪತಿ, ಭೋಗದಲ್ಲಿ ಸುರಪತಿ, ಮಹಾಪ್ರಭಾವದಲ್ಲಿ ಜನಕಮಹಾರಾಜ, ಯಥಾರ್ಥಗಳಾದ ವೇದಾಗ ಮೋಕ್ತಿಗಳನ್ನು ಆಲಿಸುವುದರಲ್ಲಿಯೂ, ಅವಧರಿಸುವುದರಲ್ಲಿಯೂ, ಷಣ್ಮುಖ – "[102]

ಕಿರಿಯ ಬಸಪ್ಪನಾಯಕನು ಸ್ವಯಂ ಕಲಾವಿದ, ಪ್ರಕಾಂಡ ಪಂಡಿತ, ಕೃತಿಕಾರನೂ ಹೌದು. ಅಂತೆಯೇ ಅನೇಕ ಜನ ಕವಿ ಕಲಾವಿದರಿಗೆ ಆಶ್ರಯ ಕೊಟ್ಟಿದ್ದಾನೆ.

ಈತನು ಪಟ್ಟಕ್ಕೆ ಬಂದ ತಾರುಣ್ಯದಲ್ಲಿ ತನ್ನವರಿಂದುಂಟಾದ ಹಲವು ತೊಡಕುಗಳನ್ನು ನಿವಾರಿಸಿಕೊಂಡು ರಾಜಮುದ್ರಾಧಿಕಾರವನ್ನು ಸ್ವಾಧೀನಪಡಿಸಿಕೊಳ್ಳುತ್ತಾನೆ. ಆಗಾಗ ಕಾಟಕೊಡುತ್ತಿದ್ದ ಚಿತ್ರದುರ್ಗದ ಪಾಳೇಗಾರರನ್ನು ಮಾಯಕೊಂಡದ ಬಳಿ ಸದೆಬಡಿದು, ಅಲ್ಲಿನ ನಾಯಕ ಮದಕರಿಯ ನಾಶಕ್ಕೆ ಕಾರಣನಾಗುತ್ತಾನೆ. ಆದರೂ ಬಸವರಾಜ ಶಾಂತಿಪ್ರಿಯ. ನಾನಾರಾಯನು ಎರಡು ಬಾರಿ ದಾಳಿ ನಡೆಸಲು ಬರಲು ಹೊನ್ನಾಳಿಯ ಬಳಿ ಸಂಧಿಸಿ, "ನಾನಾ ನಯ ಭಯ ಧನ ಸಂಧಾನದೆ ಪಿಂದೆಗೆಸಿ ರಾಷ್ಟ್ರಮಂ ರಕ್ಷಿಸಿದಂ."[103] ಇದು ಹೇಡಿತನಕ್ಕೆ ನಿದರ್ಶನವಲ್ಲ, ಅವನ ಶಾಂತಿ ಪ್ರಿಯತೆಗೆ ನಿಂತ ಸಾಕ್ಷಿ.

---

[101] Chitnis, Keladi Administration, P. 41.

[102] ಷಡಕ್ಷರಿ, ಧರ್ಮಶಿರೋಮಣಿ, I ಪದ್ಯ. 35.

[103] ಕೆ.ನೃ.ವಿ.ಪು. 204.

# V ಅವನತಿ

## ೧೮. ಚೆನ್ನಬಸಪ್ಪನಾಯಕ (ಕ್ರಿ.ಶ. ೧೭೫೫ – ೧೭೫೮)

ಅಪುತ್ರವಂತನಾದ ಕಿರಿಯ ಬಸಪ್ಪನಾಯಕನು ನಿರ್ವಾಣಯ್ಯನ ಮಗ, ಗುರುವಪ್ಪನ ಪುತ್ರ ಚೆನ್ನಪ್ಪ ಎಂಬುವನನ್ನು ಕರೆತಂದು, 'ಚನ್ನಬಸಪ್ಪನಾಯಕ' ಎಂದು ನಾಮಕರಣಮಾಡಿ, ತನ್ನ ಪತ್ನಿ ವೀರಮ್ಮಾಜಿಯ ಮಡಲಿಗಿರಿಸುತ್ತಾನೆ. ಅನಂತರ "ಚನ್ನಬಸವೇಂದ್ರನವನಿಪರನ್ನಂ ರಂಜಿಸುವ ರಾಜ್ಯಕಧಿಪತಿಯಾದಂ." ಮಾತೃಭಕ್ತನೂ, ವಯಸ್ಸಿನಲ್ಲಿ ಕೇವಲ ೧೨ ವರ್ಷದವನೂ ಆದ ಈತನು, "ಚನ್ನವೀರಮ್ಮಾಜಿಯರ ನಿರೂಪಿಸಿದ ಬುದ್ಧಿ ಮಾರ್ಗಂಬಿಡಿದು ವರ್ತಿಸುತ್ತುಂ, ತಂದೆ ಬಸಪ್ಪನಾಯಕರಾಳಿ ಬರುತಿರ್ದ....ಸಮಸ್ತ ಜನರಂ ಸಂರಕ್ಷಿಸುತ್ತುಂ, ಸದ್ಧರ್ಮದಿಂ ರಾಜ್ಯವನಾಳುತ್ತುಮಿರ್ಪ್" ಇದ್ದು, "ನಾನಾರಾಯನ ಪ್ರೇರಣೆಯಿಂದ ದಂಡೆತ್ತಿ ಬಂದ ಮಾಧೋಜಿಪುರಂದರನೊಡನೆಯೂ ಕೊಡಗಿನ ವೀರರಾಜನೊಡನೆಯೂ ಸಂಧಾನ ಮಾಡಿಕೊಂಡು, ತನ್ನ ಮರೆಹೊಕ್ಕ ಕೃಷ್ಣಪ್ಪನಾಯಕನನ್ನು ಬೇಲೂರು ಸಂಸ್ಥಾನದ ರಾಜ್ಯತ್ವಕ್ಕೆ ನಿಲ್ಲಿಸಿ, ಡಂಬಳದ ಸಿದ್ಧೇಶ್ವರ ದೇವರಿಗೆ ಭೂಸ್ವಾಸ್ಥೆಯನ್ನೂ ಉತ್ತಾರಂಗೆಯ್ದು, "ಉರುವಿಧಿವಶದೆ ತಾಂ ಚತುರ್ದಶ ವರ್ಷಾಂತರದೊಳೆ ಪರಿಣಯವಿಲ್ಲದೆ ನೆರೆ ರೋಗಾರ್ತಿಯೊಳ್ ಶಿವನೊಳೈಕ್ಯಂ ಬಡೆದಂ." [104]

"ಭಾರತವನ್ನು ಯಾರೂ ಗೆಲ್ಲಲಿಲ್ಲ; ಭಾರತೀಯರು ತಮಗೆ ತಾವೇ ಸೋತರು. ಅವರಲ್ಲಿದ್ದ ಅನೈಕಮತ್ಯ, ದ್ವೇಷ, ಅಸೂಯೆ, ಅಯೋಗ್ಯತೆಗಳೇ ಅವರ ಪತನಕ್ಕೆ ಕಾರಣವಾದುವು. ಜಾತೀಯತೆ, ಪ್ರಾಂತೀಯತೆಗಳು ರಾಷ್ಟ್ರೀಯತೆಯನ್ನು ತುಳಿದು ದೇಶದ ಸರ್ವನಾಶಕ್ಕೆ ಕಾರಣವಾದುವು." [105] – ಈ ಆಪಾದನೆಗೆ ಕೆಳದಿ ಹೊರತಲ್ಲ. ಅಧಿಕಾರದ ಆಶಾಬೆಂತರಗಳ ಅವಾಂತರದಿಂದಲೂ, ಹಲವು ದೇಶದ್ರೋಹಿಗಳ ಕೈವಾಡದಿಂದಲೂ, ಒಡೆದು ಆಳುವ ನೀತಿಯೇ ತಮ್ಮ ಬದುಕಿನ ಗಾಯತ್ರಿ ಎಂದು ಭಾವಿಸಿದ್ದ ಬ್ರಿಟಿಷರೂ, ಪೋರ್ಚುಗೀಸರೂ ಇಲ್ಲಸಲ್ಲದ ಅಪಪ್ರಚಾರಗಳನ್ನು ಕೈಗೊಂಡಿದ್ದರಿಂದಲೂ, ಮಹತ್ವಾಕಾಂಕ್ಷಿ ಹೈದರನ ರಾಜತಂತ್ರದ ಚಾಣಕ್ಯತನದಿಂದಲೂ ಬಿದನೂರು ಪತನಪದವಿಯನ್ನೈದಿತೆಂದು ಊಹಿಸಬಹುದಾಗಿದೆ.

---

[104] ಅವನು ಶಿವೈಕ್ಯನಾದಾಗ 14 ವರ್ಷದವನೆಂತಲೂ, ಅವನು ಕೆಳದಿಯನ್ನಾಳಿದ್ದು ಕೇವಲ 2 ವರ್ಷ 8 ತಿಂಗಳೆಂತಲೂ (ಕೆ.ನೃ.ವಿ. ಪು. 215-216) ತಿಳಿಸುವುದರಿಂದ ಅವನು ಪಟ್ಟಕ್ಕೆ ಬಂದಾಗ 11-12 ವರ್ಷದವನಾಗಿದ್ದಿರಬೇಕು.

[105] ಸಾ.ಶಿ. ಮರುಳಯ್ಯ, ವೀರಭಾರತಿ. ಪು. 54

## ೧೯. ಚೆನ್ನವೀರಮ್ಮಾಜಿ (– –)
## ಮತ್ತು
## ೨೦. ಮೂರನೆಯ ಸೋಮಶೇಖರನಾಯಕ (ಕ್ರಿ.ಶ. ೧೭೫೭-೧೭೬೩)

ಚನ್ನಬಸವೇಂದ್ರಭೂಪನು ಗತಿಸಿದ ಮೇಲೆ ಚನ್ನವೀರಮ್ಮಾಜಿಯು, ಪಿರಿದುಂ ಚಿಂತಿಸಿ, ತನ್ನ ಸೋದರಮಾವನ ಕಿರಿಯಮಗ ಸೋಮಶೇಖರನಾಯಕನಿಗೆ ಪಟ್ಟಗಟ್ಟಿ, 'ಬಾಲಕನಾದ ಕಾರಣದಿಂದ, ಕುಮಾರನಂ ಮುಂದಿಟ್ಟುಕೊಂಡು .... ಸದ್ಧರ್ಮದಿಂದ ರಾಜ್ಯ ಪ್ರತಿಪಾಲನಂಗೆಯ್ಯುತ್ತಮಿರ್ದು, ಶೃಂಗಪುರದ ಧರ್ಮ ಸಂಸ್ಥಾನದ ಸ್ವಾಮಿಗಳ ಮಠಕ್ಕೆ ಬಹಳ ಋಣಭಾರವಾಗಿರ್ಪುದೆಂಬ ವರ್ತಮಾನಮಂ ಕೇಳ್ದಲ್ಲಿಗೆ ಚಿನ್ನಭಂಡಾರದ ಪುರುಷೋತ್ತಮಯ್ಯನ ಮಗ ಹೂವಯ್ಯನಂ ಕಳುಪಿ, ಅಭಿನವ ಸಚ್ಚಿದಾನಂದಸ್ವಾಮಿಯವರಂ ವೇಣುಪುರಕ್ಕೆ ಬಿಜಯಮಾಡಿಸಿದಳ್."[106]

ಕ್ರಿ.ಶ. ೧೭೬೩ ರಲ್ಲಿ ಹೈದರಾಲಿಯು ದಂಡೆತ್ತಿಬಂದು, ಬಿದನೂರನ್ನು ಸ್ವಾಧೀನ ಪಡಿಸಿಕೊಂಡು, ಚನ್ನವೀರಮ್ಮಾಜಿಯನ್ನೂ ಅವಳ ದತ್ತಕ ಮುಮ್ಮಡಿ ಸೋಮಶೇಖರ ನಾಯಕನನ್ನೂ ಮದ್ದಗಿರಿಯ ಕೋಟೆಯಲ್ಲಿ ಸೆರೆಹಾಕುತ್ತಾನೆ.[107] ಮರಾಠಿಗರಿಗೂ, ಚನ್ನವೀರಮ್ಮಾಜಿಯವರಿಗೂ ಹಿಂದೆಯೇ ಮಾತುಕತೆ ನಡೆದಿರುತ್ತದೆ.[108] ಅದರ ಪ್ರಕಾರ ಮರಾಠೆಯವರ ಸೇನೆ ಬಂದು, ಸೆರೆಯಲ್ಲಿದ್ದ ರಾಣಿಯನ್ನೂ, ಅವಳ ದತ್ತುಪುತ್ರನನ್ನೂ ಬಿಡಿಸಿಕೊಂಡು ಹೋಗುತ್ತದೆ. ಪುಣೆಗೆ ಹೋಗುವ ಹಾದಿಯಲ್ಲಿ ರಾಣಿಯು ತೀರಿಕೊಳ್ಳುತ್ತಾಳೆ.[109] ಮಹಾಶಿವಭಕ್ತೆಯಾದ ಆಕೆಯು ಈ ಸೋಲಿನ ಅಪಮಾನವನ್ನು ಸಹಿಸಲಾರದೆ ತನ್ನ ಇಷ್ಟಲಿಂಗವನ್ನು ನುಂಗಿ ಅಸುನೀಗಿದಳೆಂದೂ, ಅವಳ ದತ್ತುಪುತ್ರನು ನರಗುಂದದಲ್ಲಿ ಉಳಿದನೆಂದೂ ಐತಿಹ್ಯವಿದೆ.[110] ಆದರೆ ಹಲವು

---

[106] ಕೆ.ನೃ.ವಿ. ಪು. 217-219.

[107] M.A.R. 1930, P. 87; Buchanan, A Journey, P. 379; Rice. M.C.I., P. 160; Ibid. Mys. II, P. 437.

[108] ಪೇಶ್ವಾದಫ್ತರಗಳನ್ನು ನೋಡಿ (Volumes 35-36)

[109] Rice. M.C.I. P. 161; Ibid, Mys. II, P. 437; Buchanan, a Journey, P. 379.

ಕೆಳದಿ ನೃಪವಿಜಯದಲ್ಲಿ ಈ ಮುಂದಿನ ಮಾಹಿತಿ ದೊರೆಯುವುದಿಲ್ಲ.

[110] ಈಗ ನರಗುಂದದಲ್ಲಿ ಹಾಲೀ ಈ ವಂಶಸ್ಥರು ಬದುಕಿದ್ದಾರೆ. ಅವರೇ ಕೆಳದಿ ಶಿವರಾಜ ಬಸವರಾಜ ಅರಸ್. ಅವರ ಪೂರ್ವಿಕರು ಮೈಸೂರು ಸಂಸ್ಥಾನದ ಅರಸರಿಗೆ ಕ್ರಿ.ಶ. 1927ರಲ್ಲಿ ಅರ್ಪಿಸಿದ ಒಂದು ಬಿನ್ನವತ್ತಳೆಯಲ್ಲಿ ಹಲವು ವಿಷಯಗಳು ದೊರೆಯುತ್ತವೆ. ಅನುಬಂಧ 1 ನೋಡಿ.

ಉಲ್ಲೇಖಗಳು ಸೋಮಶೇಖರನು ಅವಿವಾಹಿತನಾಗಿ ಮಣೆಯಲ್ಲಿ ಸತ್ತ ಎಂದು ತಿಳಿಸುತ್ತವೆ.[111] ಅಂತೆಯೇ ಚನ್ನವೀರಮ್ಮಾಜಿಯ ಶೀಲವನ್ನು ಶಂಕಿಸಿರುವ ಕೆಲವು ಸಮಕಾಲೀನ ಪ್ರವಾಸಿಗರ ಬರಹಗಳೂ ಇವೆ. ಆದರೆ, ಇವುಗಳಲ್ಲಿ ಸತ್ಯಾಂಶ ಎಷ್ಟಿದೆಯೋ ಹೇಳಬರುವುದಿಲ್ಲ. ಏಕೆಂದರೆ, ಇಂಗ್ಲೀಷರೂ, ಪೋರ್ಚುಗೀಸರೂ ಮತ್ತು ಮೈಸೂರಿನ ಮುಸಲ್ಮಾನರೂ ಸಂಪದ್ಭರಿತವಾದ ಕೆಳದಿಯನ್ನು ಕಬಳಿಸುವ ಇಚ್ಛೆಯನ್ನಿಟ್ಟುಕೊಂಡದ್ದರಿಂದ ದೇಶವನ್ನು ಒಡೆಯಲು ಮಾಡಿದ ಕುಹಕ ಕುತಂತ್ರಗಳಿದ್ದರೂ ಇರಬಹುದು. ಅಥವಾ ತಿರುಮಲರಾಯ, ಮೀರಸಾದಕ್, ವೆಂಕಟರಾಯ, ಯಟ್ಟಪ್ಪ–ಇಂಥವರಿಗೇನೂ ನಮ್ಮ ದೇಶದಲ್ಲಿ ಕೊರತೆಯಿಲ್ಲ. ಅಂತಹ ದ್ರೋಹಿಗಳ ಕೈವಾಡವೇ ಪ್ರವಾಸಿಗರ ಬರಹಕ್ಕೆ ಆಹಾರವಾಗಿರಬಹುದು. ಈ ಅನುಮಾನಕ್ಕೆ ಮತ್ತೊಂದು ಐತಿಹ್ಯವನ್ನೂ ನಿದರ್ಶನವಾಗಿಡಬಹುದು. ಅದು ಶೃಂಗೇರಿ ಜಗದ್ಗುರುಗಳವರು ಆ ಕಾಲದಲ್ಲಿ ಹೊರಡಿಸಿದ್ದ ಒಂದು ಶ್ರೀಮುಖ. ಅದರ ಪ್ರಕಾರ– "ಮಹಾರಾಣಿಯವರ ಶೀಲದ ಬಗ್ಗೆ ಅಪಪ್ರಚಾರ ಕೇಳಿ ಬರುತ್ತಿದೆ. ಹಾಗೆ ಯಾರೇ ಆಗಲಿ ಮಾತೃಶ್ರೀ ಸ್ವರೂಪಳಾದ ಮಹಾರಾಣಿಯ ಶೀಲವನ್ನು ಶಂಕಿಸಿ ನುಡಿದಿದ್ದಾದರೆ ಅದು ಗುರುದ್ರೋಹ, ದೈವದ್ರೋಹ, ಮಾತೃದ್ರೋಹ, ದೇಶದ್ರೋಹ ಎಂದು ಭಾವಿಸುವುದಾಗಿಯೂ, ಇದು ಹೈದರ ಪರಂಗಿಗಳು ಮೊದಲಾದ ವಂಚಕರ ಕುಹಕವೆಂದೂ ತಿಳಿಯುತ್ತಿದೆ." ಎಂದಿದೆ.[112]

ಏನೇ ಇರಲಿ ಮನುಷ್ಯಗಿದ್ದಂತೆ ಒಂದು ಸಾಮ್ರಾಜ್ಯಕ್ಕೂ ಹುಟ್ಟು, ಬೆಳವಣಿಗೆ, ಸಾವು ಎಂಬವುಗಳಿವೆ. ಆಯುಸ್ಸು ಮುಗಿದ ಮೇಲೆ ಎಲ್ಲವೂ ಮಡಿದು ಮಣ್ಣಾಗಲೇ ಬೇಕು. ವ್ಯಕ್ತಿಯ ಸಾವಿಗೆ ಒಂದು ಕಾರಣ ಹೇಳಿದಂತೆ ಸಾಮ್ರಾಜ್ಯದ ನಾಶಕ್ಕೂ ಹಲವು ಕಾರಣಗಳನ್ನು ಹುಡುಕಬಹುದು; ಹೇಳಬಹುದು. ಇಂತಹ ಸಮಾಧಾನದ ಮಾತುಗಳಿಂದಲೇ ತೃಪ್ತರಾಗುವುದು ಒಳ್ಳೆಯದು.

---

[111] Buchanan, A Journey II, Pp. 379, 385,
ಆದರೆ, ಬುಕನನ್ ಸಾಹೇಬನನ್ನು ಕೆಳದಿಯ ಬಗ್ಗೆ ಅಧಿಕಾರೀ ಇತಿಹಾಸಕಾರನೆಂದು ಹೇಳಲಾಗುವುದಿಲ್ಲ. ಏಕೆಂದರೆ ಅವನು ಕನ್ನಡನಾಡಿನಲ್ಲಿ ಪ್ರವಾಸ ಕೈಗೊಂಡದ್ದು ಇತ್ತೀಚೆಗೆ. ಅಲ್ಲದೆ ಮಲೆನಾಡಿನ ಹಲವು ಭಾಗಗಳಲ್ಲಿ ಅವರಿವರು ಹೇಳಿದ ಬಾಯಿಮಾತುಗಳನ್ನೇ ಬರೆದಿಟ್ಟಿದ್ದಾನೆ. ಕೆಳದಿಯು ಬಾಳಿ ಬದುಕಿದ ಕಾಲದಲ್ಲಿದ್ದವನಲ್ಲ; ಅಥವಾ ಇದರ ಇತಿಹಾಸವನ್ನು ಇತಿಹಾಸಜ್ಞನಾಗಿ ಅಧ್ಯಯನ ನಡೆಸಿದವನೂ ಅಲ್ಲ.

[112] ಇದನ್ನು ತಿಳಿಸಿದ ಭೂಪಾಳಂರು ಚಂದ್ರಶೇಖರಯ್ಯನವರಿಗೆ ತುಂಬಾ ಋಣಿಯಾಗಿದ್ದೇವೆ.

# VI ಒಂದು ಸಮೀಕ್ಷೆ

ಕೆಳದಿಯನ್ನಾಳಿದವರು ಧರ್ಮಪ್ರಭುಗಳು. ಪ್ರಜಾಪೀಡನೆಯಲ್ಲೀ ನಿರತರಾದ ಪುಂಡುಪಾಳೆಯಗಾರರಲ್ಲ. ಪ್ರಜಾಕ್ಷೇಮವೇ ಅವರ ಬಾಳಿನ ಪರಮಗುರಿ; ಜಾತ್ಯಂಧತೆಯು ಕೀಳುಮನಡವರಲ್ಲ. ಅವರದು ವಿಶ್ವವಿಶಾಲವಾದ ಭಾವನೆ. ಧರ್ಮ, ರಾಜಧರ್ಮ, ಮಾನವಧರ್ಮ, ಇವುಗಳನ್ನು ಬೆಳಗಿಸಿದ ಮಹಾಮಾನವರು.

ರಾಜನಾದವನಿಗಿರಬೇಕಾದ ಸಕಲ ಅರ್ಹತೆಗಳೂ ಕೆಳದಿಯನ್ನಾಳಿದವರಿಗಿದ್ದು ವೆಂದರೆ ತಪ್ಪಾಗಲಾರದು. ಮುಖ್ಯವಾಗಿ ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಂಶ್ರಯಾದಿ ಷಡ್ಗುಣಗಳನ್ನೂ, ಪ್ರಭುಶಕ್ತಿ, ಮಂತ್ರಶಕ್ತಿ, ಉತ್ಸಾಹ ಶಕ್ತಿಯೇ ಮೊದಲಾದ ಶಕ್ತಿತ್ರಯಗಳನ್ನೂ, ವೃದ್ಧಿ, ಕ್ಷಯ, ಸ್ಥಾನವೆಂಬ ಮೂರು ಉದಯಗಳನ್ನೂ ಪಡೆದವರಾಗಿದ್ದಾರೆ. ಅಂತೆಯೇ ಸಾಮ, ದಾನ, ಭೇದ, ದಂಡವೇ ಮೊದಲಾದ ಚತುರೋಪಾಯ ಚತುರರೂ, ದೇಶ, ಕೋಶ, ಸೇನೆ, ಕೋಟೆ, ಮಂತ್ರಿ, ಮಿತ್ರ, ಮಹೀಶಜನ ಮುಂತಾದ ಸಪ್ತಾಂಗ ಸಂಪತ್ತಿನಿಂದ ಕೂಡಿದವರೂ ಆಗಿದ್ದಾರೆ. ಅವರು ಎಷ್ಟು ರಾಜನೀತಿಜ್ಞರೋ, ಅಷ್ಟೇ ಪ್ರಜಾಹಿತಚಿಂತಕರೂ ಆಗಿದ್ದಾರೆ.

ಅವರ "ಗುಣಾತಿಶಯಗಳು ಕೆಳದಿ ಚರಿತ್ರೆಯ ಓದುಗರ ಮನಸ್ಸಿನ ಮೇಲಿ ಅಚ್ಚಳಿಯದೆ ಉಳಿಯದಿರಲಾರವು. ಚೌಡಪ್ಪನ ದೈವಭಕ್ತಿ, ಕರ್ತೃತ್ವಶಕ್ತಿ, ಸದಾ ಶಿವನಾಯಕನ ಮಹಾಪರಾಕ್ರಮ, ದೊಡ್ಡ ಸಂಕಣ್ಣನಾಯಕನ ಘನ ವೈರಾಗ್ಯ, ಚಿಕ್ಕಸಂಕಣ್ಣನಾಯಕನ ಸ್ವಾಮಿನಿಷ್ಠೆ, ಹಿರಿಯ ವೆಂಕಟಪ್ಪನಾಯಕನ ಶೌರ್ಯ, ರಾಜಕಾರಣಪಟುತ್ವ ಶಿವಪ್ಪನಾಯಕನ ಶಿಸ್ತು, ಮುತ್ಸದ್ದಿತನ, ಹಿರಿಯಬಸಪ್ಪ ನಾಯಕನ ಪಾಂಡಿತ್ಯ, ಚೆನ್ನಮ್ಮಾಜಿಯ ಮತ್ತು ವೀರಮ್ಮಾಜಿಯ ಅಸಾಧಾರಣ ಸಾಮರ್ಥ್ಯ, ಇವೆಲ್ಲಕ್ಕೂ ಮಿಗಿಲಾಗಿ ಕೆಳದಿ ಅರಸರ ಧರ್ಮಸಹಿಷ್ಣುತೆ ಮತ್ತು ಸಮದರ್ಶಿತ್ವ ಪ್ರಶಂಸಾರ್ಹವಾಗಿದೆ."[113] ಅವರ ನೂರಾರು ಶಾಸನಗಳಲ್ಲಿ ಪ್ರಕಟಗೊಂಡಿರುವ ಅವರ

---

[113] ಜಿ.ಎಸ್. ದೀಕ್ಷಿತ, ಕೆಳದಿ ನಾಯಕರು; ಪು.49.

ಬಿರುದಿನ ಒಕ್ಕಣೆಯಲ್ಲಿ "ಯಡವ ಮುರಾರಿ ಕೋಟೆ ಕೋಲಾಹಲ."[114] ಎಂಬುದು ಅವರ ಪರಾಕ್ರಮವನ್ನೂ, ಪೌರುಷ ಪ್ರತಾಪಾದಿಗಳನ್ನೂ ಬಿತ್ತರಿಸಿದರೆ, 'ವಿಶುದ್ಧ ವೈದಿಕಾದ್ವೈತ ಸಿದ್ಧಾಂತ ಪ್ರತಿಷ್ಠಾಪಕ'[115] ಎಂಬುದು ಅವರ ಧಾರ್ಮಿಕ ಮನೋಭಾವನೆಯನ್ನೂ, ವೈದಿಕ ಧರ್ಮದ ಬಗೆಗೆ ಅವರಿಗಿದ್ದ ಶ್ರದ್ಧೆಯನ್ನೂ 'ಶಿವಗುರು ಭಕ್ತಿಪರಾಯಣ'[116] ಎಂಬಲ್ಲಿ ಶಿವಾದ್ವೈತಸಿದ್ಧಾಂತದ ಬಗೆಗೆ ಅವರಿಗಿದ್ದ ಭಕ್ತಿಯನ್ನೂ 'ಗೋದೇವ ಬ್ರಾಹ್ಮಣ ಪ್ರತಿಪಾಲಕ'[117] ಎಂದಾಗ 'ಸಕಲ ಜೀವಾತ್ಮರಿಗೂ ಲೇಸನೆ ಬಯಸುವ' ಅವರ ದಯಾಗುಣವನ್ನೂ ಅಭಿವ್ಯಕ್ತ ಪಡಿಸುತ್ತವೆ.

ಹಿರಿಯಬಸಪ್ಪನಾಯಕನವರೆಗೆ ಪ್ರಕಟವಾದ ಕೆಳದಿಯವರ ಶಾಸನಗಳಲ್ಲಿ 'ಪೂರ್ವಮರಿಯಾದೆ' 'ಷಡ್ದರ್ಶನ' ಎಂಬ ಪದಗಳು ಮೇಲಿಂದ ಮೇಲೆ

---

[114] E.C VI, Sg. 5,11,13; Ibid. Kp. 46, 60,61;

Ibid. VII, Sh. 2, 3, 7, 17, 21, 28, 29, 81, 98, 128;

Ibid, Sk. 55, 255, 213, 82, 79, 209, 210;

Ibid. VIII, TL. 84, 5, 166, 38, 56, 82, 83, 66; 97, 127, 156, 80, 184, 185, 91, 41, 42, 54, 40, 81, 48, 55, 75, 76, 7, 145, 85, 34, 92, 73, 65, 99, 50, 67, 180, 188, 96;

Ibid, Sh. 28; Ibid. Sb. 55, 475, 354,

M.A.R. 1936-26; 1938-82; 1928-58; 61, 65;

1927-154; 1944-47; 1943.31; 32; 37, 38, 40, 41, 42, 43, 44, 45.

[115] E.C. VII Sh. 2, 29, 81.

Ibid. Hl. 83, Ibid; VI Sg. 11, 13.

M.A.R. 1936-26; 1938-82, 1928-58, 61, 65,

1927-154: 1944-47; 1943-31, 32, 38, 40, 41, 42, 37, 43, 44, 45.

[116] E.C. VI. Sg. 11, 13; M.A.R. 1936-26; 1938-82;

1928-58; 61, 65; 1927-154; 1944-47, 1943-31, 32, 37, 38, 40, 41, 42, 43, 44, 45.

[117] E.C. VI. Sg. 11, 13.

ಕಾಣಸಿಗುತ್ತವೆ.[118] ಇವುಗಳಿಗೆ ಇಷ್ಟು ಹೇಳಬಹುದು. 'ಪೂರ್ವಮರ್ಯಾದೆ' ಎಂದರೆ ಅನೂಚಾನವಾಗಿ ಪ್ರಾಚೀನ ಕಾಲದಿಂದಲೂ ನಮ್ಮ ದೇಶದಲ್ಲಿ ನಡೆದುಕೊಂಡು ಬಂದಿರುವ ದಯೆ, ದಮ, ದಾನ, ತಪ, ಶೀಲ, ಧರ್ಮರಕ್ಷಣೆ, ಮಾನವೀಯತೆ, ಅತಿಥಿ ಸತ್ಕಾರ, ಅನ್ನದಾನ, ವಿದ್ಯಾದಾನಗಳನ್ನು ನಡೆಸುವುದು ಇತ್ಯಾದಿ ಭಾರತೀಯ ಸಂಸ್ಕೃತಿಯ ವಿವಿಧ ಅಂಗಗಳ ಆಚರಣೆ ಇದ್ದಿರಬೇಕು. ಅಥವಾ ಕೆಳದಿಯವರು ತಮ್ಮ ಪ್ರಭುಗಳಾದ ವಿಜಯನಗರದವರು ಯಾವ ಯಾವ ಧಾರ್ಮಿಕ ಕಾರ್ಯಗಳನ್ನು ಸಾಂಸ್ಕೃತಿಕ ಚಟುವಟಿಕೆಗಳನ್ನು ದಾನದತ್ತಿ, ತೀರ್ಥಯಾತ್ರೆ, ಜೈತ್ರಯಾತ್ರೆ, ದುಷ್ಟಶಿಕ್ಷೆ, ಶಿಷ್ಟರಕ್ಷೆ ವಿದ್ವದ್ಗೋಷ್ಠಿಗಳ ಸಮಾವೇಶ. ಸರ್ವಧರ್ಮ ಸಮನ್ವಯತೆ, ನ್ಯಾಯ ನೀತಿ ಪಾಲನೆ, ಇತ್ಯಾದಿ ಕಾರ್ಯಾಚರಣೆಗಳನ್ನೇ ತಾನೂ ತಪ್ಪದೆ ನಡೆಸಿಕೊಂಡು ಬರುವುದು ಎಂಬರ್ಥದಲ್ಲಿದ್ದಿರಬೇಕು. ಕೆಳದಿ ತನ್ನ ಪರಿಮಿತಾವಧಿಯಲ್ಲಿ ಮಹಾಸಾಮ್ರಾಜ್ಯದಷ್ಟೇ ಭಾರತೀಯ ಸಂಸ್ಕೃತಿಯ ರಕ್ಷಣೆ ಮಾಡಿಕೊಂಡು ಬಂದಿದೆ.

ಎರಡನೆಯದಾಗಿ, ವೀರಶೈವಮಠಗಳಿಗೆ ಕೆಳದಿಯವರು ಹಾಕಿಕೊಟ್ಟ ಶಾಸನಗಳಲ್ಲಿ "....ನಿಮ್ಮ ಶಿಷ್ಯಪಾರಂಪರ್ಯೆಯಾಗಿ ಆಚಂದ್ರಾರ್ಕ ಸ್ಥಾಯಿಗಳಾಗಿ ಷಡ್ದರ್ಶನಕ್ಕೂ 'ನಿಡಿಮಾಡಿಕೊಂಡು', ಮಠದ ಧರ್ಮವ ನಡೆಸಿಕೊಂಡು ಬಾಹುದೆಂದು ಕೊಟ್ಟ ತಾಂಮ್ರ ಶಾಸನ."[119] ಎಂದಿರುತ್ತದೆ. ಇದರ ಅರ್ಥ — ಷಡ್ದರ್ಶನಗಳನ್ನೂ ವೃದ್ಧಿಪಡಿಸಿಕೊಂಡು ಬರುವುದು ಎಂದು. ಆದರೆ ವೀರಶೈವಮಠಗಳಲ್ಲಿ ಷಡ್ದರ್ಶನಗಳ ವಿಚಾರ ಏಕೆ? ಎಂಬ ಪ್ರಶ್ನೆ ಬರುತ್ತದೆ. ದ್ವೈತ ವಾದಗಳೆನಿಸಿದ ಈ ದರ್ಶನಗಳು ವಿದ್ಯಾರ್ಥಿಗಳ ತಾರ್ಕಿಕಜ್ಞಾನವನ್ನು ಹೆಚ್ಚಿಸಲು ಸಹಕಾರಿಯಾಗುತ್ತವೆ. ಅಲ್ಲದೆ ಅವನು ವೀರಶೈವನಾಗಲಿ, ಬ್ರಾಹ್ಮಣನಾಗಲಿ, ಜೈನನಾಗಲಿ, ಭಾರತೀಯನಾದ ವಿದ್ಯಾರ್ಥಿ ಭಾರತೀಯ ಧರ್ಮ, ದರ್ಶನಗಳನ್ನು ಅರಿಯುವುದು ಅನಿವಾರ್ಯ. ಆದ್ದರಿಂದ ಷಡ್ದರ್ಶನ ಬೋಧೆ, ಅವುಗಳನ್ನು ಬೆಳೆಸುವುದು ವೀರಶೈವ ಮಠಗಳಿಗೂ ಸೇರಿದ್ದಿತು. ಅಂತೆಯೇ "ಮಠದ ಧರ್ಮವ ನಡೆಸಿಕೊಂಡು ಬಾಹುದೆಂದು" ಎನ್ನುವುದೇ ಮಠದ "ಪೂರ್ವಮರ್ಯಾದೆ"ಯನ್ನು ತಪ್ಪಿಸದಂತೆ ಅವ್ಯಾಹತವಾಗಿ ನಡೆಸಿಕೊಂಡು ಬರುವುದು,

---

118 E.C. VIII, TL. 145, 34, 80, 92, 78, 65, 99, 50, 75, 76, 67, 188, 180, 96, 101, 41, 42, 54, 40, 81, 48, 55, 75, 76.

ಹಿರಿಯಬಸವಪ್ಪನಾಯಕನ ಕಾಲದ ಶಾಸನಗಳಲ್ಲಿ "ಪೂರ್ವಮರ್ಯಾದೆ" ಮತ್ತು 'ಷಡ್ದರ್ಶನಕ್ಕೆ ನಿಡಿಮಾಡಿಕೊಂಡು' ಇತ್ಯಾದಿ ಅಂಶಗಳಿಲ್ಲ, ಆದರೆ ಮಾತೃಭಕ್ತನಾದ ಬಸವ ರಾಜೇಂದ್ರನು ತನ್ನ ಎಲ್ಲ ಶಾಸನಗಳಲ್ಲೂ ಮಹಾಮಾತೆ ಚೆನ್ನಮಾಂಬೆಯ ಪುಣ್ಯಸ್ಮರಣೆ ಮಾಡಿದ್ದಾನೆ. ತಾನು ಅವಳ ಮಗನೆಂದೇ ಹೇಳಿಕೊಂಡು ಹೋಗಿದ್ದಾನೆ.

119 E.C. VIII. TL. 101.

ನಮ್ಮ ಸಂಸ್ಕೃತಿಯನ್ನು ಉಳಿಸಿ ಬೆಳೆಸುವುದು ಎಂದರ್ಥ. ಅಂದರೆ ದೇಶ ಸಂಚಾರ ದಲ್ಲಿರುವ ಜಂಗಮಜ್ಯೋತಿಗಳಿಗೆ ಪೂಜೆ ಪ್ರಸಾದಗಳನ್ನು ನೀಡಿ ಧರ್ಮವೃಕ್ಷವನ್ನು ಬೆಳೆಸುವುದು ಎಂದು.

ಮತ್ತೊಂದು ಗಮನಾರ್ಹವಾದ ಅಂಶವೆಂದರೆ ಕೆಳದಿಯವರು ಧರ್ಮ ಮತ್ತು ದೇಶ ಎರಡನ್ನೂ ತಮ್ಮ ಎರಡು ಕಣ್ಣುಗಳೆಂದು ಭಾವಿಸಿ ಕಾಪಾಡಿಕೊಂಡು ಬಂದಿದ್ದಾರೆ. ಅವರ ಆಡಳಿತದ ಅವಧಿಯಲ್ಲಿ, ಅವರ ರಾಜ್ಯದಲ್ಲಿ ವೀರಶೈವಧರ್ಮ ತುಂಬಾ ಚೆನ್ನಾಗಿ ಬೆಳಗಿದೆ. ಆದರೆ ಅನ್ಯಧರ್ಮಗಳೂ ಬೆಳಗಲು ಅನುವಾಗಿದೆ, ಪ್ರಭುಗಳ ಆಡಳಿತಕ್ಕೆ ನೆರವಾಗಿದೆ. ಆದ್ದರಿಂದಲೇ ವೀರಶೈವಮಠಗಳಿಗೆ ಕೆಳದಿಯವರ ಅವಧಿಯಲ್ಲಿ ಹೆಚ್ಚಿನ ಪ್ರಾಧಾನ್ಯ ಇದೆ. ಅವುಗಳಲ್ಲಿ ನಾನಾ ವಿಧದ ಮಠಗಳಿದ್ದರೂ ಮಹತ್ತಿನ ಮಠಗಳು ಗಣ್ಯಸ್ಥಾನಗಳಿಸಿಕೊಂಡಿವೆ.

"It is noteworthy that there was perfect co-operation between the Mohattus and the monarchs, between religion and state. The candidate for the pontificate of the matha was jointly appointed by the Mahattu and the king. This was indeed a remarkable feature of the religious administration of the Keladi rulers. By setting bounds to the undesirable tendencies likely to creep into the matha administration and consequently by making the mathas healthy and thriving institutions the rulers really rendered a great service to the cause of Virasaivism in Keladi." [120]

ಈ ಮಠಗಳು ಕುಬುದ್ಧಿಯ ಕಾರಾಗಾರಗಳಲ್ಲ. ವಿಶ್ವವಿಶಾಲ ಮನೋಭಾವನೆ ಯನ್ನುಳ್ಳ ಧರ್ಮಕ್ಷೇತ್ರಗಳು, ಪವಿತ್ರವೂ, ಪ್ರಶಾಂತವೂ ಆದ ಆಶ್ರಮಗಳು. ತಪೋಧನರ ಪ್ರಭಾವದಿಂದ ತೃಪ್ತಿತುಂಬಿದ ಪುಣ್ಯತಾಣಗಳು. ಕೆಳದಿಯ ವೀರಶೈವ

---

[120] Chitnis, Virasaiva Mathas in Keladi Kingdom, The Journal-Karnatka University, Darawad-Social Sciences-Vol. III, 1967.

ಮಠಗಳು ಧರ್ಮಕ್ಷೇತ್ರಗಳಷ್ಟೇ ಅಲ್ಲದೆ ಆ ಕಾಲದ ಪ್ರಮುಖ ವಿದ್ಯಾಕೇಂದ್ರಗಳು[121] ಅಲ್ಲಿ ನಮ್ಮ ಧರ್ಮದ್ಯೋತಕವಾದ ಷಡ್ದರ್ಶನಗಳು ಬೋಧಿಸಲ್ಪಡುತ್ತಿದ್ದುವು. ಶಿವಾದ್ವೈತ ದರ್ಶನವಂತೂ ಪೂರ್ಣ ಪ್ರಕಾಶಕ್ಕೆ ಬಂದು ಹಲವು ಉದ್ಗ್ರಂಥಗಳ ಮೂಲಕ ಪ್ರಸಿದ್ಧಿ ಪಡೆದಿದೆ. ಆದರೆ ಕೆಳದಿಯಲ್ಲಿ ಅನ್ಯಧರ್ಮಗಳಿಗೆ ಅನ್ಯಾಯವಾಗಿಲ್ಲ. "The fact that the Keladi patronage was not confined to those religious institutions only which professed the faith of the ruling monarchs, but also, extended to Vaishnavism, Jainism, Islam and even to Christianity, bearse loquent testimony to the religious catholicity and broadmindedness of the Keladi rulers."[122] ಎಲ್ಲವಕ್ಕೂ ಸಮಾನಸ್ಥಾನ ಸಿಕ್ಕಿರುವುದು ಕಂಡುಬರುತ್ತದೆ. ಎಲ್ಲ ಧರ್ಮಗಳಿಗೂ ಸಾಕಷ್ಟು ಪ್ರೋತ್ಸಾಹ ಸಿಕ್ಕಿದೆ, ಎಲ್ಲೆಡೆಯೂ ಮಾನ್ಯತೆ ದೊರಕಿದೆ. ಹಿರಿಯ ಸೋಮಶೇಖರನಾಯಕನ ಒಂದು ಶಾಸನವು[123] ತಿಳಿಸುವಂತೆ–

"ಶಿವರಾಜಪುರದ ಅಗ್ರಹಾರದ ನಾನಾಗೋತ್ರದ, ನಾನಾಸೂತ್ರದ, ನಾನಾ ಶಾಖೆಯ ನಾನಾ ನಾಮಧ್ಯೇಯದ ಮಹಾಜನಂಗಳು ದೇವಸ್ಥಾನ ಸತ್ರ ಧರ್ಮಕೆ ಸಹಾ ನಂಮ ಪಿತೃವ್ಯರಾದ ವೆಂಕಟಪ್ಪನಾಯಕರು ನಂಮ ಅಂಗ್ಗ್ರಜರಾದ ಭದ್ರಪ್ಪ ನಾಯಕರು ಸಹಾ ಹಿರಣ್ಯೋದಾನಧಾರಾಪೂರ್ವಕವಾಗಿ ಶಿವಾರ್ಪಿತವಾಗಿ ಸರ್ವಮಾನ್ಯವಾಗಿ ಬಿಟ್ಟ ಸ್ವಾಸ್ತಿಗೆ ಬರಸಿಕೊಟ್ಟ ಧರ್ಮಶಾಸನ" — ಇದೇ ಸರ್ವ ಧರ್ಮಸಮನ್ವಯತೆ, ಇವೇ 'ಪೂರ್ವಮರಿಯಾದೆ', ಇದೇ ನಮ್ಮ ವಿಶಿಷ್ಟ ಸಂಸ್ಕೃತಿಯ ಸ್ಪಷ್ಟಸ್ವರೂಪ. ನೂರಾರು ವೀರಶೈವ ಮಠಗಳನ್ನು ಕಟ್ಟಿಸಿ, ಅವುಗಳಿಗೆ ಭೂಸ್ವಾಸ್ಥೆಗಳನ್ನು ಬಿಟ್ಟು,[124] ಎತ್ತಿನ ಹೇರಿಗೆ ಕೊಡಬೇಕಾಗಿದ್ದ ತೆರಿಗೆಯನ್ನು

---

[121] Op-Cit-156.

ಶಾಸನದಿಂದ ಕೇವಲ ವೀರಶೈವ ಮಠವಷ್ಟೇ ಅಲ್ಲವೆ ಇತರ ಧಾರ್ಮಿಕ ಮಠಗಳೂ ವಿದ್ಯಾಕೇಂದ್ರಗಳಾಗಿದ್ದವು ಎಂಬುದು ತಿಳಿಯುತ್ತದೆ. ಈ ಶಾಸನದಲ್ಲಿ ವಿದ್ಯಾರ್ಥಿಗಳಿಗೂ ಬೋಧಿಸುವ ಆಚಾರ್ಯರಿಗೂ ಮೀಸಲೆಂದು ಭೂಸ್ವಾಸ್ಥೆ ಬಿಟ್ಟಿರುವುದಾಗಿದೆ.

[122] Chinis, Keladi Administration, P. 60.

[123] E.C. VIII, TL. 7.

[124] E.C. VIII, TL, 85, 68, 71, 83, 97, 181, 84; Ibid. VII, Sk. 255, 27; Ibid. Sh. 28, 29; Ibid. Kp. 60, 61, 46.

ವಜಾವಮಾಡಿ 'ಎತ್ತಿನಮಾನ್ಯ' ಹಾಕಿ ಕೊಟ್ಟಿದ್ದಾರೆ;[125] ಬ್ರಾಹ್ಮಣರಿಗೆ ಅಗ್ರಹಾರಗಳನ್ನೂ,[126] ಜೈನರಿಗೆ ಬಸದಿಗಳನ್ನೂ,[127] ಮುಸಲ್ಮಾನರಿಗೆ ಮಸೀದಿಗಳನ್ನೂ,[128] ಕ್ರೈಸ್ತರಿಗೆ ಚರ್ಚುಗಳನ್ನೂ[129] ಕಟ್ಟಿಸಿಕೊಟ್ಟು ದಾನ ದತ್ತಿಗಳನ್ನಿತ್ತು ಪ್ರೋತ್ಸಾಹ ನೀಡಿದ್ದಾರೆ. ಸರ್ವಧರ್ಮಗಳನ್ನೂ ಈ ಧರ್ಮ ಪ್ರಭುಗಳು ಸಮಾನದೃಷ್ಟಿಯಿಂದ ನೋಡಿಕೊಂಡಿದ್ದಾರೆ.

ನಿಷ್ಠಾವಂತ ಜಂಗಮಪ್ರೇಮಿಯಾದ ಕೆಳದಿಯ ಸದಾಶಿವರಾಯನು ಹೂವಿನ ಹಂಪಯ್ಯನು ಕಟ್ಟಿಸಿದ ಮಹತ್ತಿನ ಮಠಕ್ಕೆ ಭೂಸ್ವಾಸ್ಥೆ ಬಿಟ್ಟಂತೆ,[130] 'ಸದಾಶಿವ ಪುರ'ವೆಂಬ ಅಗ್ರಹಾರವನ್ನು ಕುಶಾವತೀ ತೀರದಲ್ಲಿ ಕಟ್ಟಿಸಿ ಬ್ರಾಹ್ಮಣರಿಗೆ ಶಿವಾರ್ಪಿತ ಮಾಡಿದ್ದಾನೆ.[131] "ಶೈವಸ್ಥಾನ ವಿಷ್ಣುಸ್ಥಾನ ದೇವತಾಪ್ರತಿಷ್ಠೆ ಮಾಡಿಸಿದ್ದರೆ, ಇವನ ಮಂತ್ರಿ ಮಾದಯ್ಯನೆಂಬುವನು ಸತ್ರಗಳನ್ನು ಕಟ್ಟಿಸಿ, ಅಧ್ಯಯನ ಪುರಾಣ ಮೊದಲಾದುವುಗಳಾಗಿ ಬ್ರಾಹ್ಮಣರಿಗೆ ಭೂದಾನ ಮಾಡಿದ್ದಾನೆ."[132] ರಾಮರಾಜ ನಾಯಕನು ಉಡುಪಿಯ ಶ್ರೀ ಕೃಷ್ಣದೇವರಿಗೂ ವಾದಿರಾಜತೀರ್ಥ ಶ್ರೀ ಪಾದಂಗಳಿಗೂ, ಬಂಕಾಪುರದ ರಘುನಿಧಿತೀರ್ಥ ಶ್ರೀಪಾದಂಗಳಿಗೂ, ಅನೇಕ ಭೂಸ್ವಾಸ್ಥೆಗಳನ್ನು ದಾನವಾಗಿ ಕೊಟ್ಟಿದ್ದಾನೆ.[133] ಹಿರಿಯ ವೆಂಕಟಪ್ಪನಾಯಕನು ಸದಾಶಿವಸಾಗರ,

---

[125] E.C. VIII, TL. 68, 84, 80, 185, 184, 91, 42, 49; Ibid. VII 28; M.A.R. 1928-58; Ibid. 1943-37, 40, 43, 45.

[126] E.C. VIII, TL. 5; ಕೆ.ನೃ.ವಿ. ಪು. 41, 87, 88; ಶಿವ. ರತ್ನಾಕರ—VII, XV, 112; ಅದೇ. VIII, II, 16-17.

[127] E.C. VIII, TL, 166 (ಅನಂತನಾಥ ಚೈತ್ಯಾಲಯದಲ್ಲಿ ನಡೆವ ಧರ್ಮ ವಿನಿಯೋಗಕ್ಕಾಗಿ ದಾನ)

[128] Ibid. TL. 38, 39; Ibid. Sa. 108;

[129] Rice. M.C.I. P. 159.

[130] Mac. coll. 18-15-7

[131] ಕೆ.ನೃ.ವಿ. ಪು. 41; Q.J.M.S. XXI, PP. 377-378; ವೀರಶೈವಾನಂದ ಚಂದ್ರಿಕಾ. I-20.

[132] E.C. VIII, TL. 5.

[133] Ibid. VIII, Sb. 55.

ಬಾರಕೂರು, ಆನಂದಪುರ. ಇನ್ನೂ ಅನೇಕ ಮಠಗಳಿಗೂ ಮಠಾಧಿಪತಿಗಳಿಗೂ ದಾನದತ್ತಿ ನೀಡಿದ್ದಾನೆ.[134] ಮುಖ್ಯವಾಗಿ ಶೃಂಗೇರಿ ಮಠದ ಪುನಃ ಪ್ರತಿಷ್ಠೆಗೆ ಕಾರಣನಾಗಿದ್ದಾನೆ. ಅಂದಿದ್ದ ಜಗದ್ಗುರುಗಳಾಗಿದ್ದ ಶ್ರೀ ಶ್ರೀ ಶ್ರೀ ಅಭಿನವ ನರಸಿಂಹ ಭಾರತಿಗಳನ್ನು ಭಯ ಭಕ್ತಿಯಿಂದ ಕಂಡು ಗೌರವಿಸಿದ್ದಾನೆ.[135] ವೀರಾಂಬಾಪುರವೆಂಬ ಅಗ್ರಹಾರವನ್ನು ಕಟ್ಟಿಸಿ ಬ್ರಾಹ್ಮಣೋತ್ತಮರಿಗೆ ಧಾರೆಯೆರೆದು ಸ್ಥಿರಶಾಸನ ಹಾಕಿಸಿ ಕೊಟ್ಟಿದ್ದಾನೆ.[136] ಜೈನ ಧರ್ಮಿರ್ಯಯರಿಗೆ ಅನುಕೂಲವಾಗಲೆಂದು ವೆಂಕಟಾದ್ರಿ ಭೂಪನು ಮೇಳಿಗೆಯಲ್ಲಿ ಶ್ರೀಮದನಂತನಾಥ ಚೈತ್ಯಾಲಯದಲ್ಲಿ ನಡೆವ ಧರ್ಮ ವಿನಿಯೋಗಕ್ಕೆ ಸರ್ವಮಾನ್ಯದ ಸ್ವಾಸ್ಥೆ ನೀಡಿದ್ದಾನೆ.[137] ಅಂತೆಯೇ ಭುವನಗಿರಿಯಲ್ಲಿ ಕಟ್ಟಿಸಿದ ಮಸೀದಿಗೆ ಧರ್ಮಶಾಸನವನ್ನಿತ್ತು ಇಸ್ಲಾಂಧರ್ಮಕ್ಕೂ ಪೋಷಣೆ ನೀಡಿದ್ದಾನೆ.[138] ಶ್ರೀರಾಮಾನುಜ ಪಂಥೀಯರಿಗೂ ದತ್ತಿಕೊಟ್ಟು ಮಾಸಿಸಿದ್ದಾನೆ.[139]

ವೀರಭದ್ರನಾಯಕನು ಇಕ್ಕೇರಿಯ ಮೈಲಾರೇಶ್ವರ ದೇವಾಲಯಕ್ಕೆ ದತ್ತಿ ಕೊಟ್ಟಿರುವುದಲ್ಲದೆ, ಕೆಳದಿ ಸೀಮೆಯ ಅಕ್ಕಿಪೇಟೆಯಲ್ಲಿ ಮಹತ್ತಿನಮಠ ಸ್ಥಾಪಿಸಲು ಭೂಮಿ ಬಿಟ್ಟಿದ್ದಾನೆ.[140] ಶಿವಪ್ಪನಾಯಕನು ಶಿವರಾಜಪುರವೆಂಬ ಅಗ್ರಹಾರವನ್ನು ಬ್ರಾಹ್ಮಣರಿಗೆ ಶಿವಾರ್ಪಿತಮಾಡಿ, ಶೃಂಗೇರಿಯ ಮಠಕ್ಕೂ, ಕಾಶೀಕ್ಷೇತ್ರಕ್ಕೂ ಎಂದಿನಂತೆ ಕಾಣಿಕೆ ಸಲ್ಲಿಸಿದ್ದಾನೆ.[141] ಬ್ರಾಹ್ಮಣರಿಗೆ ಅನೇಕ ದಾನಗಳನ್ನಿತ್ತು ಸಂತೈಸಿದ್ದಾನೆ. ಕ್ರೈಸ್ತಧರ್ಮವೂ ಸಹ ಇವನ ಕಾಲದಲ್ಲಿ ಸಂತೋಷದ ಉಸಿರಾಡಿದೆ.[142] ಭದ್ರಪ್ಪ ನಾಯಕನು ತೀರ್ಥಮುತ್ತೂರು ಮಠದ ಜ್ಞಾನೇಂದ್ರಭಾರತೀಸ್ವಾಮಿಗಳವರಿಗೂ,[143]

---

[134] ಕೆ.ನೃ.ವಿ. ಪು. 41.

[135] M.A.R. 1928-P. 18.

[136] Op.-Cit. P. 86-87; ಶಿವ. ರತ್ನಾಕರ. VI, XIII,167.

[137] E.C. VIII, TL. 166

[138] Ibid. VIII, TL, 38.

[139] Ibid. VIII, Ng, 79.

[140] Ibid. VII, HL, 83.

[141] ಶಿವ.ರತ್ನಾಕರ VII, XV 112 ಮತ್ತು 134; M.A.R. 1928. P. 19; ಕೆ.ನೃ.ವಿ. ಪು. 111-112.

[142] Rice. M.C.I. P. 159.

[143] E.C. VIII, TL. 145.

ಮುಳುಬಾಗಿಲು ವೈಷ್ಣವ ಮಠಕ್ಕೂ[144] ಧರ್ಮಶಾಸನ ನೀಡಿದ್ದಾನೆ. ಸೋಮಶೇಖರನು ಕೂಡಲಿ ಕಲುಮಠದ ರಘುರಾಮತೀರ್ಥರಿಗೆ ಗಾಜನೂರು ಸೀಮೆಯನ್ನು ಬಿಟ್ಟು ಕೊಟ್ಟಿದ್ದಾನೆ.[145] ವೀರಮಾತೆ ಚೆನ್ನಮ್ಮಾಜಿಯು ಲಕ್ಷದ ತೊಂಬತ್ತಾರು ಸಾವಿರ ಜಂಗಮಸ್ತೋಮಕ್ಕೆ ಮಹಾದಾಸೋಹ[146] ನಡೆಸಿದ್ದಲ್ಲದೆ; ಸೋಮಶೇಖರಪುರ ಅಗ್ರಹಾರವನ್ನು ಶ್ರೋತ್ರೀಯ ಬ್ರಾಹ್ಮಣರಿಗೆ ಶಿವಾರ್ಪಿತ ಮಾಡಿದ್ದಾಳೆ.[147] ಅಲ್ಲದೆ ಈ ವೀರಮಾತೆಯು "ತಮ್ಮ ಸೇವಕರಾದ ಶಿವಭಕ್ತಗುರಿಕಾರ ಶೈವ ವೈಷ್ಣವ ಬ್ರಾಹ್ಮಣಗುರಿಕಾರರ ಮುಖದಿಂ ಮಠಮಾನ್ಯ ದೇವಸ್ಥಾನಾಗ್ರಹಾರಾದಿ ನಾನಾವಿಧ ದಾನಧರ್ಮಂಗಳನಾಗಿಸಿ ಶಾಶ್ವತಧರ್ಮ ಕೀರ್ತಿಗಳಂ ಸಂಪಾದಿಸಿ ಸದ್ಧರ್ಮದಿಂ ರಾಜ್ಯ ಪ್ರತಿಪಾಲನಂಗೈದು"[148] ಧರ್ಮದೇವತೆಯೆನಿಸಿದ್ದಾಳೆ.

ಕೆಳದಿಯಲ್ಲಿ ಹೀಗೆ ರಾಜ ರಾಣಿಯರೇ ಅಲ್ಲದೆ ಸೂಳೆಯರೂ ಸಹ ಧರ್ಮ ಪರಾಯಣೆಯರಾಗಿದ್ದಾರೆ. ಆರುನಾಡ ಸೀಮೆಯ ಕಂದಡಿಗನ ಮಾನಿ ಮೇಳದ ಶಿವಲಿಂಗಿಯು ಮಹತ್ತಿನ ಮಠಕ್ಕೆ ಕ್ರಯದಾನ ಮಾಡಿದ್ದಾಳೆ.[149] ಜಂಬುಖಂಡಿಯ ಚೆನ್ನಿಯು ಜೆನಿಗ್ರಾಮದಲ್ಲಿ ಮಹತ್ತಿನ ಮಠ ಕಟ್ಟಿಸಿದ್ದಾಳೆ.[150] ಕೆಳದಿ ಧಾರ್ಮಿಕರ ನಾಡು. ಧರ್ಮಪ್ರಭುಗಳು ಆಳಿದ ರಾಜ್ಯ. ಅಲ್ಲಿ ಕೆಟ್ಟ ಮನುಷ್ಯರಷ್ಟೇ ಅಲ್ಲ, ಕೆಟ್ಟ ಪ್ರಾಣಿಗಳೂ ಶಿಕ್ಷಿಸಲ್ಪಡುತ್ತಿದ್ದುವು.[151]

ಹೀಗೆ ಕೆಳದಿಯನ್ನಾಳಿದ ಎಲ್ಲ ರಾಜರಾಣಿಯರೂ ಎಲ್ಲ ಧರ್ಮಗಳಿಗೂ ರಕ್ಷಣೆ ನೀಡಿ ಪೋಷಿಸಿದ್ದಾರೆ—

"The kings and queens of Keladi were generally wise and benevolent monarchs. They had the

---

[144] Ibid VIII, TL. 156.

[145] Ibid. VII, Sh. 98.

[146] Q.J.M.S. XXII, P. 83; ಶಿವ. ರತ್ನಾಕರ VIII, 31-33.

[147] ಕೆ.ನೃ.ವಿ. ಪು. 167.

[148] ಅದೇ. ಪು, 168.

[149] E.C. VIII, TL. 85.

[150] Ibid. VIII, TL. 68.

[151] Ibid. VII, Sk. 210; Ibid. VII, Sh. 128.

catholocity of vision and breadth of outlook. They were not narrow minded bigots, but broadminded rulers who gave shelter to various religions, faiths, creeds and cults in their state such as Saivism, Virasaivism, Vaishnavism, Muhammadanism, Jainism and Christianity."[152].

ವೀರಶೈವ ಮಠಗಳೂ, ಬ್ರಾಹ್ಮಣರ ಅಗ್ರಹಾರಗಳು ಆ ಕಾಲದ ವಿದ್ಯಾಕೇಂದ್ರಗಳಾಗಿದ್ದುಕೊಂಡು, ವಿದ್ಯಾದಾನ ಮಾಡಿ ಅಜ್ಞಾನವನ್ನೂ ಅನಕ್ಷರತೆಯನ್ನೂ ನೀಗಿವೆ. ಅಂತೆಯೇ ಅತಿಥಿಗಳಿಗೆ ಸತ್ಕಾರ ಕ್ಷೇತ್ರಗಳಾಗಿದ್ದು ನಮ್ಮ ಸಂಸ್ಕೃತಿಯನ್ನು ಸಂರಕ್ಷಿಸಿಕೊಂಡು ಬಂದಿವೆ.

ಪುಣ್ಯಶ್ಲೋಕನಾದ ಚೌಡಪ್ಪನಾಯಕನ ವಂಶೋದ್ಭವರಾದ ಕೆಳದಿ ರಾಜರುಗಳೆಲ್ಲರೂ ಸದ್‌ವೃತ್ತರೂ, ಶುದ್ಧರೂ ಸಮಸ್ತ ರಾಜವಂದ್ಯರೂ, ಜಗದ್ಭರಿತ ತೇಜಸ್ವಿಗಳೂ, ತಮ್ಮದೇ ಆದ ಅಧಿಕತಮ ಗೌರವಾನ್ವಿತರೂ, ಸುಂದರವಾದ ಗುಣಗಣ ಮಣಿಮಾಲಿಕೆಯಲ್ಲಿ ಶಿಖಾಮಣಿಗಳೂ ಆಗಿ ಯಾವ ಕಾಲಕ್ಕೂ ಯೋಗ್ಯರೆನಿಸಿ ಮೆರೆದಿದ್ದಾರೆ.[153] ಮಹಾಕವಿ ಕಾಳಿದಾಸನು ರಘುರಾಜರ ಬಗೆಗೆ ಹೇಳಿರುವ ಮಾತುಗಳನ್ನು ಕೆಳದಿಯವರಿಗೂ ಹೇಳಬಹುದು—

"ಶೈಶವೇಭ್ಯಸ್ತ ವಿದ್ಯಾನಾಂ, ಯೌವನೇ
ವಿಷಯೈಷಿಣಾಂ
ವಾರ್ಧಕ್ಯೇ ಮುನಿವೃತ್ತೀನಾಂ, ಯೋಗೇ
ನಾಂತೇ ತನುತ್ಯಜಾಂ." [154]

---

152 Chitnis, keladi Administration, P. 362;

153 ಷಡಕ್ಷರಿ, ಧರ್ಮಶಿರೋಮಣಿ I, 31.

154 ರಘುವಂಶ. I-8.

ಕೆಳದಿಯುನ್ನಾದಳಿವರು ಸುಮಾರು ಇಪ್ಪತ್ತು ಮಂದಿ. ಎಲ್ಲರೂ ಒಂದಲ್ಲ ಒಂದು ವಿಧದಲ್ಲಿ ಕಲಾವಿದರನ್ನು ಪೋಷಿಸಿ, ಕಲೆಯನ್ನು ಪ್ರೋತ್ಸಾಹಿಸಿ ತನ್ಮೂಲಕ ನಮ್ಮ ವಿಶಿಷ್ಟ ಸಂಸ್ಕೃತಿಯ ವೃಕ್ಷಕ್ಕೆ ನೀರೆರೆದ ಪುಣ್ಯಕಾರ್ಯದಲ್ಲಿ ಭಾಗಿಗಳಾಗಿದ್ದಾರೆ. ಆದರೆ ಸಾಹಿತ್ಯ ಕಲೆಗೆ ಸಹಾಯಕರಾದವರು ಕೆಲವರು ಮಾತ್ರ. ದೊರೆತ ಗ್ರಂಥಗಳ ಹಾಗೂ ಉಪಲಬ್ಧ ಮಾಹಿತಿಗಳ ಆಧಾರದ ಮೇಲೆ ಸುಮಾರು ಏಳು ಜನ ಕೆಳದಿಯ ಅರಸರು ಸಾಹಿತ್ಯಸೃಷ್ಟಿಗೆ ಕಾರಣರಾಗಿದ್ದಾರೆ. ಮಿಕ್ಕ ಸುಮಾರು ಮೂರನೇ ಎರಡುಭಾಗ ರಾಜರುಗಳ ಕಾಲದಲ್ಲಿ ಸಾಹಿತ್ಯ ಸೃಷ್ಟಿಯಾಗದಿರಲು ಕಾರಣಗಳು ಇಲ್ಲದಿಲ್ಲ. ಯಾವುದೇ ರೂಪದ ಸಾಹಿತ್ಯ ಸೃಷ್ಟಿಯಾಗಬೇಕಿದ್ದರೂ ವಾತಾವರಣ ಅಥವಾ ಕವಿಯ ಬದುಕಿನ ಪರಿಸರ ಬಹುಮಟ್ಟಿಗೆ ಕಾರಣವಾಗುತ್ತದೆ. ಹಾಗೆ ನೋಡಿದರೆ ಕೆಳದಿಯ ಆರಂಭದ ದಿನಗಳಲ್ಲಿ ಸಾಹಿತ್ಯ ಸೃಷ್ಟಿಗೆ ಸಾಧ್ಯತೆ ಇರುವುದಿಲ್ಲ. ಏಕೆಂದರೆ ಅದು ರಾಜ್ಯಸ್ಥಾಪನೆಯ ಕಾಲ; ತನ್ನನ್ನು ತಾನು ಕಟ್ಟಿಕೊಂಡು ಆರ್ಥಿಕ ವಾಗಿ ಪ್ರಗತಿ ಪಡೆಯುವ, ರಾಜಕೀಯವಾಗಿ ತನಗೆ ತಾನು ಬೆಳೆಯುವ ಹಾಗೂ ಸ್ವಾಸ್ಥೆಗಳನ್ನೇರ್ಪಡಿಸಿಕೊಂಡು ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳುವ ಕಾಲ. ಆಗಿನ ಗುರಿ ಒಂದೇ, ಅದು ರಾಜಕೀಯವಾಗಿ ತಾನು ಅಸ್ತಿತ್ವಕ್ಕೆ ಬರುವುದು. ಈ ಆರಂಭದ ವೇಳೆಯಲ್ಲಿ ಸಾಹಿತ್ಯವೇಕೆ, ಬೇರೆ ಯಾವ ಲಲಿತ ಕಲೆಯೂ ಅಷ್ಟಾಗಿ ಬೆಳಕಿಗೆ ಬರಲಾರದು. ಕೆಳದಿಯಲ್ಲೂ ಸಹ, ಅದು ರಾಜಕೀಯವಾಗಿ ಅಸ್ತಿತ್ವಕ್ಕೆ ಬಂದ ದಿನದಿಂದ ಹಿಡಿದು (ಕ್ರಿ. ಶ. ೧೫೦೦) ದೊಡ್ಡಸಂಕಣ್ಣನಾಯಕನ ಕಾಲದವರೆಗೆ (ಕ್ರಿ. ಶ ೧೫೪೬) ಸುಮಾರು ಅರ್ಧ ಶತಮಾನಕಾಲ ಯಾವ ಸಾಹಿತ್ಯ ಕೃತಿಯೂ ಹುಟ್ಟಿ ಬಂದಂತಿಲ್ಲ. ಈ ಅವಧಿಯು ಕೇವಲ ಶತ್ರು ದಾಳಿಗಳನ್ನು ತಡೆಗಟ್ಟಿ, ತನ್ನನ್ನು ತಾನು ರಕ್ಷಣೆ ಮಾಡಿಕೊಳ್ಳುತ್ತಿದ್ದ ಕಾಲ. ಹೀಗೆ ರಾಷ್ಟ್ರರಕ್ಷಣೆ ಮತ್ತು ರಾಜ್ಯ ವಿಸ್ತರಣ • ಕಾರ್ಯಗಳಲ್ಲಿ ತೊಡಗಿದ್ದ ಕೆಳದಿಯ ಆಸ್ಥಾನದಲ್ಲಿ ಸಾಹಿತ್ಯಸೃಷ್ಟಿಗ ಅಷ್ಟಾಗಿ ಪ್ರೋತ್ಸಾಹ ಸಿಕ್ಕಿರಲಾರದು. ಒಂದು ವೇಳೆ ಅಲ್ಲಿ ಗ್ರಂಥಗಳು ಸೃಷ್ಟಿಯಾಗಿದ್ದರೂ ಯಾವ ಗ್ರಂಥವೂ ಇಂದಿನವರೆಗೆ ಉಪಲಬ್ಧವಾಗಿಲ್ಲ; ಇದ್ದುವೆಂಬುದಕ್ಕೆ ಮಾಹಿತಿಯೂ ಇಲ್ಲ.

ಶಿವಪ್ಪನಾಯಕನ ಮರಣಾನಂತರ ಕೆಳದಿ ಹಲವು ಕಷ್ಟಗಳಿಗೆ ಗುರಿಯಾಯಿತು. ಸಿಂಹಾಸನಕ್ಕೆ ರಕ್ತಾಭಿಷೇಕವೂ ಆಯಿತು. ಅಂಗಹೀನ ಬಸವನೆಂಬುವನು, ತನ್ನ ತಾಯಿ ಹಾಗೂ ಅವಳ ಪ್ರೇಮಿ ತಿಮ್ಮಯ್ಯ ಎಂಬುವರ ನೆರವಿನಿಂದ, ಶಿವಪ್ಪನಾಯಕನ ಮಗ ಹಿರಿಯ ಸೋಮಶೇಖರನನ್ನು ಕೊಲೆಗೈದು ಸಿಂಹಾಸನಾರೋಹಣ ಮಾಡಿದ

[1]Sarkar, Shivaji and his times, P. 304.

ನೆಂದು ಒಂದು ಅಭಿಪ್ರಾಯವಿದ್ದರೆ, "But the king of Bednore is dead and his son is murdered by his brahmins, a kinsman set up in his place" ಎಂದು ಮತ್ತೊಂದು ಮಾಹಿತಿ ಇದೆ.[2] ಈ ರೀತಿಯ ಅಂತರಿಕ ಬಡಿದಾಟಗಳ ಕಾರಣದಿಂದಾಗಿ, ಕಿರಿಯ ವೆಂಕಟಪ್ಪನಾಯಕ, ಭದ್ರಪ್ಪ, ಹಿರಿಯ ಸೋಮಶೇಖರನಾಯಕ ಹಾಗೂ ಚೆನ್ನಮ್ಮಾಜಿ ಇವರ ಕಾಲದಲ್ಲಿ ಸಾಹಿತ್ಯ ಸೃಷ್ಟಿಯಾಗಿರಲಿಕ್ಕಿಲ್ಲ. ಕುತ್ಸಿತ ಶಿವಪ್ಪನಾಯಕನಂತಹ ಒಳಗಿನ ದ್ರೋಹಿಗಳೂ,[3] ಹೈದರನಂತಹ ಹೊರಗಿನ ಶತ್ರುಗಳೂ ಕೆಳದಿಯ ಕಡೆಯ ದಿನಗಳಲ್ಲಿ ದರೆ ಚೆನ್ನಬಸಪ್ಪನಾಯಕ (ಕ್ರಿ.ಶ.೧೭೫೭-೧೭೫೮) ಚೆನ್ನವೀರಮ್ಮಾಜಿ ಮತ್ತು ಮುಮ್ಮಡಿ ಸೋಮಶೇಖರನಾಯಕ (ಕಿ.ಶ. ೧೭೫೮-೧೭೬೩) – ಇವರುಗಳ ಆಳ್ವಿಕೆಯ ಅವಧಿಯಲ್ಲಿ ಯಾವ ಸಾಹಿತ್ಯ ಸೃಷ್ಟಿಗೂ ಅವಕಾಶ ಕೊಟ್ಟಿರಲಾರರು. ಆದರೂ ಹಲವು ಕಲಾಭಿಜ್ಞ ಕಡುಗಲಿ ಅರಸರ ಪೋಷಣೆಯಿಂದ ಬಹುಮುಖದ ಸಾಹಿತ್ಯ ಸೃಷ್ಟಿಯಾಗಿದೆ, ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ.

ಕೆಳದಿಯನ್ನಾಳಿದವರಲ್ಲಿ ಏಳು ಜನ ಪ್ರಭುಗಳು ಸವಾರು ಮೂವತ್ತು ಮಂದಿ ಕವಿಗಳನ್ನು ಪೋಷಿಸಿ ಅರವತ್ತಕ್ಕೂ ಮಿಕ್ಕು ಕೃತಿಗಳು ಬೆಳಕು ಕಾಣುವಂತೆ ಮಾಡಿದ್ದಾರೆ.[4] ಆದರೆ ನಮ್ಮ ಕಣ್ಣಿಗೆ ಕಾಣದ, ಕಿವಿಗೆ ಬೀಳದ ಅದೆಷ್ಟು ಕವಿಗಳ ಕೃತಿಗಳು ಇನ್ನೂ ಅಜ್ಞಾತವಾಸ ಮಾಡುತ್ತಿವೆಯೋ ತಿಳಿಯದು. ಕೆಳದಿಯ ಚಿಕ್ಕ ಸಂಕಣ್ಣನಾಯಕನು ಈ ಹೇಳಿಕೆಗೆ ಸಮರ್ಥನೆಯಾಗಿ ನಿಂತಿದ್ದಾನೆ. ಹೇಗೆಂದರೆ ಅವನ ಆಳ್ವಿಕೆಯ ಅವಧಿಯಲ್ಲೂ ಸಾಹಿತ್ಯವು ಬೆಳಕು ಕಂಡಿದೆ ಎಂದು ತಿಳಿದು ಬಂದರೂ,[5] ಆ ಕಾಲದ ಯಾವ ಕವಿಯ ಕೃತಿಯೂ ನಮ್ಮ ಕೈಗೆ ಸಿಕ್ಕಿಲ್ಲ. ಸಿಕ್ಕಷ್ಟೇ ಕೆಳದಿಯ ಆಸ್ಥಾನ ಸಾಹಿತ್ಯದ ದರ್ಶನ ಪಡೆಯೋಣ —

---

[2] English Factories .n India, 1661-1664, P. 343.

[3] ಚೆನ್ನಮ್ಮಾಜಿಯ ಮೈದುನ ಬಸವಲಿಂಗನಾಯಕ ಓರ್ವ ಭ್ರಾತೃದ್ರೋಹಿ; ಕಂದಾಚಾರದ ಲಕ್ಷ್ಮಯ್ಯ ಮತ್ತು ವೀರಭದ್ರಯ್ಯ ಎಂಬುವರು ರಾಜದ್ರೋಹಿಗಳು; ಅಂಥ ವೆಂಕಟಯ್ಯನ ಮಗ ಕುತ್ಸಿತ ಶಿವಪ್ಪ ಒಂದು ದುರಾಶಾ ಪಿಶಾಚಿ. ಇವರೆಲ್ಲರನ್ನೂ ವಿಧವೆಯಾದ ಚೆನ್ನಮ್ಮಾಜಿ ಎದುರಿಸಬೇಕಾಗಿತ್ತು.

[4] ಅನುಬಂಧ 13 ನೋಡಿ.

[5] "Chikkasakanna (1590-1570) was an active ruler who patronised literature" - R. Sathianathaier, History of India, P. 358.

| ಕ್ರಮ ಸಂಖ್ಯೆ | ರಾಜ | ಕವಿ | ಕೃತಿ | ಭಾಷೆ | ಸ್ವರೂಪ |
| --- | --- | --- | --- | --- | --- |
| ೧. | ದೊಡ್ಡ ಸಂಕಣ್ಣನಾಯಕ (ಕ್ರಿ. ಶ. ೧೫೪೬–೧೫೫೯) | ಅ) ಚೆನ್ನವೀರಮಾಹೇಶ್ವರ (ಕ್ರಿ. ಶ. ೧೫೫೦) | ೧) ಕಾಶೀಕಾಂಡ | ? | ? |
| | | | ೨) ನಮಕ — ಚಮಕ ಅಥವಾ ಶ್ರೀ ರುದ್ರ ಕರ್ನಾಟಕದ ಸಟೀಕಾ | ಕನ್ನಡ | ಟೀಕು |
| | | | ೩) ಪುರುಷಸೂಕ್ತ | ಕನ್ನಡ | ಟೀಕು |
| | | | ೪) ವೀರಮಾಹೇಶ್ವರ ತಂತ್ರ | ಕನ್ನಡ | ಟೀಕು (?) |
| | | | ೫) ಸಾರಸ್ವತ ವ್ಯಾಕರಣ (ಶಬ್ದಮಣಿ) | ಕನ್ನಡ | ವ್ಯಾಕರಣ |
| | | | ೬) ಕಾಶಕೃತ್ಸ್ನಧಾತು ಶಬ್ದಕಲಾಪಸಾರ ಅಥವಾ "ಸಂಸ್ಕೃತ ಪ್ರಕಾಶಿಕ" ಎಂಬ ಕನ್ನಡ ಟೀಕು | ಕನ್ನಡ | ವ್ಯಾಕರಣ |
| ೨. | ಹಿರಿಯ ವೆಂಕಟಪ್ಪನಾಯಕ (ಕ್ರಿ. ಶ. ೧೫೮೩–೧೬೩೦) | ಅ) ತಿರುಮಲಭಟ್ಟ (ಕ್ರಿ. ಶ. ೧೬೦೦) | ೧) ಕರ್ನಾಟಕ ಶಿವಗೀತೆ | ಕನ್ನಡ | ವಾರ್ಧಕ |
| ೩. | ಶಿವಪ್ಪನಾಯಕ (ಕ್ರಿ. ಶ. ೧೬೪೬–೧೬೬೧) | ಅ) ಚರಮೂರ್ತಿ ಬಸವಲಿಂಗದೇವರು (ಕ್ರಿ. ಶ. ೧೬೫೦) | ೧) ವೀರಮಾಹೇಶ್ವರಾಚಾರ ಸುಧಾವಾರ್ಧಿ ಟೀಕು | ಕನ್ನಡ | ಭಾಷ್ಯ |

| ಕ್ರಮ ಸಂಖ್ಯೆ | ರಾಜ | ಕವಿ | ಕೃತಿ | ಭಾಷೆ | ಸ್ವರೂಪ |
|---|---|---|---|---|---|
| ೪. | ಹಿರಿಯಬಸವಪ್ಪನಾಯಕ (ಕ್ರಿ. ಶ. ೧೬೯೮–೧೭೧೫) | ಅ) ಸ್ವಯಂಕವಿ | ೧) ಸೂಕ್ತಿಸುಧಾಕರ | ಕನ್ನಡ ಮತ್ತು ಸಂಸ್ಕೃತ | ? |
| | | ಆ) ಶರಜಾನಾಗಪ್ಪಯ್ಯ (ಕ್ರಿ. ಶ. ೧೭೦೦) | ೧) ಶುಕಸಪ್ತತಿ | ಕನ್ನಡ | ಭಾಮಿನಿ |
| | | ಇ) ಅಪ್ಪಯ್ಯ (ಲಕ್ಷ್ಮಣ) (ಕ್ರಿ. ಶ. ೧೭೦೫) | ೧) ಹಾಡುಗಳು | ಕನ್ನಡ | ಹಾಡು |
| | | ಈ) ಗಂಗಾದೇವಿ (ಕ್ರಿ. ಶ. ೧೭೦೦) | ೧) ಕೆಳದಿ ರಾಜಾಭ್ಯುದಯುವ್ | ಕನ್ನಡ | ಗದ್ಯ ಮತ್ತು ಭಾಮಿನಿ |
| ೫. | ಕಿರಿಯ ಸೋಮಶೇಖರನಾಯಕ (ಕ್ರಿ. ಶ. ೧೭೧೫–೧೭೪೦) | ಅ) ನಿರ್ವಾಣಮಂತ್ರಿ (ಕ್ರಿ. ಶ. ೧೭೩೫) | ೧) ಶಿವಪೂಜಾ ವಿಧಾನ | ಕನ್ನಡ | ? |
| ೬. | ಕಿರಿಯ ಬಸವಪ್ಪನಾಯಕ (ಕ್ರಿ. ಶ. ೧೭೪೦–೧೭೫೫) | ಅ) ಸಂಗನಬಸವಪ್ಪ (ಕ್ರಿ. ಶ. ೧೭೫೦) | ೧) ವೀರಶೈವ ಸುಧಾನಿಧಿ ಟೀಕು | ಕನ್ನಡ | ಭಾಷ್ಯ |

| ಕ್ರಮ ಸಂಖ್ಯೆ | ರಾಜ | ಕವಿ | ಕೃತಿ | ಭಾಷೆ | ಸ್ವರೂಪ |
|---|---|---|---|---|---|
| | | ಆ) ಕವಿ ಲಿಂಗಣ್ಣ | ೧) ಕೆಳದಿನೃಪವಿಜಯಂ | ಕನ್ನಡ | ಚಂಪು |
| | | (ಕ್ರಿ. ಶ. ೧೭೫೦) | ೨) ಶಿವಪೂಜಾ ದರ್ಪಣಂ | ಕನ್ನಡ | ಚಂಪು |
| | | | ೩) ದಕ್ಷಾಧ್ವರವಿಜಯಂ | ಕನ್ನಡ | ಚಂಪು |
| | | | ೪) ಪಾರ್ವತೀ ಪರಿಣಯಂ | ಕನ್ನಡ | ಚಂಪು |
| | | | ೫) ಶಿವಕಲ್ಯಾಣಂ | ಕನ್ನಡ | ಯಕ್ಷಗಾನ |
| | | ಇ) ವೆಂಕಕವಿ | ೧) ಗಣಸಹಸ್ರನಾಮ | ಕನ್ನಡ | ವೃತ್ತ |
| | | (ಕ್ರಿ. ಶ. ೧೭೬೦–೧೭೭೦) | ೨) ಪಾರ್ವತೀವಲ್ಲಭಶತಕ | ಕನ್ನಡ | ವೃತ್ತ |
| | | | ೩) ನರಹರಿವಿಜಯ | ಕನ್ನಡ | ಭಾಮಿನಿ |
| | | | ೪) ಕೆಳದಿ ರಾಮೇಶ್ವರನನ್ನು ಕುರಿತ ಹಾಡುಗಳು | ಕನ್ನಡ | ಹಾಡು |
| | | ಈ) ಕೆಳದಿಯ ಸುಬ್ಬ | ೧) ರುಕ್ಮಿಣೀ ಸ್ವಯಂವರ | ಕನ್ನಡ | ಯಕ್ಷಗಾನಪ್ರಸಂಗ |
| | | (ಕ್ರಿ. ಶ. ೧೭೭೦) | ೨) ಪಾರಿಜಾತ | ಕನ್ನಡ | ಯಕ್ಷಗಾನಪ್ರಸಂಗ |

# ಕೆಳದಿಯ ಸಾಹಿತ್ಯ ಸಂಪತ್ತು - ಸಂಸ್ಕೃತ

| ಕ್ರಮ ಸಂಖ್ಯೆ | ರಾಜ | ಕವಿ | ಕೃತಿ | ಭಾಷೆ | ಸ್ವರೂಪ |
|---|---|---|---|---|---|
| ೧. | ಹಿರಿಯ ವೆಂಕಟಪ್ಪನಾಯಕ (ಕ್ರಿ. ಶ. ೧೫೮೩-೧೬೩೦) | ಅ) ಸ್ವಯಂಕವಿ | ೧) ಶಿವಗೀತಾವ್ಯಾಖ್ಯಾ | ಸಂಸ್ಕೃತ | ಭಾಷ್ಯ |
| | | | ೨) ವೀರಮಾಹೇಶ್ವರಾಚಾರ ಸುಧಾವಾರ್ಧಿ : | ಸಂಸ್ಕೃತ | ಧರ್ಮಗ್ರಂಥ |
| | | | ೩) ತತ್ತ್ವಾಧಿಕಾರ ನಿರ್ಣಯಂ | ? | ? |
| | | ಆ) ತಿರುಮಲಭಟ್ಟ (ಕ್ರಿ. ಶ. ೧೬೦೦) | ೧) ಶಿವಾಷ್ಟಪದಿ | ಸಂಸ್ಕೃತ | ? |
| | | | ೨) ಗೀತಗೌರೀವರ | ? | ? |
| | | ಇ) ಭಟ್ಟೋಜಿ ದೀಕ್ಷಿತ (ಕ್ರಿ. ಶ. ೧೬೦೦) | ೧) ತತ್ತ್ವಕೌಸ್ತುಭ | ಸಂಸ್ಕೃತ | ಸಿದ್ಧಾಂತ |
| | | | ೨) ಸಿದ್ಧಾಂತ ಕೌಮುದಿ | ಸಂಸ್ಕೃತ | ಸಿದ್ಧಾಂತ |
| | | | ೩) ಪ್ರೌಢಮನೋರಮಾ (ಅದೇ ಕೃತಿಗೆ ಬರೆದ ವ್ಯಾಖ್ಯಾನ) | ಸಂಸ್ಕೃತ | ವ್ಯಾಖ್ಯಾನ |
| | | | ೪) ತಂತ್ರಾಧಿಕಾರ ನಿರ್ಣಯಂ | ಸಂಸ್ಕೃತ | ಆಗಮಿಕ ವಿಚಾರ |
| | | | ೫) ಶಬ್ದಕೌಸ್ತುಭ | ಸಂಸ್ಕೃತ | ವ್ಯಾಕರಣ ವ್ಯಾಖ್ಯಾನ |
| | | | ೬) ವೇದಭಾಷ್ಯಸಾರ | ಸಂಸ್ಕೃತ | ಭಾಷ್ಯ |
| | | | ೭) ಜ್ಞಾತಿವಿವೇಕ | ಸಂಸ್ಕೃತ | ಧರ್ಮಗ್ರಂಥ |
| | | ಈ) ರಂಗನಾಥ ದೀಕ್ಷಿತ (ಕ್ರಿ. ಶ. ೧೬೨೫) | ೧) ತಂತ್ರಸಾರವ್ಯಾಖ್ಯಾ | ಸಂಸ್ಕೃತ | ವ್ಯಾಖ್ಯಾನ |

| ಕ್ರಮ ಸಂಖ್ಯೆ | ರಾಜ | ಕವಿ | ಕೃತಿ | ಭಾಷೆ | ಸ್ವರೂಪ |
|---|---|---|---|---|---|
| | | ಉ) ರಂಗೋಜಿಭಟ್ಟ (ಕ್ರಿ. ಶ. ೧೬೨೫) | ೧) ಶಿವೋಲ್ಲಾಸ | ಸಂಸ್ಕೃತ | ಕಾಳಹಸ್ತೀಶಸ್ತೋತ್ರ |
| | | ಊ) ಅಶ್ವಪಂಡಿತ (ಕ್ರಿ. ಶ. ೧೬೨೫) | ೧) ಮಾನಪ್ರಿಯ | ? | ಅಶ್ವಶಾಸ್ತ್ರ |
| ೨. | ವೀರಭದ್ರನಾಯಕ (ಕ್ರಿ. ಶ. ೧೬೩೦–೧೬೪೬) | ಅ) ಕೊಂಡಭಟ್ಟ (ಕ್ರಿ. ಶ. ೧೬೪೦) | ೧) ತರ್ಕಪ್ರದೀಪಃ | ಸಂಸ್ಕೃತ | ತರ್ಕ |
| | | | ೨) ವೈಯಾಕರಣ ಭೂಷಣ | ಸಂಸ್ಕೃತ | ವ್ಯಾಕರಣ |
| ೩. | ಹಿರಿಯ ಬಸವಪ್ಪನಾಯಕ (ಕ್ರಿ. ಶ. ೧೬೯೮–೧೭೧೫) | ಅ) ಸ್ವಯಂಕವಿ | ೧) ಶಿವತತ್ತ್ವ ರತ್ನಾಕರ | ಸಂಸ್ಕೃತ | ವಿಶ್ವಕೋಶ |
| | | | ೨) ಸುಭಾಷಿತ ಸುರದ್ರುಮ | ಸಂಸ್ಕೃತ | ನೀತಿಗ್ರಂಥ |
| | | ಆ) ಮೌನಪ್ಪ ಪಂಡಿತ (ಕ್ರಿ. ಶ. ೧೭೦೦) | ೧) ವೀರಶೈವಾಚಾರ ಕೌಸ್ತುಭ | ಸಂಸ್ಕೃತ | ಧರ್ಮಗ್ರಂಥ |
| ೪. | ಕಿರಿಯ ಸೋಮಶೇಖರನಾಯಕ (ಕ್ರಿ. ಶ. ೧೭೧೫–೧೭೪೦) | ಅ) ನಿರ್ವಾಣಮಂತ್ರಿ (ಕ್ರಿ. ಶ. ೧೭೨೫) | ೧) ಕ್ರಿಯಾಸಾರವ್ಯಾಖ್ಯಾ | ಸಂಸ್ಕೃತ | ಬ್ರಹ್ಮಸೂತ್ರ ಭಾಷ್ಯ |
| | | | ೨) ಶ್ರೀ ನಿಜಗುಣ ಶಿವಯೋಗಿಗಳ ವಿವೇಕ ಚಿಂತಾಮಣಿಯ ಸ್ವಲ್ಪ ಭಾಗವನ್ನು ಸಂಸ್ಕೃತಕ್ಕೆ ತರ್ಜುಮೆ ಮಾಡಿದ್ದಾನೆ | ಸಂಸ್ಕೃತ | ವಿಶ್ವಕೋಶ |

| ಕ್ರಮ ಸಂಖ್ಯೆ / ರಾಜ | ಕವಿ | ಕೃತಿ | ಭಾಷೆ | ಸ್ವರೂಪ |
|---|---|---|---|---|
| ೫. ಕಿರಿಯ ಬಸವಪ್ಪನಾಯಕ (ಕ್ರಿ. ಶ. ೧೭೪೦-೧೭೫೫) | ಅ) ಸ್ವಯಂಕವಿ | ೧) ಶೈವಸಂಜೀವಿನಿ ಅಥವಾ ಪಂಚಶ್ಲೋಕೀ ವ್ಯಾಖ್ಯಾ | ಸಂಸ್ಕೃತ | ಭಾಷ್ಯ |
| | ಆ) ಷಡಕ್ಷರ ಮಂತ್ರಿ (ಕ್ರಿ. ಶ. ೧೭೪೫) | ೧) ವೀರಶೈವಧರ್ಮಶಿರೋಮಣಿ | ಸಂಸ್ಕೃತ | ಪಾರಮೇಶ್ವರಾಗಮಕ್ಕೆ ಬರೆದ ವ್ಯಾಖ್ಯಾನ |
| | ಇ) ಮರಿತೋಂಟದಾರ್ಯ (ಕ್ರಿ. ಶ. ೧೭೫೦) | ೧) ವೀರಶೈವಾನಂದ ಚಂದ್ರಿಕಾ | ಸಂಸ್ಕೃತ | ಧರ್ಮಗ್ರಂಥ |
| | | ೨) ಸಿದ್ಧಾಂತ ಶಿಖಾಮಣಿವ್ಯಾಖ್ಯಾ ಅಥವಾ ತತ್ತ್ವಪ್ರದೀಪಿಕಾ | ಸಂಸ್ಕೃತ | ಭಾಷ್ಯ |
| | ಈ) ಸಂಗಮೇಶ್ವರಯ್ಯ (ಕ್ರಿ. ಶ. ೧೭೫೦) | ೧) ಸಂಗಮೇಶ್ವರ ವಿಲಾಸಭಾಷ್ಯಂ (ಶಿವಸಹಸ್ರನಾಮ ವ್ಯಾಖ್ಯಾ) | ಸಂಸ್ಕೃತ | ಭಾಷ್ಯ |
| | ಉ) ಚೊಕ್ಕನಾಥ (ಕ್ರಿ. ಶ. ೧೭೫೦) | ೧) ಸೇವಂತಿಕಾ ಪರಿಣಯ | ಸಂಸ್ಕೃತ | ನಾಟಕ |
| | ಊ) ವಾದಿರಾಜ ವಿದ್ಯಾತೀರ್ಥ ಮತ್ತು ವೇದವಿದ್ಯಾತೀರ್ಥ (ಕ್ರಿ. ಶ. ೧೭೫೦) | ? | ? | ? |

ಇದು ಕೆಳದಿಯ ಆಸ್ಥಾನವು ಸೂರೆಗೊಂಡ ಸಾಹಿತ್ಯ ಸುಗ್ಗಿ. ಸಂಖ್ಯಾದೃಷ್ಟಿಯಿಂದಲ್ಲದೆ ಸತ್ತ್ವದೃಷ್ಟಿಯಿಂದಲೂ ಇದು ದೊಡ್ಡದೇ. ಆದರೆ ಸಂಸ್ಕೃತ ಕೃತಿಗಳನ್ನು ಬೇರೆಯವರಿಗಾಗಿ ಮೀಸಲಿಟ್ಟು, ಪ್ರಸ್ತುತ ಪ್ರಬಂಧಕ್ಕೆ ಬದ್ಧರಾಗಿ ಕೇವಲ ಕೆಳದಿಯ ಆಸ್ಥಾನದಲ್ಲಿ ಹುಟ್ಟಿ ಬೆಳೆದ ಕನ್ನಡ ಕೃತಿಗಳನ್ನು ಗಮನಿಸಿದ್ದೇವೆ. ಅಂತೆಯೇ ಮುಂದಿನ ಪುಟಗಳಲ್ಲಿ ಪ್ರಾಸಂಗಿಕವಾಗಿ ಬರುವ ಸಂಸ್ಕೃತ ಸಾಹಿತ್ಯ ಕೃತಿಗಳನ್ನೂ ಅವಲೋಕಿಸಬಹುದು.

### i) ದೊಡ್ಡಸಂಕಣ್ಣನಾಯಕ (ಕ್ರಿ. ಶ. ೧೫೪೬-೧೫೫೯)

ದೊರೆತ ಆಧಾರಗಳಿಂದ ಕೆಳದಿಯ ದೊಡ್ಡ ಸಂಕಣ್ಣನಾಯಕನೇ ಮೊಟ್ಟಮೊದಲನೆಯ ಕವಿಪೋಷಕನೆಂದು ಹೇಳಬಹುದಾಗಿದೆ. ಮಠಾಧಿಪತಿಯೂ, ಕೆಳದಿ ಅರಮನೆಯ ರಾಜಗುರುವೂ ಆದ ಚೆನ್ನವೀರಮಾಹೇಶ್ವರನು ಅವನ ಆಸ್ಥಾನವನ್ನು ಬೆಳಗಿಸಿದ ಕವಿ. ಚೆನ್ನವೀರನು ಕೆಳದಿ ಆಸ್ಥಾನದ ಆದಿಕವಿ ಹಾಗೂ ಕೆಳದಿಯು ಕಂಡ ಪ್ರಪ್ರಥಮ ವೈಯಾಕರಣಿ. ಕಾಶೀಕಾಂಡ, ನಮಕ-ಚಮಕ ಅಥವಾ ಶ್ರೀರುದ್ರ ಕರ್ನಾಟಕದ ಸಟೀಕಾ, ಪುರುಷಸೂಕ್ತ ವ್ಯಾಖ್ಯಾನ, ವೀರಮಾಹೇಶ್ವರ ತಂತ್ರ, ಶಬ್ದಮಣಿ ಅಥವಾ ಸಾರಸ್ವತ ವ್ಯಾಕರಣ, ಸಂಸ್ಕೃತ ಪ್ರಕಾಶಿಕಾ ಅಥವಾ ಕಾಶಕೃತ್ಸ್ನ ಧಾತು ಶಬ್ದಕಲಾಪ ಪಾಠಕ್ಕೆ ಕನ್ನಡ ಟೀಕು - ಇವಿಷ್ಟೂ ಕೃತಿಗಳನ್ನು ರಚಿಸಿದ್ದಾನೆ.[6] ಬಹುಶಃ ಇವೆಲ್ಲವೂ ಕನ್ನಡ ಗಂಥಗಳೇ ಇರಬೇಕು. ಈತನು ಉಭಯ ಭಾಷಾ ಪಂಡಿತನಾಗಿದ್ದರೂ ಸಂಸ್ಕೃತದಲ್ಲಿ ಯಾವ ಗ್ರಂಥವನ್ನೂ ರಚಿಸಿದಂತೆ ಕಂಡು ಬರುವುದಿಲ್ಲ. ತಾಯ್ನುಡಿಯ ಮೂಲಕ ಸಂಸ್ಕೃತದ ವೇದ, ಆಗಮ ಹಾಗೂ ವ್ಯಾಕರಣ ಶಾಸ್ತ್ರಗಳ ಸ್ಥೂಲಪರಿಚಯವನ್ನು ಕನ್ನಡಿಗರಿಗೆ ಮಾಡಿಕೊಡಲು ಯತ್ನಿಸಿ ಯಶಸ್ವಿಯಾಗಿದ್ದಾನೆ. ಇಂತಹ ಆಚಾರ್ಯನನ್ನು ಕುಲಗುರುವಾಗಿ, ಆಸ್ಥಾನ ಕವಿಯಾಗಿ ಪಡೆದು ದೊಡ್ಡ ಸಂಕಣ್ಣ ಧನ್ಯನೆನಿಸಿದ್ದಾನೆ.

### ii) ಹಿರಿಯ ವೆಂಕಟಪ್ಪನಾಯಕ (ಕ್ರಿ. ಶ. ೧೫೮೩-೧೬೩೦)

ಸ್ವಯಂ ಕವಿಯೂ, ಕವಿಜನಾಶ್ರಯನೂ ಆದ ಹಿರಿಯ ವೆಂಕಟಪ್ಪನು ಆಡಳಿತದಲ್ಲಿ ಎಷ್ಟು ದಕ್ಷನೋ ಸಾಹಿತ್ಯವೇ ಮೊದಲಾದ ಕಲೆಗಳನ್ನು ಪ್ರೋತ್ಸಾಹಿಸುವಲ್ಲಿ ಅಷ್ಟೇ ಉತ್ಸಾಹಿಯೆಂದು ತೋರುತ್ತದೆ. ಈತನು ಕಲಿಯಾಗಿ ಖಡ್ಗವಿಡಿದು ರಾಜ್ಯ ವಿಸ್ತರಣ ಮಾಡಿ, ಸ್ವಾತಂತ್ರ್ಯ ಪಡೆಯಲು ಯತ್ನಿಸಿದ್ದರೆ, ಕವಿಯಾಗಿ

---

[6] Infra ಕೆಳದಿಯ ಕನ್ನಡ ಕವಿಗಳು ಮತ್ತು ಅವರ ಕೃತಿಗಳು ವಿಭಾಗದ 'ಚೆನ್ನವೀರ ಮಾಹೇಶ್ವರ' ಪ್ರಬಂಧ ನೋಡಿ.

ಕಂಠ ಹಿಡಿದು ಸಂಸ್ಕೃತದಲ್ಲಿ ಶಿವಗೀತೆಗೆ ವ್ಯಾಖ್ಯಾನವನ್ನೂ,[7] ವೀರಮಾಹೇಶ್ವರಾಚಾರ ಸುಧಾವಾರ್ಧಿಯನ್ನೂ,[8] ತತ್ತ್ವಾಧಿಕಾರಿ ನಿರ್ಣಯವನ್ನೂ[9] ರಚಿಸಿ, ಸಂಸ್ಕೃತ ಸಾಹಿತ್ಯ ಸಂಪತ್ತನ್ನು ಹೆಚ್ಚಿಸಿದ್ದಾನೆ. ತನ್ನ ಆಸ್ಥಾನ ಕವಿಯಾದ ತಿರುಮಲ ಭಟ್ಟನಿಂದ "ಕರ್ನಾಟಕ ಶಿವಗೀತೆ"ಯನ್ನು ಕನ್ನಡದಲ್ಲೂ, ಶಿವಾಷ್ಟಪದಿ ಮತ್ತು ಗೀತ-ಗೌರೀವರಗಳನ್ನು ಸಂಸ್ಕೃತದಲ್ಲೂ ಬರೆಸಿದ್ದಾನೆ. ಅಂತೆಯೇ ಭಟ್ಟೋಜಿದೀಕ್ಷಿತನು[10]

---

[7] ವೀರಶೈವಾನಂದಚಂದ್ರಿಕಾ, I-39, ತಿಳಿಸುತ್ತದೆ. ಆದರೆ ಶಿವಗೀತಾವ್ಯಾಖ್ಯಾನ ಸಿಕ್ಕಿಲ್ಲ.

[4] ಇದೂ ಸಹ ಸಿಕ್ಕಿಲ್ಲ. ಆದರೆ ಇದಕ್ಕೆ ಬರೆದ ಬಸವಲಿಂಗದೇವನ ಕನ್ನಡ ಟೀಕು ಸಿಕ್ಕಿದೆ. ನೋಡಿ : O.R.I. Mysore K. P. 1071; (I.K.S. Mysore. K.A. 322; Infra : ಚರಮೂರ್ತಿ ಬಸವಲಿಂಗದೇವರು, ಕೆಳದಿಯ ಕನ್ನಡ ಕವಿಗಳು ಮತ್ತು ಅವರ ಕೃತಿಗಳು ಭಾಗ ನೋಡಿ.

[9] ವೀರಶೈವಾನಂದಚಂದ್ರಿಕಾ, I-39ರಲ್ಲಿ ಹಿರಿಯ ವೆಂಕಟಪ್ಪನು ರಚಿಸಿದ ಕಾವ್ಯದಲ್ಲೊಂದು ಎಂದು ತಿಳಿದು ಬರುತ್ತದೆಯಾದರೂ ಕೃತಿ ಸಿಕ್ಕಿಲ್ಲ.

[10] ಇವನ ಕಾಲದ ಬಗ್ಗೆ ಹಲವು ವಿದ್ವಾಂಸರು ಹೀಗೆ ಅಭಿಪ್ರಾಯಪಟ್ಟಿದ್ದಾರೆ—ಇವನು ಕೆಳದಿಯ ಹಿರಿಯ ವೆಂಕಟಪ್ಪನಾಯಕನ ಆಸ್ಥಾನದಲ್ಲಿದ್ದನೆಂಬುದು ನಿರ್ವಿವಾದ. ವೆಂಕಟೇಂದ್ರನ ಅಪ್ಪಣೆಯ ಮೇರೆ ತತ್ತ್ವಕೌಸ್ತುಭ ಬರೆದಿದ್ದಾನೆ. (E. Hultzsch, Report on Sanskrit MSS. in South India, Madras 1896)

ಈ ವೆಂಕಟೇಂದ್ರನು ಕೆಳದಿಯನ್ನಾಳಿದ್ದು ಕ್ರಿ.ಶ. 1604ರಿಂದ 1626 ಎಂದು ಸಿವೆಲ್‌ರವರೂ (Lists of Antiquities Volume II, P. 177),

ಕ್ರಿ.ಶ. 1582ರಿಂದ 1629ರವರೆಗೆ ಎಂದು ಬಿ.ಎ. ಸಾಲತೊರೆಯವರೂ ( Karnataka Historical Review, June-July, 1937) ತಿಳಿಸುತ್ತಾರೆ. ಆದರೆಕ್ಷೆಯುಧಿಷ್ಠಿರ ಮೀಮಾಂಸಕರು ಭಟ್ಟೋಜಿಯ ಕಾಲ ಕ್ರಿ.ಶ. 1510 - 1575 ಎಂತಲೂ, ಅವನು ಮಹಾರಾಷ್ಟ್ರ ಬ್ರಾಹ್ಮಣನೆಂತಲೂ ಹೇಳುತ್ತಾರೆ. (ಸಂಸ್ಕೃತ ವ್ಯಾಕರಣ ಕಿ ಇತಿಹಾಸ (ಹಿಂದಿ) ಪು. 371) ಶ್ರೀಯುತರ ಹೇಳಿಕೆಗೆ ಆಧಾರ ಯಾವುದೋ ತಿಳಿಯದು; ಅಲ್ಲದೆ ಶ್ರೀಯುತರಿಗೆ ಕೆಳದಿ ಆಸ್ಥಾನದ ವಿಚಾರವೇ ತಿಳಿದಂತಿಲ್ಲ. ಇಂಥದೇ ಒಂದು ಅಪರಾಧ ಭಟ್ಟೋಜಿ ದೀಕ್ಷಿತನ ಕೃತಿರತ್ನವಾದ ತತ್ತ್ವಕೌಸ್ತುಭದ ಬಗ್ಗೆ ನಡೆದಿದೆ. 'ಕೆಳದೀ ವೇಂಕಟೇಂದ್ರಸ್ಯ' ಎಂಬುದು "ಕೇರಳೀ ವೇಂಕಟೇಂದ್ರಸ್ಯ" ಎಂದಾಗಿದೆ. (Descriptive catalogue Mss Library, Madras, Vol. IX, P.3417, No. 4853' Madras 1910),

ಏನೇ ಇರಲಿ ಭಟ್ಟೋಜಿ ದೀಕ್ಷಿತನ ಕಾಲವನ್ನು ಸ್ಪಷ್ಟವಾಗಿ ಕ್ರಿ.ಶ. 1600 ಎಂದು ಹೇಳಬಹುದು. ಏಕೆಂದರೆ ಅವನು ಇದ್ದು ಕೃತಿ ರಚಿಸಿದ್ದು ಕ್ರಿ.ಶ. 1583ರಿಂದ 1630 ರವರೆಗೆ ಕೆಳದಿಯನ್ನಾಳಿದ ಹಿರಿಯ ವೆಂಕಟಪ್ಪನಾಯಕನ ಆಸ್ಥಾನದಲ್ಲಿ.

ವಾರಣಾಸಿಯಿಂದ ಬಂದು ಕನ್ನಡನಾಡಿನ ಕೆಳದಿ ಅರಸರ ಆಸ್ಥಾನದಲ್ಲಿದ್ದುಕೊಂಡು,[11]

---

ಭಟ್ಟೋಜಿಯು ತನ್ನ ಶಬ್ದಕೌಸ್ತುಭದಲ್ಲಿ ಪ್ರಕ್ರಿಯಾಪ್ರಕಾಶವೆಂಬ ಗ್ರಂಥವನ್ನು ಬರೆದ ಶೇಷಕೃಷ್ಣನಿಗೆ 'ಗುರು' ಎಂಬ ಶಬ್ದವನ್ನು ವ್ಯವಹರಿಸಿರುವುದರಿಂದ ಆತನೇ ಇವನಿಗೆ ವ್ಯಾಕರಣ ಕಲಿಸಿದ ಗುರುವಾಗಿರಬೇಕು. ತತ್ತ್ವಕೌಸ್ತುಭದಲ್ಲಿ ಭಟ್ಟೋಜಿಯು ಅಪ್ಪಯ್ಯ ದೀಕ್ಷಿತರಿಗೆ ನಮಸ್ಕರಿಸಿದ್ದಾನೆ. ಬಹುಶಃ ಅಪ್ಪಯ್ಯ ದೀಕ್ಷಿತರೂ ಇವನ ಗುರುಗಳಾಗಿದ್ದಿರಬೇಕು—ಎಂದು ಯುಧಿಷ್ಠಿರ ಮೀಮಾಂಸಕರು ತಮ್ಮ 'ಸಂಸ್ಕೃತ ವ್ಯಾಕರಣ ಕಿ ಇತಿಹಾಸ್, ಪು. 351 - 352 ರಲ್ಲಿ ತಿಳಿಸುತ್ತಾರೆ. ಇರಬಹುದು. ಅಂತೆಯೇ ಭಟ್ಟೋಜಿ ದೀಕ್ಷಿತನಿಗೆ - ವರದರಾಜ, (P.K. Gode, Studies in Indian Literary History, pp. 316 - 329) ವನಮಾಲಮಿಶ್ರ (Adyar Library Bulletin, Vol. X, pt. IV PP. 231 F 235) ನೀಲಕಂಠಶುಕ್ಲ (op-cit. PP. 468 - 475) ಮೊದಲಾದ ಶಿಷ್ಯರಿದ್ದರೆಂದೂ ತಿಳಿಯುತ್ತದೆ.

ಭಟ್ಟೋಜಿ ದೀಕ್ಷಿತನ ವಂಶವೃಕ್ಷ




[11] "The family of Bhattoji was a learned one and appears to have enjoyed some patronage of the Keladi rulers of Ikkeri in the Shimoga District of the present Mysore state."

Dr. P.K. Gode, - the contact of Bhattoji Diksita and some members of his family with the Keladi rulers of Ikkeri. Between AD. 1592 and 1645—Journal of the oriental Institute M. S. University of Baroda, Vol. IV. Sept., 1954, No. 1.

ಪ್ರಬುದ್ಧ ವೈಯಾಕರಣಿಯೆಂದು ಖ್ಯಾತನಾಗಿದ್ದಾನೆ. ಅವನು ತತ್ತ್ವಕೌಸ್ತುಭ,[12]

---

[12] ವಿಶ್ವೇಶಂ ಸಚ್ಚಿದಾನಂದಂ ವಂದೇಹಂ ಯೋ ಖಿಲಂ ಜಗತ ಚರೀಕರ್ತಿ ಭರೀಭರ್ತಿ,
ಸಂಜರೀಹರ್ತಿ ಲೀಲಯಾ" ಕೆಲದೀ ವೇಂಕಟೇಂದ್ರಸ್ಯ ನಿದೇಶಾದ್ವಿದುಷಾಂ ಮುದೇ
ದ್ವಾಂತೋಚ್ಛಿತ್ತ್ಯೈ ಪಟುತರಸ್ತನ್ಯತೇ ತತ್ತ್ವಕೌಸ್ತುಭಃ ॥
ಫಣಿಭಾಷಿತ ಭಾಷ್ಯಾಬ್ಧೇಃ ಶಬ್ದ ಕೌಸ್ತುಭ ಉದ್ಧೃತಃ ।
ಶಾಂಕರಾದಪಿ ಭಾಷ್ಯಾಬ್ಧೇಃ । ತತ್ತ್ವ । ಕೌಸ್ತುಭಮುದ್ಧರೇ ॥

(Page 122 of Appendix M.S. No. 1243 Madras)

ಪಾಣಿನಿಯ ಭಾಷ್ಯಾಬ್ಧಿಯಿಂದ ಶಬ್ದಕೌಸ್ತುಭವನ್ನೂ ಶಂಕರಾಚಾರ್ಯರ ಭಾಷ್ಯಾಬ್ಧಿಯಿಂದ ತತ್ತ್ವಕೌಸ್ತುಭವನ್ನೂ—ಭಟ್ಟೋಜಿ ತೆಗೆದಿದ್ದಾನಂತೆ. ಅಂದರೆ ಆಚಾರ್ಯ ಶಂಕರರ ಅದ್ವೈತ ದರ್ಶನಕ್ಕೆ ವ್ಯಾಖ್ಯಾನ ನೀಡಿದ್ದಾನೆ. ಪುಣೆಯಲ್ಲಿರುವ ತತ್ತ್ವಕೌಸ್ತುಭದ ಹಸ್ತಪ್ರತಿಯ ಮೂರನೆಯ ಪರಿಚ್ಛೇದದ ಕಡೆಯಲ್ಲಿ ಹೀಗಿವೆ :—

ಕೆಲದೀ ವೇಂಕಟೇನ್ದ್ರೋಽಸೌ ಅಘೋರೇಶ ಪರಾಯಣಃ
ಅಚೀಕರದಿಮಂಗ್ರನ್ಥ ತತ್ತ್ವಕೌಸ್ತುಭ ಸಂಜ್ಞಿತಮ್ ॥
ಪದವಾಕ್ಯ ಪ್ರಮಾಣ ಜ್ಞಾನ ಗುಣಗೃಹ್ಯಾನ್ ವಿಪಶ್ಚಿತಃ
ಕೌತುಕಾಕ್ರಾಂತಮನಸಃ । ಕೌತುಕಾನ್ತರ್ಮನಸಃ ।
ಪ್ರಮೋದಯತು ಮತ್ಕೃತಿಃ ॥

ಇತಿ

ಶ್ರೀ ಮದ್ವಿಶುದ್ಧಾದ್ವೈತ ಪ್ರತಿಷ್ಠಾಪಕೇತ್ಯಾದಿ ವಿರುದಾವಲೀ
ವಿರಾಜಮಾನೇ ಕೆಲದೀ ವೇಂಕಟಾ ಭೂಪೇನಕಾರಿತೇ ವಿದ್ವನ್ಮುಕುಟ
ಮಾಣಿಕ್ಯಲಕ್ಷ್ಮೀಧರ ಭಟ್ಟೋಜಿ ವಿರಚಿತೇ ತತ್ತ್ವಕೌಸ್ತುಭೇ ತೃತೀಯಃ
ಪರಿಚ್ಛೇದಃ ॥

—MS of Thatwa Koustubha in the Government MSS. Library at the B.O.R. Institute, Poona, No. 319, 1899 - 1915.

ವೇದಭಾಷ್ಯಸಾರ,[13] ಜ್ಞಾತಿ ವಿವೇಕ,[14] ಶಬ್ದ ಕೌಸ್ತುಭ,[15] ಸಿದ್ಧಾಂತಕೌಮುದಿ,[16]

---

[13] P.K. Gode, Studies in Indian Literary, History, Vol. I, 1953, pp, 75-78.

[14] Rao Bahadur W. A. Bambardekere, Edited: Bhattoj's Jnati Viveka and published at Bombay in the year 1939.

[15] ಪಾಣಿನೀಯ ಅಷ್ಟಾಧ್ಯಾಯಿಗೆ ಸುವಿಸ್ತಾರವಾದ ವೃತ್ತಿ. ಇದರ ಆರಂಭದ ಮೂರೂವರೆ ಅಧ್ಯಾಯಗಳೂ ಮತ್ತು ನಾಲ್ಕನೆಯ ಅಧ್ಯಾಯವೂ ಸಿಗುತ್ತವೆ. ಮಿಕ್ಕ ಭಾಗಗಳು ದೊರೆಯುತ್ತಿಲ್ಲವಾದ್ದರಿಂದ ಇದೊಂದು ಅಪೂರ್ಣ ಕೃತಿಯಾಗಿದೆ. ಇದರ ಪ್ರಥಮಾಧ್ಯಾಯದ ಪ್ರಥಮ ಪಾದದ ವೃತ್ತಿಯಲ್ಲಿ ಪತಂಜಲಿ, ಕೈಯಟ ಮತ್ತು ಹರದತ್ತ ಇವರ ಗ್ರಂಥಗಳನ್ನು ತನ್ನ ಮಾತುಗಳಲ್ಲಿ ಸಂಗ್ರಹಿಸಿಕೊಂಡು ಬಳಸಿಕೊಂಡಿದ್ದಾನೆ. ಈ ಮೊದಲ ಭಾಗವು ಮಾತ್ರ ತುಂಬಾ ವಿಸ್ತಾರವಾಗಿದೆ. ಮುಂದಿನ ಭಾಗಗಳು ಸಂಕ್ಷೇಪವಾಗಿ ವಿವರಿಸಲ್ಪಟ್ಟಿವೆ. ಇದನ್ನು ಆರು ಅಧ್ಯಾಯಗಳವರೆಗೆ ಬರೆದಿದ್ದನೆಂದು ಇವನ ಪ್ರೌಢಮನೋರಮೆಯ ಶಬ್ದರತ್ನದ (ಅತೋಲೋಪಃ ಎಂಬ ಸೂತ್ರ - ಅಷ್ಟಾ 6-4-58) ವ್ಯಾಖ್ಯಾನದಿಂದ ತಿಳಿದುಬರುತ್ತದೆ.

[16] ಇದಕ್ಕೆ ವೈಯಾಕರಣ ಸಿದ್ಧಾಂತ ಕೌಮುದಿ ಎಂದು ಹೆಸರು. ಪತಂಜಲಿಯ ವ್ಯಾಕರಣ ಮಹಾಭಾಷ್ಯವು ಅತಿ ವಿಸ್ತಾರವಾದ್ದರಿಂದ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಭಟ್ಟೋಜಿಯು ಈ 'ವೈಯಾಕರಣ ಸಿದ್ಧಾಂತ ಕೌಮುದಿ' ಎಂಬ ನವೀನ ವ್ಯಾಕರಣವನ್ನು ಹಿಂದಿನ ಗ್ರಂಥಗಳ ಆಧಾರದ ಮೇಲೆ ರಚಿಸಿದ್ದಾಗಿಯೂ, ಇದು ಬಂದ ಮೇಲೆ ಪ್ರಾಚೀನ ಪದ್ಧತಿಯ ವ್ಯಾಕರಣಾಧ್ಯಯನವು ನಿಂತುಹೋಯಿತೆಂದೂ ತಿಳಿಯುತ್ತದೆ.

ಈ ಗ್ರಂಥದಲ್ಲಿ—1) ಸಂಜ್ಞಾಪ್ರಕರಣ :
2) ಪರಿಭಾಷಾಪ್ರಕರಣ :
3) ಸಂಧಿಪ್ರಕರಣ ;
4) ಶಬ್ದಪ್ರಕರಣ
5) ಅವ್ಯಯಪ್ರಕರಣ :
6) ಸ್ತ್ರೀ ಪ್ರತ್ಯಯ ಪ್ರಕರಣ :
7) ವಿಭಕ್ತ್ಯರ್ಥ ಪ್ರಕರಣ ;
8) ಸಮಾಸಪ್ರಕರಣ :
9) ತದ್ಧಿತ ಪ್ರಕರಣ :
10) ಧಾತು ಪ್ರಕರಣ ;
11) ಕೃದಂತ ಪ್ರಕರಣ :
12) ವೈದಿಕ ಪ್ರಕ್ರಿಯ :
13) ಸ್ವರಪ್ರಕ್ರಿಯ
14) ಲಿಂಗಾನುಶಾಸನಂ

—ಮೊದಲಾದ ವಿಭಾಗಗಳಿವೆ. ವೈಯಾಕರಣ ಸಿದ್ಧಾಂತ ಕೌಮುದಿ—ಸಂಪಾದಕರು : ಕೃಷ್ಣಶರ್ಮ; ಪ್ರಕಾಶಕರು : ನಿರ್ಣಯಸಾಗರ ಪ್ರೆಸ್; ಬೊಂಬಾಯಿ, 1904.

ಪ್ರೌಢ ಮನೋರಮಾ,[17] ತಂತ್ರಾಧಿಕಾರನಿರ್ಣಯ,[18] ಮೊದಲಾದ ಗ್ರಂಥಗಳನ್ನು ಸಂಸ್ಕೃತದಲ್ಲಿ ರಚಿಸಿರುವುದಾಗಿ ತಿಳಿಯುತ್ತದೆ. ಭಟ್ಟೋಜಿ ದೀಕ್ಷಿತನ

---

[17] ಇದು ಭಟ್ಟೋಜಿಯು ತನ್ನ 'ವೈಯಾಕರಣ ಸಿದ್ಧಾಂತ ಕೌಮುದಿ'ಗೆ ತಾನೇ ಬರೆದ ಟೀಕಾ ಗ್ರಂಥ. ಜಗನ್ನಾಥ ಪಂಡಿತನು "ಪ್ರೌಢಮನೋರಮಾ ಖಂಡನ" ಎಂಬ "ಖಂಡನೆ" ಯೊಂದನ್ನು ಈ ಗ್ರಂಥದ ಮೇಲೆ ಬರೆದಿದ್ದಾನೆ. "ಮನೋರಮಾ ಕುಚಮರ್ಧಿನಿ" ಎಂಬುದೇ ಜಗನ್ನಾಥನ ಗ್ರಂಥದ ಹೆಸರು.—ಯುಧಿಷ್ಠಿರ ಮೀಮಾಂಸಕ, ಸಂಸ್ಕೃತ ವ್ಯಾಕರಣ ಶಾಸ್ತ್ರ ಕಿ ಇತಿಹಾಸ್, ಪು. 353.

[18] ಪದವಾಕ್ಯ ಪ್ರಮಾಣ ಪಾರಾವಾರೀಣ ಶ್ರೌತ ಸ್ಮಾರ್ತಾನುಷ್ಠಾಪಕ ಶ್ರೀಮದ್ ಭಟ್ಟೋಜಿದೀಕ್ಷಿತ ವಿರಚಿತ "ತಂತ್ರಾಧಿಕಾರನಿರ್ಣಯಂ". ಇದರಲ್ಲಿ ಶೈವ, ವೈಷ್ಣವ, ಪಾಶುಪತ, ಪಾಂಚರಾತ್ರ, ವೈಖಾನಸ ಮೊದಲಾದ ಆಗಮಗಳ ಬಗ್ಗೆ ಅಧಿಕಾರ ಯಾರಿಗೆ? ಎಂಬುದನ್ನು ನಿರ್ಣಯಿಸಿದ್ದಾನೆ. ಅದರ ವಿಭಾಗಗಳ ಬಗ್ಗೆ ಅಸಮಾಧಾನ ದೃಷ್ಟಿಯಿಂದ ಖಂಡಿಸುವವರ ವಾದವನ್ನು ಮುಂದಿಟ್ಟು, ಅದಕ್ಕೆ ಉತ್ತರವಾಗಿ ನಾಸ್ತಿಕ ತಂತ್ರಗಳಾದ ಜೈನಾದಿಗಳನ್ನು ಬಿಟ್ಟು ಉಳಿದ ಶೈವಾದಿ ತಂತ್ರಗಳನ್ನು ಚಾತುರ್ವರ್ಣ್ಯದವರೂ ಸಹ ಓದಿ ತಿಳಿದುಕೊಳ್ಳಬಹುದು. ಆದರೆ ಕೇವಲ ತಂತ್ರವನ್ನೇ ಪ್ರಮಾಣವೆಂದು ವೈದಿಕರು ಅಂಗೀಕರಿಸಬಾರದು. "ಶ್ರುತಿಪಥಗಲಿತಾನಾಂ ತಂತ್ರಮಾರ್ಗೇ ಪ್ರವೇಶಃ (ನಿವೇಶಃ)" ಎಂದರೆ ಯಾರೂ ವೈದಿಕ ಸಂಪ್ರದಾಯವನ್ನು ಬಿಟ್ಟು ಪ್ರವರ್ತಿಸುತ್ತಾರೋ ಅವರು ತಂತ್ರಮಾರ್ಗವನ್ನು ಹಿಡಿಯಬಹುದು. ಆದರೆ ವೈದಿಕ ಮಾರ್ಗದಲ್ಲಿರುವವರು ಅದನ್ನು ಆಶ್ರಯಿಸಿ ಅದರಂತೆ ನಡೆಯಬಾರದು ಎಂದು ನಿಷೇಧಿಸಿ, ಆ ವೈದಿಕ ತಂತ್ರಗಳನ್ನು ಕೂಡ ವೈದಿಕರು ಅಧ್ಯಯನ ಮಾಡಬಾರದೆಂದು ಆ ಗ್ರಂಥದಲ್ಲಿ ವಿಮರ್ಶಿಸಿದ್ದಾನೆ. ಅದಕ್ಕೆ ಪ್ರಮಾಣವಾಗಿ ವಿಷ್ಣುಪುರಾಣ, ವಾಯುವ್ಯಸಂಹಿತಾ, ಶಿವಪುರಾಣ ಮುಂತಾದ ಅನೇಕ ಪ್ರಾಚೀನ ಗ್ರಂಥಗಳನ್ನೂ, ವೇದ, ಉಪನಿಷತ್, ಗೀತಾದಿ ವಚನಗಳನ್ನೂ ಉಲ್ಲೇಖಿಸಿ, ತಂತ್ರಶಾಸ್ತ್ರದ ಮಾರ್ಗವನ್ನು ಯಾರು ಅನುಸರಿಸಬೇಕೆಂದು ನಿರ್ಣಯಿಸಿದ್ದಾನೆ.

ನೋಡಿ :—ತಂತ್ರಾಧಿಕಾರ ನಿರ್ಣಯ : ನೇಪಾಲೀ ಸೌಭಾಗ್ಯ ಪುಸ್ತಕಾಲಯ
ದುಗ್ಧ ವಿನಾಯಕ, ಬನಾರಸ್ ಸಿಟಿ.

ಸೋದರನಾದ ರಂಗೋಜಿಭಟ್ಟನು[19] ಇದೇ ವೆಂಕಟೇಂದ್ರನ ಆಸ್ಥಾನದಲ್ಲಿದ್ದುಕೊಂಡು[20] ಶಿವೋಲ್ಲಾಸ ಎಂಬ ಕಾಳಹಸ್ತೀಶನನ್ನು ಕುರಿತ ಸ್ತೋತ್ರಗ್ರಂಥವೊಂದನ್ನು ರಚಿಸಿದ್ದಾನೆ.[21] ಅಶ್ವಪಂಡಿತನು[22] ಮಾನಪ್ರಿಯ[23] ಎಂಬ ಅಶ್ವಶಾಸ್ತ್ರ

---

[19] ಈತನು ಮಹಾ ವಾಜ್ಮ—'ವಡೇರು' ಎಂಬ ಮಾಧ್ವಭಟ್ಟಾರಕನನ್ನು ವಾದದಲ್ಲಿ ಸೋಲಿಸಿ 'ಅದ್ವೈತ' ತತ್ತ್ವವನ್ನು ಎತ್ತಿ ಹಿಡಿದು, ಕೆಳದಿಯ ಪ್ರಭು ಹಿರಿಯ ವೆಂಕಟಪ್ಪನಿಂದ ಪಲ್ಲಕ್ಕಿಯೊಂದನ್ನು ಗೌರವ ಸೂಚಕವಾಗಿ ಪಡೆದಿದ್ದಾನೆಂದು ಆವನ ಮಗ ಕೊಂಡಭಟ್ಟನು ಹೇಳಿದ್ದಾನೆ:—

ವಿದ್ಯಾಧೀಶ ವಡೇರು ಸಂಜ್ಞಕಯತಿಂಶ್ರೀಮಾಧ್ವ ಭಟ್ಟಾರಕಂ
ಜಿತ್ವಾ ಕೆಲದೀ ವೇಂಕಟಯ್ಯ ಸವವಿಧೇಽಪ್ಯಾನ್ದೋಲಿಕಾಂ ಪ್ರಾಪ್ತವಾನ್ ।
ಯಶ್ಶಕೋ ಮುನಿವರ್ಯ ಸೂತ್ರ ವಿಸ್ಕೃತಿಂ ಸಿದ್ಧಾಂತ ಭಂಗಂ ತಥಾ
ಮಾಧ್ವಾನಾಂ ತೌಮಹಂ ಗುರೂಪಮಗುರುಂ ರಂಗೋಜಿಭಟ್ಟಂಭಜೇ ॥

—ಕೌಂಡಭಟ್ಟ, ವೈಯಾಕರಣ ಭೂಷಣ, ಪು. 259 ; B. S. Series, 1915.

[20] Bhattoji's brother Rangojibhatta was also a very learned man. He also appears to have enjoyed some patronage of the Keladi Ruler Venkatappa Naika I (A.D. 1592 - 1629) who was a great patron of learning.

—Journal of the O.R.I., M.S. University of Baroda, Baroda, Vol. IV, 1954, Sept. P. 36.

[21] ಗ್ರಂಥೇಜಾಸ್ಮಿನ್ತವ ವಿಲಸಿತೇ ಕಾಲಹಸ್ತೀಶ ನಿತ್ಯಂ
ಕೃತ್ವಾಭ್ಯಾಸಂ ಭವತಿ ವಿಜಯೀ ಭಕ್ತಿ ಭಾವೈಕ ನಿಷ್ಠಂ ॥

ಎಂಬುದಾಗಿ ಕಾಳಹಸ್ತೀಶನ ಪವಭಕ್ತನಾದ ರಂಗೋಜಿಯು ತನ್ನ ಶಿವೋಲ್ಲಾಸದ ಕೊನೆಯಲ್ಲಿ ಹೇಳಿರುವುದಾಗಿ ಡಾ॥ ಗೋಡೆಯವರು ತಿಳಿಸಿರುತ್ತಾರೆ—

"There is a railway station called Kalahasti in the Chittor District of the Madras state about 15 Miles to the North of the Renigunta junction. Near by is Kalahasti zamindari. There is a village of the name Kalahasthi, near which is the temple of God Mahadeva, with five faces. This God is the celebarated Kalahastisa referred to by Rangoji."—Ibid.

[22] Venkatappa I, wrote a commentry in Sanskrit on Sivageeta. He patronised some scholars, like Tirumalabhatta, Ranganatha Dikshita, Aswapandita etc.—Ibid. P. 34.

[23] ಕೆ.ನೃ.ವಿ. ಪು. 88, (ಗ್ರಂಥ ಸಿಕ್ಕಿಲ್ಲ.)

ವನ್ನೂ, ರಂಗನಾಥ ದೀಕ್ಷಿತನು ತಂತ್ರಸಾರವ್ಯಾಖ್ಯೆ[24]ಯನ್ನೂ ಬರೆದಿದ್ದಾರೆ. "ಸಾಹಿತ್ಯ ರತ್ನಾಕರ"[25] ಎಂದು ಪ್ರಖ್ಯಾತನಾದ ಪ್ರಭು ವೆಂಕಟಾದ್ರಿಯು ಹೆಚ್ಚು ಸಂಸ್ಕೃತ ಗ್ರಂಥಗಳು ಪ್ರಕಾಶಕ್ಕೆ ಬರಲು ಕಾರಣನಾಗಿದ್ದಾನೆ.

### iii) ವೀರಭದ್ರನಾಯಕ (ಕ್ರಿ. ಶ. ೧೬೩೦-೧೬೪೬)

ದಾನಶಿಖಾಮಣಿಯೆಂದು ಪ್ರಸಿದ್ಧನಾದ ಧರ್ಮಪ್ರಭು ವೀರಭದ್ರನಾಯಕನು ಕೊಂಡಭಟ್ಟನೆಂಬುವನಿಗೆ ಆಶ್ರಯವಿತ್ತು,[26] ಎರಡು ಸಂಸ್ಕೃತ ಕೃತಿಗಳು ಅವನ ಮೂಲಕ ಪ್ರಕಾಶಗೊಳ್ಳಲು ನೆರವಾಗಿದ್ದಾನೆ. ಕೊಂಡಭಟ್ಟನು ತರ್ಕಪ್ರದೀಪವೆಂಬ ತಾರ್ಕಿಕ ಗ್ರಂಥವನ್ನು ರಚಿಸಿದ್ದಾನೆ. ರಾಮಚಂದ್ರ ಕವಿ ಎಂಬುವನೊಬ್ಬನು ಇವನ ಆಸ್ಥಾನದಲ್ಲಿದ್ದುಕೊಂಡು ಇವನ ಆಶ್ರಯ ಪ್ರೋತ್ಸಾಹಗಳಿಂದ ಮಲ್ಲಿಕಾರ್ಜುನ ಶತಕ, ಪಾರ್ವತಿಯ ಸೋಬಾನೆ ಮತ್ತು ವೀರಭದ್ರರಾಜನನ್ನು ಕುರಿತ ಹಲವು ಹಾಡುಗಳನ್ನು ಬರೆದಿರುವುದಾಗಿ ತಿಳಿಯುತ್ತದೆ.[27]

### iv) ಶಿವಪ್ಪನಾಯಕ (ಕ್ರಿ. ಶ. ೧೬೪೬-೧೬೬೧)

ಶಿವಪ್ಪನಾಯಕನು "ಸಿಸ್ತುಗಾರ"ನೆಂದೇ ಪ್ರಸಿದ್ಧನಾಗಿದ್ದಾನೆ. ಆದರೆ ತಾನು ಕವಿಯಲ್ಲದಿದ್ದರೂ ಕವಿಗಳಿಗೆ ಮಾನ್ಯತೆ ನೀಡಿದ್ದಾನೆ. ಅವನ ಕಾಲದಲ್ಲಿ ಚರಮೂರ್ತಿ ಬಸವಲಿಂಗದೇವರು ಎಂಬವರು ಹಿರಿಯ ವೆಂಕಟಪ್ಪನಾಯಕನಿಂದ ರಚಿತವಾದ ವೀರ ಮಾಹೇಶ್ವರಾಚಾರ ಸುಧಾವಾರ್ಧಿ ಎಂಬ ಗ್ರಂಥಕ್ಕೆ ಕನ್ನಡ ಟೀಕು ಬರೆದಿದ್ದಾರೆ.

---

[24] ಅದೇ.

[2]. E,C. VIII, TL. 166.

[26] ಇವನು ರಂಗೋಜಿಭಟ್ಟನ ಮಗ. ಕೆಳದಿಯ ವೀರಭದ್ರನ ಆಸ್ಥಾನದಲ್ಲಿದ್ದವನು.

"The patronage to Bhattoji's familly given by Venkatappa Naika I, appears to have been continued by his grandson veerabhadra (A.D 1629 - 1645.).... therefore, that Koundabhatta enjoyed the patronage of his Keladi ruler in the same way as that enjoyed by his father Rangoji and his uncle Bhattoji at the court of Veerabhadra's grand father Venkatappa Naika I, (A.D. 1595 - 1629.)

—Dr. P. K. Gode, The contact of Bhattoji Dikshita and some Members of his familly with Keladi Rulers of Ikkeri. —Journal of the O.R.I., M. S. University of Baroda, Baroda Vol. IV. Sept. 1954, No. 1, P. 35 - 36.

[27] Infra, ಕೆಳದಿಯ ಕೆಲವು ಕವಿಗಳ ವಿಚಾರ – ಪರಿಚ್ಛೇದದ ಕೆಳದಿಗೆ ಸಂಬಂಧಿಸಿದ ಕವಿಗಳು ಕೆಲವರು ಅಧ್ಯಾಯದ 'ಅ' ವಿಭಾಗ ನೋಡಿ.

## v) ಹಿರಿಯ ಬಸವಪ್ಪನಾಯಕ (ಕ್ರಿ. ಶ. ೧೬೯೮-೧೭೧೪)

ಶಿವತತ್ತ್ವ ರತ್ನಾಕರವೆಂಬ ವಿಶ್ವಕೋಶವನ್ನೂ,[28] ಸುಭಾಷಿತ

---

[28] ವೀರಶೈವಾನಂದ ಚಂದ್ರಿಕಾ I - 58; ಶಿವತತ್ತ್ವರತ್ನಾಕರ—

(i) Etd. by B. Rama Rao and P. Sundara Sastries, B. M. Nath & co., Vepery, Madras, 1927;

(ii) Vidwan S. Narayana Sastry, O.R.I. Mysore-1964 (1-6 Kallolas)

ಶಿವತತ್ತ್ವರತ್ನಾಕರದಲ್ಲಿ 9 ಕಲ್ಲೋಲಗಳೂ, 108 ತರಂಗಗಳೂ ಇವೆ. ವಿವರ ಹೀಗಿದೆ—

I ಕಲ್ಲೋಲದಲ್ಲಿ 7 ತರಂಗಗಳಿವೆ-ಇವುಗಳಲ್ಲಿ ವೀರಶೈವ ಮತಸ್ಥಾಪಕರಾದ ಪಂಚಾಚಾರ್ಯರನ್ನು ಕುರಿತ ಪ್ರಾರ್ಥನೆ, ವಿಶ್ವಾವತಾರ, ಹದಿನಾಲ್ಕು ವಿದ್ಯೆಗಳು, ಶೂನ್ಯಲಿಂಗ, ನಿಷ್ಕಲಲಿಂಗ, ಮಹಾಲಿಂಗ ಮೊದಲಾದ ವಿಚಾರವೂ, ಪರಶಿವನ ಪಂಚಮುಖಗಳಿಗೆ 38 ಕಲೆಗಳನ್ನು ಹಂಚಿರುವುದೂ, ಸಂಗೀತದ ಸಪ್ತ ಸ್ವರಗಳ ವಿಚಾರವೂ, ವಿರಾಟ್ ಪುರುಷನ ಭವ್ಯರೂಪವೂ ವರ್ಣಿತವಾಗಿವೆ.

II ಕಲ್ಲೋಲದಲ್ಲಿ 8 ತರಂಗಗಳಿವೆ- ವಿಶ್ವವಿಭಜನೆ, ಪಾಪ, ನರಕಗಳ ವಿಚಾರವಿದೆ.

III ಕಲ್ಲೋಲದಲ್ಲಿ 7 ತರಂಗಗಳಿವೆ-ಊರ್ಧ್ವಲೋಕಗಳ ವಿಚಾರ, ಕೃಷಿವಿಚಾರ, ಗಂಧರ್ವ ಅಪ್ಸರೆಯರ ವಿಚಾರ – ಇವುಗಳಿವೆ.

IV ಕಲ್ಲೋಲದಲ್ಲಿ 12 ತರಂಗಗಳಿವೆ – ಇವುಗಳಲ್ಲಿ ಭಾರತವರ್ಷದ ವರ್ಣನೆ, ಚಾತುರ್ವರ್ಣಗಳು, ಸಂನ್ಯಾಸಿಯ ಕರ್ತವ್ಯಗಳು, ವಿಜಯನಗರದ ಸ್ಥಾಪನೆ ಇತ್ಯಾದಿ ವಿಷಯಗಳಿವೆ.

V ಕಲ್ಲೋಲದಲ್ಲಿ 15 ತರಂಗಗಳಿದ್ದು - ಮಲ್ಲದೇಶವೂ ಅದನ್ನಾಳಿದ ಕೆಳದಿ ಅರಸರ ಇತಿಹಾಸವೂ ಬಣ್ಣಿಸಲ್ಪಟ್ಟಿವೆ.

VI ಕಲ್ಲೋಲದಲ್ಲಿ 27 ತರಂಗಗಳಿವೆ – ನೃತ್ಯಕಲೆಯ ಮೂಲ ಮತ್ತು ಬೆಳವಣಿಗೆ, ನವರತ್ನಗಳ ವಿಚಾರ, ಪಾದರಸವೇ ಮೊದಲಾದ ರಾಸಾಯನಿಕ ವಸ್ತುಗಳ ವಿಚಾರ ಇದೆ.

VII ಕಲ್ಲೋಲದಲ್ಲಿ 15 ತರಂಗಗಳಿವೆ – ಆಸ್ಥಾನ, ಸಿಂಹಾಸನ, ಯೋಧ, ಕಾವ್ಯ, ಇತ್ಯಾದಿಗಳ ವಿಚಾರವಿದೆ.

VIII ಕಲ್ಲೋಲದಲ್ಲಿ 8 ತರಂಗಗಳಿವೆ – ಇದರಲ್ಲಿ ಭದ್ರಪ್ಪ, ಸೋಮಶೇಖರ, ಚೆನ್ನಮ್ಮಾಜಿ ಮೊದಲಾದವರ ಆಳ್ವಿಕೆಯ ವರ್ಣನೆ ಇವೆ. ಶಿವಪೂಜಾ ವಿಧಾನ; ಮೂಕಾಂಬಿಕೆಗೆ ಬಸವೇಂದ್ರನಿತ್ತ ಕಾಣಿಕೆಯ ವಿಚಾರಗಳಿವೆ.

IX ಕಲ್ಲೋಲದಲ್ಲಿ 9 ತರಂಗಗಳಿವೆ – ಪಿಂಡಾಂಡ ವಿಚಾರವೂ, ಸಂಸಾರದ ನಿಸ್ಸಾರತೆಯೂ, ಅವೈದಿಕ ಧರ್ಮಗಳ ವಿಚಾರವೂ, ಶಿವದೀಕ್ಷಾ ವಿಧಾನವೂ, ಷಟ್ಸ್ಥಲ ವಿಷಯವೂ ಬಿತ್ತರಗೊಂಡಿವೆ.

ಸುರದ್ರುಮ[29] ಎಂಬ ಸಾರಸ್ವತ ಲೋಕದ ಸರ್ವ ಕಾಮಿತಗಳನ್ನೂ ಈಡೇರಿಸಿಕೊಡುವ ಅಮೂಲ್ಯ ಕೃತಿಯನ್ನೂ ನೀಡಿದ್ದಾನೆ. ಬಸವೇಂದ್ರನ ಈ ಎರಡೂ ಗ್ರಂಥಗಳು ಸಂಸ್ಕೃತ ಸಾಹಿತ್ಯ ಪ್ರಪಂಚಕ್ಕೆ "ಪೂರ್ವ ಪಶ್ಚಿಮ ಸಮುದ್ರಗಳಿದ್ದಂತೆ ಇವೆ"[30] "ಸೂಕ್ತಿಸುಧಾಕರ"ವೆಂಬ ಕನ್ನಡ ಮತ್ತು ಸಂಸ್ಕೃತ ಉಭಯ ಭಾಷೆಗಳಲ್ಲೂ ವಿರಚಿತವಾದ ಕೃತಿಯನ್ನು ಸ್ವಾರಸ್ವತ ಲೋಕಕ್ಕಿತ್ತು ಧರ್ಮಪ್ರಭುವೆನಿಸಿದ ಕೆಳದೀ ಬಸವಭೂಮಿಪನು ಸ್ವಯಂಕವಿಯೂ, ಕವಿ ಜನಾಶ್ರಯನೂ ಆಗಿದ್ದಾನೆ.

---

[29] ಇದು ಒಂದು ವಿಚಿತ್ರವಾದ ಸಂಕಲನಗ್ರಂಥ. ಬಸವೇಂದ್ರನು, ಸತ್ಕವಿ ವರ್ಣಿತವಾದ ಕೃತಿಗಳಲ್ಲಿ ಹಲವು ಉತ್ತಮ ಪದ್ಯಗಳನ್ನು ಆರಿಸಿಕೊಂಡು, ಅವಕ್ಕೆ ತಾನೇ ಶಬ್ದಾರ್ಥ ಚಿತ್ರಣಗಳನ್ನಿತ್ತು, ಕರಿಯನ್ನು ಕನ್ನಡಿಯಲ್ಲಿ ತೋರಿಸುವ ಸಾಹಸ ಮಾಡಿದ್ದಾನೆ. 'ಕಾಮಿತಮೇವ ಸೂತೆ' ಎಂಬ ಗಾಥಾದಂತೆ ಸುರದ್ರುಮವು ಕಾಮಿತಗಳನ್ನೆಲ್ಲಾ ನೀಡಿದಂತೆ, ಈ ಸುಭಾಷಿತ ಸುರದ್ರುಮವು ಸರ್ವಸಾರಸ್ವತ ಲೋಕಕ್ಕೆ ಕಾಮಿತ ಫಲವನ್ನು ಕೊಡುವುದಾಗಿದೆ.

ಈ ಗ್ರಂಥದಲ್ಲಿ 5 ಸ್ಕಂದಗಳೂ, 35 ಸ್ತಬಕಗಳೂ, 496 ಕುಸುಮಗಳೂ, 14747 ಗ್ರಂಥಗಳೂ ಇವೆ. ಇದು ಸ್ವೋಕ್ತಿ - ಪರೋಕ್ತಿ, ನಿಂದಾ - ಪ್ರಶಂಸಾ, ಗುಣ - ದೋಷ ಮೊದಲಾದವುಗಳನ್ನು ನಿರೂಪಿಸಿ, ಅಖಿಲಾಂಡಗಳ ವಿಷಯ ಪರಿಚಯವನ್ನು ಮಾಡಿ ಕೊಡುತ್ತದೆಯಾದ್ದರಿಂದ ಇದೂ ಒಂದು 'ವಿಶ್ವಕೋಶವೇ.'

ಪ್ರಥಮಸ್ಕಂದದಲ್ಲಿ ನಮಸ್ಕಾರಾದಿ ಪದ್ಯಗಳಿವೆ. ದ್ವಿತೀಯ ಸ್ಕಂದದಲ್ಲಿ ಕುಮಾರ ಭಾವದಲ್ಲಿ ಕೇಳಲು ಯೋಗ್ಯವಾದ ತನ್ನ ಮತ್ತು ಅನ್ಯರ ಉಪದೇಶ ರೂಪಗಳಾದ ನೀತಿ ಯುಕ್ತವಾದ ಶಬ್ದಾರ್ಥ ಚಿತ್ರಣಗಳನ್ನು ವರ್ಣಿಸುವ ನಾನಾವಿಧ ಪದ್ಯಗಳಿವೆ. ತೃತೀಯ ಸ್ಕಂದದಲ್ಲಿ ಯುವಾವಸ್ಥೆಯಲ್ಲಿ ಕೇಳಲು ಯೋಗ್ಯವಾದ ಶೃಂಗಾರ ಸೌಂದರ್ಯ, ರಸ, ಆನಂದಾದಿಗಳ ವರ್ಣನೆಯ ಪದ್ಯಗಳಿವೆ. ಚತುರ್ಥ ಸ್ಕಂದವು ವಾರ್ಧಕ್ಯದಲ್ಲಿ ಕೇಳಲು ಯೋಗ್ಯವಾದ ಭಕ್ತಿ, ಜ್ಞಾನ, ವೈರಾಗ್ಯ ಹಾಗೂ ಶಾಂತಿ ಇವುಗಳನ್ನು ಪರಿಪೋಷಿಸುವ ಪದ್ಯಗಳೂ ಪಂಚಮ ಸ್ಕಂದದಲ್ಲಿ ಪೂರ್ವಕವಿ ಉಕ್ತವಾದ ಸಮಸ್ತ ದೇವತಾಸ್ತುತಿ ರೂಪದ ಪದ್ಯಗಳೂ ಇವೆ.

ನಾನಾ ಕೃತೀರಿತ ಸುಭಾಷಿತ ಸಂಗ್ರಹಾತ್ಮಾ  
ಪಂಚಭಿಸ್ಕಂಧೈರಂಜಿತೋಽಯಂ  
ಮಹಾಪ್ರಬಂಧಃ ಕುಮಾರಯುವ ವೃದ್ಧ  
ದಶಾಸ್ವವಶ್ಯಂ ಯಶೋವಿಭವಾ  
ಭಿವೃದ್ಧ್ಯೈ ಶ್ರೋತೃವ್ಯಯೇವ ॥

—ಈ ರೀತಿಯಾಗಿ ಬಸವಭೂಪಾಲನು ತನ್ನ ಗ್ರಂಥೋಪವೇಶವನ್ನು ವಿವರಿಸಿದ್ದಾನೆ. (- ನೋಡಿ O.R.I. ಹಸ್ತಪ್ರತಿ.)

[30] M.S. Basavarajaiah, Mysore Orientalist Journal, vol. I, 1.

ಮಹಾಮಾತೆ ಚೆನ್ನಮ್ಮಾಜಿಯ ಕಾಲದಿಂದಲೂ ಬದುಕು ಮಾಡಿಕೊಂಡು ಬಂದ ಮೌನಪ್ಪ ಪಂಡಿತನು ಬಸವರಾಜನ ಆಸ್ಥಾನ ಕವಿಯೂ ಹೌದು. ಮೌನಪ್ಪನು ವೀರಶೈವಾಚಾರ ಕೌಸ್ತುಭವೆಂಬ ಸಂಸ್ಕೃತ ಗ್ರಂಥವನ್ನು ಪೂರ್ಣಗೊಳಿಸಿದ್ದಾನೆ.[30] (a)

---

[30] (a) ಮೂರು ಕಾಂಡಗಳಿಂದ ಕೂಡಿದೆ - ಒಟ್ಟು 41 ಪ್ರಕರಣಗಳಿವೆ.

1) ಕ್ರಿಯಾಕಾಂಡ : ಇದರಲ್ಲಿ ಷೋಡಶಕ್ರಿಯಾದಿ ವಿಧಿವಿಧಾನಗಳೂ,

2) ಜ್ಞಾನಕಾಂಡದಲ್ಲಿ : ಪಿಂಡಾದಿ ಜ್ಞಾನಶೂನ್ಯಂತವಾದ ಏಕೋತ್ತರ ಶತಸ್ಥಲ (101) ಗಳೂ

3) ಮುಕ್ತಿಕಾಂಡದಲ್ಲಿ : ವೀರಶೈವರ ಮುಕ್ತಿ ಸ್ವರೂಪ ಪ್ರತಿಪಾದನೆಯೂ ಹೇಳಲ್ಪಟ್ಟಿದೆ. ಮುಕ್ತಿಕಾಂಡ 41 ನೆಯ ಪ್ರಕರಣದ ಅಂತ್ಯದಲ್ಲಿ - ಗ್ರಂಥಮುಕ್ತಾಯ ಮಾಡಿದ ಕಾಲವನ್ನು ಹೀಗೆ ಹೇಳಿದ್ದಾನೆ :—

"ಪ್ರಖ್ಯಾತೇ ವರಶಾಲಿವಾಹನಶಕೇ
ವ್ಯೋಮಾರಿಷಡ್ವರ್ಗ ಷಟ್ಚಂದ್ರಾಖ್ಯೇ
ಗಣನಾಯುತೇ ಪ್ರಗುಣಕೇಬ್ದೇ
ಕಾಳಯುಕ್ತಾಕ್ಷಿತೇ ನೈಜೇ ಪಾಶ್ವಯುಜೇ
ಪ್ರವೃದ್ಧಿ ತಿಥಿಕೇ ಪಕ್ಷೇ ತೃತೀಯಾದಿನೇ ।

ಮಾನಪ್ಪಾಭಿಧಧೀಶನಿರ್ಮಿತ ವರಗ್ರಂಥೋ ಗಮತ್ಪೂರ್ಣತಾಂ ॥

ಎಂದು ಹೇಳಿರುವುದರಿಂದ – ವ್ಯೋಮ – 0; ಅರಿಷಡ್ವರ್ಗ – 6;
ಷಟ್ – 6, ಚಂದ್ರ - 1 – 1660
78

ಕ್ರಿ.ಶ. 1738 ಆಗುತ್ತದೆ.

---

ಗ್ರಂಥಾಂತ್ಯದಲ್ಲಿ – "ಇತಿಶ್ರೀಮದನಾದಿ ಪ್ರಮಥ ಪರಂಪರಾಗತ ಷಟ್ಸ್ಥಲ ಜ್ಞಾನಬೋಧಕಾಚಾರ್ಯವರ್ಯ ಗುರುಬಸವ ಯತಿವರಲಬ್ಧ ಬುದ್ಧಿವಿಕಾಸೇನ; ವೀರಶೈವದೀಕ್ಷಾಗುರು ಚೆನ್ನವೀರಸ್ವಾಮಿ ಕರಕಮಲ ಸಂಜಾತೇನ ಮೌನಪ್ಪವಿದುಷಾ ಕೃತೇ ವೀರಶೈವಾಚಾರ ಕೌಸ್ತುಭೇ ... ಸಪ್ತಮಂ" ಎಂದಿದ್ದಾನೆ.

ಇದು ಲಿಂಗಪ್ಪ ಮಂತ್ರಿಗೆ ಉಪದೇಶಿಸಿದಂತೆ ಸಂಭಾಷಣಾ ರೂಪದಲ್ಲಿದೆ.

ಮೌನಪ್ಪನು ಚೆನ್ನಮ್ಮಾಜಿ, ಹಿರಿಯಬಸವಪ್ಪನಾಯಕ, ಕಿರಿಯಸೋಮಶೇಖರನಾಯಕ ಮತ್ತು ಕಿರಿಯಬಸವಪ್ಪನಾಯಕ - ಇಷ್ಟು ಜನರ ಕಾಲದಲ್ಲಿ ಬದುಕು ಮಾಡಿಕೊಂಡು ಬಂದಂತೆ ತಿಳಿಯುತ್ತದೆ. ತನ್ನ ವೀರಶೈವಾಚಾರ ಕೌಸ್ತುಭವನ್ನು ಮೇಲೆ ಹೇಳಿದ ರಾಜರಾಣಿಯರಲ್ಲಿ ಯಾರಾದರೂ ಒಬ್ಬರ ಆಸ್ಥಾನದ ಮಹಾಮಂತ್ರಿಯಾಗಿದ್ದ ಲಿಂಗಪ್ಪನಿಗೆ ಉಪದೇಶಿಸಿದ್ದಾನೆ. ಕೆಳದಿಯ ಹಿರಿಯ ಬಸವರಾಜನ ಕಾಲದ ಆಸ್ಥಾನಕವಿ ಲಿಂಗಣ್ಣ ಕವಿಯು ಲಿಂಗಣ್ಣ ಮಂತ್ರಿಯೂ ಆಗಿರುವುದಾದರೆ ಮೌನಪ್ಪ ತನ್ನ ಮುಪ್ಪಿನ ದಿನಗಳಲ್ಲಿ ಸುಮಾರು ತನ್ನ 80ನೆಯ ವಯಸ್ಸಿನಲ್ಲಿ ಈ ಕೃತಿಯನ್ನು ಪೂರ್ಣಗೊಳಿಸಿರಬಹುದು. ಈ ಕೃತಿ ರಚನೆಗೆ ಆರಂಭಿಸಿದ್ದು ಬಹುಶಃ ಮಹಾಮಾತೆ ಚೆನ್ನಮ್ಮಾಜಿಯ ಕಾಲದಲ್ಲಿ, ಪೂರ್ಣಗೊಳಿಸಿದ್ದು ಕಿರಿಯ ಬಸವಪ್ಪನಾಯಕನ ಕಾಲದಲ್ಲಿ ಎಂದು ಹೇಳಬಹುದಾಗಿದೆ.

ಕೆಳದೀ ಬಸವಪ್ರಭುವಿನ ಆಸ್ಥಾನದ ಕವಿಗಳೆಲ್ಲರೂ ಕನ್ನಡದಲ್ಲಿ ಕಾವ್ಯರಚನೆ ಮಾಡಿದ್ದಾರೆ. ಶರಜಾ ನಾಗಪ್ಪಯ್ಯನು "ಶುಕಸಪ್ತತಿ"ಯೆಂಬ ಬೃಹತ್ ಭಾಮಿನೀ ಷಟ್ಪದಿ ಕಾವ್ಯವನ್ನೂ, ಗುರುಪತ್ನಿ ಗಂಗಾದೇವಿಯು "ಕೆಳದೀರಾಜಾಭ್ಯುದಯಂ" ಎಂಬ ಭಾಮಿನಿ ಮತ್ತು ಗದ್ಯದಿಂದ ಕೂಡಿದ ಇತಿಹಾಸ ಗ್ರಂಥವನ್ನೂ, ಅಪ್ಪಯ್ಯ (ಲಕ್ಷ್ಮಣ) ನೆಂಬುವನು ಹಲವು ಕನ್ನಡದ ಹಾಡುಗಳನ್ನೂ ರಚಿಸಿದ್ದಾರೆ.

### vi) ಕಿರಿಯ ಸೋಮಶೇಖರನಾಯಕ (ಕ್ರಿ. ಶ. ೧೭೧೪-೧೭೪೦)

ಪ್ರಸಿದ್ಧ ಪರಾಕ್ರಮಿಯೆನಿಸಿದ ಕೆಳದಿಯ ಕಿರಿಯ ಸೋಮಶೇಖರನಾಯಕನು ಅದೆಷ್ಟು ಕವಿಗಳಿಗೆ ಆಶ್ರಯ ಕೊಟ್ಟಿದ್ದನೋ ತಿಳಿಯದು. ಆದರೆ ಅವನ ಮಾವನೂ, ಮಹಾಮಂತ್ರಿಯೂ ಆದ ನಿರ್ವಾಣಾರ್ಯನು ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಗ್ರಂಥಗಳನ್ನು ರಚಿಸಿದ್ದಾನೆ. ಸಂಸ್ಕೃತದಲ್ಲಿ ಕ್ರಿಯಾಸಾರವ್ಯಾಖ್ಯಾ ಎಂಬ ಕೃತಿಯನ್ನೂ,[31] ಕನ್ನಡದಲ್ಲಿ "ಶಿವಪೂಜಾ ವಿಧಾನ"ವನ್ನೂ ಬರೆದಿದ್ದಾನೆ. ಅಲ್ಲದೆ ಶ್ರೀ ಶ್ರೀ ನಿಜಗುಣ ಶಿವಯೋಗಿಗಳ ವಿವೇಕ ಚಿಂತಾಮಣಿ[32] ಎಂಬ ಕನ್ನಡ ಗ್ರಂಥದ ಕೆಲವು ಭಾಗಗಳನ್ನು ಸಂಸ್ಕೃತಕ್ಕೆ ಭಾಷಾಂತರಿಸಿದ್ದಾನೆ.

---

[31] ನೀಲಕಂಠ ಶಿವಾಚಾರ್ಯರಿಂದ ವಿರಚಿತವಾದ ಸಂಸ್ಕೃತ ಕ್ರಿಯಾಸಾರವು 32 ಉಪದೇಶಾತ್ಮಕವಾದ ಗ್ರಂಥ. ಇದಕ್ಕೆ ಕೆಳದಿಯ ನಿರ್ವಾಣಾರ್ಯನು, 'ಕ್ರಿಯಾಸಾರ ಸರ್ವಸ್ವ ಭೂಷಣ' ಎಂಬ ಶಿರೋನಾಮೆಯ ಸಂಸ್ಕೃತ ವ್ಯಾಖ್ಯಾನವನ್ನು ರಚಿಸಿದ್ದಾನೆ. ಇದರ ಆದಿಯಲ್ಲಿ ತನ್ನ ತಂದೆ – ಮೌನಪ್ಪ ಪಂಡಿತರ ನೆರವು ಪಡೆದಿರುವುದಾಗಿ ಹೇಳಿಕೊಂಡಿದ್ದಾನೆ. ನೀಲಕಂಠ ಶಿವಾಚಾರ್ಯರು ಮೊದಲ ನಾಲ್ಕು ಉಪದೇಶಗಳಲ್ಲಿ ಬ್ರಹ್ಮಸೂತ್ರಕ್ಕೆ ವೀರಶೈವ ಪರವಾಗಿ ಕಾರಿಕಾ ರೂಪದಲ್ಲಿ ಭಾಷ್ಯ ಬರೆದಿದ್ದಾರೆ. ಅದಕ್ಕೆ ನಿರ್ವಾಣಾರ್ಯನು ವಿಸ್ತೃತ ವ್ಯಾಖ್ಯಾನವನ್ನು ರಚಿಸಿದ್ದಾನೆ. ಆದರೆ ಈ ವ್ಯಾಖ್ಯಾನವು ಸಮಗ್ರವಾಗಿ ದೊರೆಯುತ್ತಿಲ್ಲ. 1 – 2 ಪರಿಚ್ಛೇದಗಳು ಮಾತ್ರ ಸೊಲ್ಲಾಪುರದ ವಾರದ ಮಲ್ಲಪ್ಪನವರ (ರಾವಬಹದ್ದೂರ ಮಲ್ಲಪ್ಪ, ಬಸಪ್ಪ, ವಾರದ) ವೀರಶೈವಲಿಂಗ ಬ್ರಾಹ್ಮಣಧರ್ಮಗ್ರಂಥಶಾಲೆಯ 42ನೆಯ ಗ್ರಂಥವಾಗಿ 1910ರಲ್ಲಿ ಪ್ರಕಟವಾಗಿದೆ.

[32] ಇದು "ವೀರಶೈವ ವಿಶ್ವಕೋಶ" ವೀರಶೈವಧರ್ಮ ಪರವಾದ ಎಲ್ಲ ತತ್ತ್ವ ಸಿದ್ಧಾಂತಗಳಿಗೂ ಇಲ್ಲಿ ಪ್ರಾಮಾಣ್ಯ ದೊರೆಯುತ್ತದೆ.

## vii) ಕಿರಿಯ ಬಸವಪ್ಪನಾಯಕ (ಕ್ರಿ. ಶ. ೧೭೪೦-೧೭೫೫)

ಪ್ರಕಾಂಡ ಪಂಡಿತನೂ, ಪ್ರಸಿದ್ಧ ಪ್ರಭುವೂ ಆದ ಕಿರಿಯ ಬಸವಪ್ಪನಾಯಕನ ಕಾಲವನ್ನು ಕೆಳದೀ ಆಸ್ಥಾನ ಸಾಹಿತ್ಯದ ಸುವರ್ಣಯುಗವೆಂದು ಕರೆಯಬಹುದು. ವೈವಿಧ್ಯಪೂರ್ಣವಾದ ಹಲವು ಕಾವ್ಯಗಳು, ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ರಚಿತವಾಗಿವೆ. ಸ್ವಯಂ ಕಲಾವಿದನಾದ ಈತನು ಸಂಸ್ಕೃತದಲ್ಲಿ ವೀರಶೈವ ಸಂಜೀವಿನಿ ಅಥವಾ ಪಂಚಶ್ಲೋಕೀ ವ್ಯಾಖ್ಯಾ[33] ಎಂಬ ಒಂದು ವ್ಯಾಖ್ಯಾನ ಗ್ರಂಥವನ್ನು ರಚಿಸಿ

---

[33] ಸಂ: ಯಂ. ಬಸವಲಿಂಗಶಾಸ್ತ್ರಿ, ವೀರಶೈವಗ್ರಂಥ ಪ್ರಕಾಶಿಕ, ಗ್ರಂಥಾವಳಿ ನಂ. 7, 1912.

ಶಿವಭಕ್ತಿಯುಕ್ತನೂ, ಅಷ್ಟಾವರಣನಿಷ್ಠನೂ, ಪಂಚಾಚಾರ ಪರಾಯಣನೂ, ಷಟ್ಸ್ಥಲ ಸಿದ್ಧನೂ, ಲಿಂಗಾಂಗ ಸಾಮರಸ್ಯ ಪಡೆದ ಹರದತ್ತಾಚಾರ್ಯನು, ತನ್ನ ಪರವಾದಿಗಳನ್ನು ಒಪ್ಪಿಸುವ ಸಲುವಾಗಿಯೂ, ತನ್ನ ವೀರಭಕ್ತಿಯನ್ನು ಪ್ರಕಟಪಡಿಸುವುದಕ್ಕಾಗಿಯೂ ಉಕ್ಕಿನ ಐದು ಕಾಲಿನ ಏಣಿಯೊಂದನ್ನು ತರಿಸಿ, ಅದನ್ನು ಚೆನ್ನಾಗಿ ಕಾಯಿಸಿ, ಐದು ಶ್ಲೋಕಗಳನ್ನು ಹಾಡಿಕೊಂಡು—ಪ್ರತಿ ಶ್ಲೋಕಕ್ಕೂ ಒಂದೊಂದರಂತೆ ಹಾಡಿಕೊಂಡು—ಐದು ಕಾಲುಗಳನ್ನು ಹತ್ತಿ ವಿಜಯಿಯಾದನಂತೆ. ಈ ಐದು ಶ್ಲೋಕಗಳೇ "ಪಂಚಶ್ಲೋಕೀ"

(ಯಂ. ಬಸವಲಿಂಗಶಾಸ್ತ್ರಿ)

ಇದಕ್ಕೆ ಕೆಳದಿಯ ಕಿರಿಯ ಬಸವೇಂದ್ರನು ವ್ಯಾಖ್ಯಾನ ರಚಿಸಿದ್ದಾನೆ. ಇದೇ "ಶೈವ ಸಂಜೀವಿನಿ ಅಥವಾ ಪಂಚಶ್ಲೋಕಿ ವ್ಯಾಖ್ಯಾ." ಕೇವಲ 5 ಶ್ಲೋಕಗಳಿಗೆ 200 ಪುಟಗಳಷ್ಟು ವ್ಯಾಖ್ಯಾನ ಬರೆದಿದ್ದಾನೆ.

ಗ್ರಂಥಾರಂಭದಲ್ಲಿ—ಸದಾಶಿವಕ್ಷಿತಿಪತಿಯ ವಂಶೋದ್ಭವರಾದ ಕೆಳದಿಯವರ ವಂಶದ ತುಸು ಪರಿಚಯ ಮಾಡಿ—

"ಕೆಳದೀ ವಸುಧಾನಾಥ ವೀರಭದ್ರನರಾಧಿಪಾತ್
ಜಾತೇನ ಮಲ್ಲಮಾಂಬಾಯಾಂ ವಿದ್ವಜ್ಜನ ಸುಬಂಧುನಾ ॥ 5 ॥
ತೇನ ಶಿವಪಾದಾಬ್ಜ ಧ್ಯಾನಲಬ್ಧಲಸದ್ಗಿರಾ ।
ಶಿವತತ್ತ್ವ ವಿವೇಕಾದಿ ಶೈವ ಗ್ರಂಥ ಮಹಾರ್ಣವಾತ್ ॥ 6 ॥
ಸಂಗೃಹ್ಯಯುಕ್ತಿ ರತ್ನಾನಿ ಸಾರಭೂತಾನಿ ತೈರಲಂ ।
ಕ್ರಿಯತೇ ವಿದುಷಾಂ ಪ್ರೀತ್ಯೈ ಪಂಚಶ್ಲೋಕೀ ಪ್ರದೀಪಿಕಾ ॥ 7 ॥
ಹರದತ್ತ ಮುಖೋದ್ಭೂತ ಪಂಚಶ್ಲೋಕೀ ಸುಸಂಗತಾ
ಟೀಕಾ ಜಯತು ಕಲ್ಯಾಣೀ ಶೈವ ಸಂಜೀವಿನೀಭುವಿ ॥ 8 ॥

—ಮುಂದೆ ಹರದತ್ತಾಚಾರ್ಯನನ್ನು ಪರಿಚಯಿಸಿ ವ್ಯಾಖ್ಯಾನ ಬರೆದಿದ್ದಾನೆ.

ದ್ದಾನೆ. ಮಹಾಮಂತ್ರಿ ಷಡಕ್ಷರಿಯು "ವೀರಶೈವ ಧರ್ಮಶಿರೋಮಣಿ"ಯನ್ನೂ,[34] ಮರಿತೋಂಟದಾರ್ಯನು "ವೀರಶೈವಾನಂದ ಚಂದ್ರಿಕಾ",[35] ಹಾಗೂ ತತ್ತ್ವಪ್ರದೀಪಿಕಾ

---

[34] ವೀರಶೈವ ಗ್ರಂಥ ಪ್ರಕಾಶಿಕಾ ಗ್ರಂಥಾವಳಿಯ ಎರಡನೆಯ ಗ್ರಂಥವಾಗಿ 1908ರಲ್ಲಿ ಪ್ರಕಟವಾಗಿದೆ. ಈ ಸಂಸ್ಕೃತ ಕೃತಿ ಕನ್ನಡ ಲಿಪಿಯಲ್ಲಿ ಅಚ್ಚಾಗಿದೆ. ಇದರಲ್ಲಿ ಬರುವ ಕೆಳದೀ ಅರಸರ ವಂಶ ವಿಚಾರವು ಮಾತ್ರ ಕನ್ನಡಕ್ಕೂ ಅನುವಾದವಾಗಿದೆ.

ಷಡಕ್ಷರ ಮಂತ್ರಿಯಿಂದ ವಿರಚಿತವಾದ "ವೀರಶೈವ ಧರ್ಮಶಿರೋಮಣಿ"ಯು ಪಾರಮೇಶ್ವರಾಗಮದ ದೀಕ್ಷಾಪ್ರಕರಣದ ಮೊದಲ 22 ಪಟಲಗಳ ವಿಷಯಗಳನ್ನು 100 ಶ್ಲೋಕಗಳಲ್ಲಿ ಸಂಗ್ರಹಿಸಿದ್ದಾಗಿದೆ. ಷಡಕ್ಷರ ಮಂತ್ರಿಯು ತಾನು ಸಂಗ್ರಹಿಸಿದ ಶ್ಲೋಕ ಗಳಿಗೆ ತಾನೇ ವ್ಯಾಖ್ಯಾನ ರಚಿಸಿದ್ದಾನೆ—

1) ಮತಭೇದ ನಿರೂಪಣೆ 2) ಲಿಂಗಧಾರಣ ವೈದಿಕತ್ವ ಸ್ಥಾಪನೆ, 3) ಕರ್ಮಯೋಗ ನಿರೂಪಣೆ, 4) ಜ್ಞಾನಯೋಗ ನಿರೂಪಣೆ ಎಂದು ನಾಲ್ಕು ಪರಿಚ್ಛೇದಗಳನ್ನು ಮಾಡಿಕೊಂಡಿ ದ್ದಾನೆ. ವೀರಶೈವ ಸಿದ್ಧಾಂತಗಳನ್ನು ಪ್ರತಿಪಾದಿಸುವುದೇ ಇದರ ಮುಖ್ಯೋದ್ದೇಶವಾದಂತೆ ತೋರುತ್ತದೆ. ವೀರಶೈವನಾಗಬೇಕಾದರೆ, ಅನಾದಿಶೈವ, ಆದಿಶೈವ, ಅನುಶೈವ, ಮಹಾಶೈವ, ಯೋಗಶೈವ, ಜ್ಞಾನಶೈವ—ಎಂಬ ಆರು ಶೈವಸೋಪಾನಗಳನ್ನು ಹತ್ತಬೇಕೆಂದು ತಿಳಿಸುತ್ತದೆ. ಈ ಮಜಲುಗಳನ್ನು ಏರಿದಲ್ಲದೆ ವೀರಶೈವನಾಗಲಾರ ಎಂದು ಸ್ಪಷ್ಟಪಡಿಸಿ, ಆಯಾಯ ಸ್ತರ ಗಳಲ್ಲಿ ಆಚರಿಸಬೇಕಾದ ಧರ್ಮಗಳೂ ಸಪ್ರಮಾಣವಾಗಿ ನಿರೂಪಿತವಾಗಿವೆ. ಒಟ್ಟಿನಲ್ಲಿ ವೀರ ಶೈವಧರ್ಮಶಿರೋಮಣಿ, ಷಡಕ್ಷರ ಮಂತ್ರಿಯ ಒಂದು ಧಾರ್ಮಿಕ ಕಾಣಿಕೆ.

[35] ಇದು ಮೂರು ಕಾಂಡಗಳಿಂದ ಕೂಡಿದ ಬೃಹತ್ ಗ್ರಂಥ—ಕ್ರಿಯಾಕಾಂಡ, ವಾದಕಾಂಡ ಮತ್ತು ಕಥಾಕಾಂಡ.

1) ಕ್ರಿಯಾಕಾಂಡ: ಇದರಲ್ಲಿ 26 ಪ್ರಕರಣಗಳಿವೆ. ಜಗತ್ಸೃಜನ, ರಾಜವಂಶಾವಲಿ, ನವಖಂಡ ವಿಭಾಗ, ಹಲವು ಅಷ್ಟಾವರಣದ ವಿಷಯಗಳು ಹೇಳಲ್ಪಟ್ಟಿವೆ.

ಇದು ಅಚ್ಚಾಗಿಲ್ಲ; ಇದರ ಹಸ್ತಪ್ರತಿ ಮೈಸೂರು ಪ್ರಾಚ್ಯ ಸಂಶೋಧನಾ ಸಂಸ್ಥೆ ಯಲ್ಲಿದೆ.

2) ವಾದಕಾಂಡ: 24 ಪ್ರಕರಣಗಳಿವೆ. ಸರ್ವದರ್ಶನಗಳೊಂದಿಗೆ ತುಲನೆ ಮಾಡಿ, ವೀರಶೈವ ದರ್ಶನವನ್ನು ಸಿದ್ಧಾಂತ ಮಾಡಿಸಲಾಗಿದೆ. ಈ ಭಾಗ ಅಚ್ಚಾಗಿದೆ. ಧೂರ್ಲತಾ ಪುರ್ಯಾಂ (ಹುಬ್ಬಳ್ಳಿ) ಮೂರುಸಾವಿರದ ಮಠದ ಗ್ರಂಥಮಾಲೆಯ 8 ನೆಯ ಗ್ರಂಥ—1936.

3) ಕಥಾಕಾಂಡ—8 ಪ್ರಕರಣಗಳಿವೆ. ಅಷ್ಟಾವರಣಕ್ಕೆ ಸಂಬಂಧಿಸಿದ ಮಹಿಮಾದಿ ಗಳನ್ನು ಕಥಾನುವಾದದ ಮೂಲಕ ಚಿತ್ರಿಸಿದೆ.

ಎಂಬ ವೀರಶೈವ ಸಿದ್ಧಾಂತ ಶಿಖಾಮಣಿ ವ್ಯಾಖ್ಯಾ,[36] ಮುಂತಾದ ಧಾರ್ಮಿಕ

---

[36] ಇದು ಎರಡು ಕಡೆಗಳಲ್ಲಿ ಎರಡು ಲಿಪಿಯಲ್ಲಿ ಅಚ್ಚಾಗಿದೆ:—

ಮೈಸೂರು ವಾಣೀವಿಲಾಸ ಮುದ್ರಶಾಲೆಯಲ್ಲಿ ಪ್ರಥಮತಃ ತೆಲುಗು ಲಿಪಿಯಲ್ಲಿ ಅಚ್ಚಾಗಿದೆ. (ತಾರಣಾಬ್ದ ಮಾಘ ಕೃಷ್ಣ ಪಂಚಮಿಾ ಸೌಮ್ಯವಾಸರೇ ಎಂದಿದೆ.)

ವಾರಣಾಸಿ ಮುದ್ರಣ ಎರಡನೆಯದು. ಇದು ದೇವನಾಗರಿ ಲಿಪಿಯಲ್ಲಿದೆ.

ಆದಿಯಲ್ಲಿ—

"ಅನೇಕವಿಧ ಸಿದ್ಧಾಂತ ಶಿಖಾಮಣಿಯನಾಮಯಂ
ಶ್ರೀ ವೀರಶೈವ ಸಿದ್ಧಾಂತಮೇಕೋತ್ತರ ಶತಸ್ಥಲಂ
ರೇಣುಕಾಗಸ್ತ್ಯ ಸಂವಾದಂ ನಿಗಮಾಗಮ ವಿಶ್ರುತಂ
ಪ್ರದೀಪಯತಿ ಗುಪ್ತಾರ್ಥಮುದ್ಧೃತ್ಯ ಶಿವಯೋಗಿರಾಟ್

ಶ್ಲೋಕ 2 (2)

ಎಂತಲೂ ಪರಿಚ್ಛೇದದ ಅಂತ್ಯದಲ್ಲೂ—

ಇತಿ ಶ್ರೀ ಮಹಾವೀರಶೈವ ಮಾಹೇಶ್ವರಾಚಾರ್ಯ ಶಿವಯೋಗಿ ಸಂಗ್ರಹೀತೇ ವೇದಾಗಮ ಪುರಾಣಾದಿ ಸಾರಭೂತೇ ಸಿದ್ಧಾಂತ ಶಿಖಾಮಣೌ ಅನುಕ್ರಮ ಪ್ರಸಂಗೋನಾಮ ....ಪರಿಚ್ಛೇದ:"—

—ಎಂತಲೂ ಇರುವುದರಿಂದ - ಶಿವಯೋಗಿಕೃತವಾಗಿ ರೇಣುಕಾಗಸ್ತ್ಯರ ಸಂವಾದಾತ್ಮಕವಾಗಿ ಸರ್ವಾಗಮಸಾರ ಸಂಗ್ರಹವಾಗಿ ವೇದಾಗಮಗಳಿಂದ ಏಕೋತ್ತರ ಶತಸ್ಥಲವನ್ನು ಸಕ್ರಮವಾಗಿ ಪ್ರತಿಪಾದಿಸಿರುವ ಬಹು ಪುರಾತನ ಗ್ರಂಥವೆನಿಸಿರುವ 'ಸಿದ್ಧಾಂತ ಶಿಖಾಮಣಿ'ಗೆ ಉದ್ದಾಮವಾದ ಸಂಸ್ಕೃತ ವ್ಯಾಖ್ಯಾನವನ್ನು ರಚಿಸಿದ್ದಾನೆ.

ಕೃತಿಗಳನ್ನೂ, ಚೊಕ್ಕನಾಥನೆಂಬುವನು "ಸೇವಂತಿಕಾ ಪರಿಣಯು"[37] ಎಂಬ ನಾಟಕ ವನ್ನೂ ಸಂಸ್ಕೃತದಲ್ಲಿ ರಚಿಸಿದ್ದಾರೆ. ಶಿವಸಹಸ್ರನಾಮ ವ್ಯಾಖ್ಯಾ ಅಥವಾ ಸಂಗಮೇಶ್ವರ

---

[37] ಮೈಸೂರು ಪ್ರಾಚ್ಯ ಸಂಶೋಧನಾ ಸಂಸ್ಥೆಯ ಹಸ್ತಪ್ರತಿ. ಇವರಲ್ಲಿ 5 ಅಂಕಗಳಿವೆ. ಇದು ಒಂದು ಸಂಸ್ಕೃತ ನಾಟಕ. ಕೇರಳ ದೇಶಾಧಿಪ ಮಿತ್ರವರ್ಮನ ಪುತ್ರಿ ಸೇವಂತಿಕೆಗೂ ಮಲಯೇಂದ್ರಭೂಪಾಲ (ಕೆಳದಿಯ ಕಿರಿಯ ಬಸವಪ್ಪನಾಯಕ)ನಿಗೂ ವಿವಾಹ ನಡೆದಂತೆ ಚಿತ್ರಿತವಾಗಿದೆ.

ಗೋದವರ್ಮ ರಾಜನು ಮಿತ್ರವರ್ಮನ ಪುತ್ರಿ ಸೇವಂತಿಕೆಯನ್ನು ಯಾಚಿಸಿ ವಿಫಲನಾಗಿ, ದಂಡೆತ್ತಿ ಬಂದು ಮಿತ್ರವರ್ಮನನ್ನು ಸೆರೆ ಹಿಡಿಯುತ್ತಾನೆ. ಮಿತ್ರವರ್ಮನು ತನ್ನ ಪತ್ನೀ ಪುತ್ರಿಯರನ್ನು ತನ್ನ ಪರಮ ಮಿತ್ರನಾದ ಕೆಳದಿ ಬಸವಭೂಪಾಲನ ವಶಕ್ಕೆ, ಕೊಲ್ಲೂರು ಮೂಕಾಂಬಿಕೆಯ ಸಾನ್ನಿಧ್ಯದಲ್ಲಿ ಒಪ್ಪಿಸುತ್ತಾನೆ. ಇಲ್ಲಿಂದ ನಾಟಕ ಆರಂಭವಾಗಿ, ಬಸವರಾಜ ಮತ್ತು ಸೇವಂತಿಕೆಯರ ವಿವಾಹದಲ್ಲಿ ಮುಕ್ತಾಯಗೊಂಡಿದೆ.

ನಾಟಕ ಸುಂದರ ಶೃಂಗಾರ ಕೃತಿ.

ಕೇರಳದಿಂದ ಕನ್ನಡನಾಡಿಗೆ, ಅದರಲ್ಲೂ ಕೆಳದಿಗೆ ಬಂದು, ರಾಜಾಶ್ರಯ ಪಡೆದು ಉತ್ತಮ ಕಲಾಪೂರ್ಣವಾದ ಸಂಸ್ಕೃತ ನಾಟಕವನ್ನು ಕೊಟ್ಟ ಚೊಕ್ಕನಾಥನು ತನ್ನ ವಂಶ ವೃಕ್ಷವನ್ನು ಹೀಗೆ ಹೇಳಿಕೊಂಡಿದ್ದಾನೆ:—

ಮಹೋಪಾಧ್ಯಾಯ ತಿಪ್ಪಾಧ್ವರಿ

| | | | | | |
|---|---|---|---|---|---|
| ಕುಪ್ಪಾ —ಧ್ವರಿ | ತಿರುಮಲ (ಪ್ರಾಜ್ಞ ಮತ್ತು ವಾಗ್ಮಿ) | ಸ್ವಾಮಿ (ಯಜ್ಞ) ಶಾಸ್ತ್ರಿ | ಸೀತಾ ರಾಮ ಶಾಸ್ತ್ರಿ | ಚೊಕ್ಕನಾಥ ವಿದ್ವನ್ಮಣಿ, ಸುಧೀಂದ್ರ, (ಕೆಳದಿಯ ಕಿರಿಯ ಬಸವಪ್ಪನಿಂದ ಸನ್ಮಾನಿತನಾದ ನಾಟಕಕಾರ) | ಯಜ್ಞೇಶ್ವರ |

ವಿಲಾಸಭಾಷ್ಯಂ ಎಂಬ ವ್ಯಾಖ್ಯಾನ ಗ್ರಂಥವನ್ನು ರಚಿಸಿದ ಸಂಗಮೇಶ್ವರ ಯತಿಯೂ,[38] ಪ್ರಸಿದ್ಧ ಸಂಸ್ಕೃತ ವಿದ್ವಾಂಸವೆನಿಸಿದ್ದ ಶ್ರೀ ವಾದಿರಾಜ ವಿದ್ಯಾತೀರ್ಥ ಮತ್ತು ವೇದ ವಿದ್ಯಾತೀರ್ಥರೆಂಬ ಮಾಧ್ವ ವಿದ್ವಾಂಸರೂ ಇದೇ ಬಸವರಾಜನ ಆಸ್ಥಾನದ ವಿದ್ವದ್ಮಣಿಗಳಾಗಿದ್ದಾರೆ.[39] ಇದೇ ರೀತಿ ಕನ್ನಡದಲ್ಲೂ ಹಲವು ಪ್ರಸಿದ್ಧ ಕಾವ್ಯಗಳು ಸೃಷ್ಟಿಯಾಗಿವೆ. ಕೆಳದಿಯ ಹೆಮ್ಮೆಯ ಕವಿ ಲಿಂಗಣ್ಣನು "ಕೆಳದಿ ನೃಪ ವಿಜಯ"ವೆಂಬ ಐತಿಹಾಸಿಕ ಚಂಪೂಕಾವ್ಯವನ್ನೂ, ಶಿವಕಲ್ಯಾಣವೆಂಬ ಬೃಹತ್ ಪ್ರಮಾಣದ ಯಕ್ಷಗಾನವನ್ನೂ, ದಕ್ಷಾಧ್ವರ ವಿಜಯ, ಪಾರ್ವತೀ ಪರಿಣಯ ಎಂಬ ಚಂಪೂ ಪುರಾಣ ಕಾವ್ಯಗಳನ್ನೂ, ಶಿವಪೂಜಾದರ್ಪಣವನ್ನೂ, ಕನ್ನಡಕ್ಕೆ ಕಾಣಿಕೆಯಾಗಿ ನೀಡಿದ್ದಾನೆ. ಅವನ ಮಗ ವೆಂಕನೂ ಸಹ ಪಾರ್ವತೀವಲ್ಲಭ ಶತಕ, ಗಣ ಸಹಸ್ರನಾಮ, ನರಹರಿವಿಜಯ, ಕೆಳದೀ ರಾಮೇಶ್ವರನನ್ನು ಕುರಿತ ಹತ್ತಾರು ಹಾಡುಗಳು—ಇವೇ ಮೊದಲಾದ ಕೃತಿಗಳನ್ನು ಕೊಟ್ಟಿದ್ದಾನೆ.

---

[38] O.R.I.—Mysore S. A. 375.

ಈ ಕೃತಿಯ ಬಗ್ಗೆ ಅವನೇ ಹೇಳಿಕೊಂಡಿರುವುದು ಹೀಗಿದೆ:—

"ಶ್ರೀ ವೀರಶೈವ ಸಿದ್ಧಾಂತ ಸಾರಸರ್ವಸ್ವ ವೇದಿನಾ ಕೆಳದೀ
ಬಸವೇಂದ್ರೇಣ ಪ್ರೇರಿತಶ್ಚ ಯಥಾಮತಿ ॥ 1 ॥

ಸರ್ವವೇದಾಂತ ಸಾರಾಣಿ ಪರಬ್ರಹ್ಮ ಪರಾಣಿಚ
ಸಹಸ್ರನಾಮಾನ್ಯಾದಾಯ ಸಂಗೃಹ್ಯ ಶ್ಲೋಕ ರೂಪತಃ ॥ 2 ॥

ಸಹಸ್ರನಾಮ ಸುಸ್ತೋತ್ರಂ ಸರ್ವವೇದಾಂತ ಸಾರಜಂ
ರಚಯಿತ್ವ ಮಹಾದೇವ ಪ್ರಸಾದಾದೇವ ಕೇವಲಂ ॥ 3 ॥

ತತೋ ವೇದಪುರಾಣೇತಿಹಾಸ ಗೀತಾಸ್ಮೃತಿ ವ್ರಜೈಃ
ಆಗಮಾಚಾರ್ಯವಚನೈಃ ಸ್ತೋತ್ರೈರ್ಯುಕ್ತಿಭಿರನ್ವಿತಂ ॥ 4 ॥

ಸಂಗಮೇಶ ವಿಲಾಸಾಖ್ಯಂ ಭಾಷ್ಯಂ
ತಸ್ಯಕರೋಮ್ಯಹಂ ॥

.............................. —ಇತ್ಯಾದಿ.

[39] E.C. VIII, Sb. 55.

ವೆಂಕನ ಮಗ ಕೆಳದಿಯ ಸುಬ್ಬ ಸುಪ್ರಸಿದ್ಧ ಪ್ರಸಂಗಕಾರ. ತನ್ನ ತಾತ ಕವಿ ಲಿಂಗಣ್ಣನಲ್ಲಿದ್ದ ಯಕ್ಷಗಾನ ಕಲೆಯನ್ನು ಮುಂದುವರಿಸಿ, ರುಕ್ಮಿಣೀ ಸ್ವಯಂವರ ಮತ್ತು ಪಾರಿಜಾತ ಎಂಬ ಎರಡು ಯಕ್ಷಗಾನ ಪ್ರಸಂಗಗಳನ್ನು ನೀಡುವ ಮೂಲಕ ಯಶಸ್ವೀ ಕವಿಯಾಗಿದ್ದಾನೆ. ಲಿಂಗಣ್ಣನ ಕವಿಮನೆತನದ ಕೀರ್ತಿಯ ಕುಡಿಯು ದಾಂಗುಡಿಯಿಡುವಂತೆ ಮಾಡಿದ್ದಾನೆ.

ಮೌನಪ್ಪನ ಮೊಮ್ಮಗನೂ, ನಿರ್ವಾಣಾರ್ಯನ ಮಗನೂ ಆದ ಸಂಗನ ಬಸವಪ್ಪನು ಹಿರಿಯ ವೆಂಕಟಪ್ಪನಾಯಕನ ವೀರಶೈವಸುಧಾನಿಧಿಗೆ ಕನ್ನಡ ಟೀಕು ಬರೆದಿದ್ದಾನೆ.

ಇದಿಷ್ಟೂ ಕೆಳದಿ ಅರಸರ ಆಶ್ರಯದಲ್ಲಿ ಹುಟ್ಟಿ ಬೆಳೆದ ಸಾಹಿತ್ಯ.

(i) ಮರಿತೋಂಟದಾರ್ಯ ಮತ್ತು ವಿರಕ್ತತೋಂಟದಾರ್ಯ

'ತೋಂಟದಾರ್ಯ' ವಿರಚಿತವೆಂದು ಹೇಳಲಾದ – ಶ್ರೀ ಸಿದ್ಧೇಶ್ವರ ಪುರಾಣ, ಶ್ರೀ ಸಿದ್ಧಲಿಂಗೇಶ್ವರ ಶತಕ, ಪಾಲ್ಕುರಿಕೆ ಸೋಮೇಶ್ವರ ಪುರಾಣ, ಚಿದಾನಂದ ಸಿಂಧು, ಕರ್ನಾಟಕ ಶಬ್ದಮಂಜರಿ, ಮನೋವಿಜಯ ವ್ಯಾಖ್ಯಾನ, ಶತಕತ್ರಯ ವ್ಯಾಖ್ಯಾನ, ಪಂಚಪ್ರಕಾರಗದ್ಯ, ವೀರಶೈವಪ್ರದೀಪಿಕೆ, ವೀರಶೈವಾನಂದ ಚಂದ್ರಿಕಾ, ತತ್ತ್ವ ಪ್ರದೀಪಿಕಾ (ವೀರಶೈವ ಸಿದ್ಧಾಂತ ಶಿಖಾಮಣಿ ವ್ಯಾಖ್ಯಾ), ಕೈವಲ್ಯಸಾರ, ಷಟಸ್ಥಲ ದೀಪಿಕಾ, ಸರ್ವಾಗಮಸಾರ, ಷಟ್ಸ್ಥಲ ಕೌಮುದಿ ಎಂಬ ಗ್ರಂಥಗಳು ಪ್ರಸಿದ್ಧವಿವೆ. ಇವು ಏಕ ಕರ್ತೃಕವಾದವುಗಳಲ್ಲ. ಇವುಗಳಿಗೆ ಹಕ್ಕುದಾರರು ಇಬ್ಬರು. ಒಬ್ಬ ಮರಿ ತೋಂಟದಾರ್ಯ ಮತ್ತೊಬ್ಬ ವಿರಕ್ತ ತೋಂಟದಾರ್ಯ. ಆದರೆ ತೋಂಟದಾರ್ಯ ಎಂಬ ಉಭಯ ಸಾಧಾರಣ ಪದದೊಡನೆ ಸೇರಿಕೊಂಡಿರುವ 'ಮರಿ' ಮತ್ತು 'ವಿರಕ್ತ' ಎಂಬ ಉಪಸರ್ಗಗಳನ್ನು ಅಷ್ಟಾಗಿ ಗಮನಿಸದೆ, ಇಬ್ಬರಲ್ಲೂ ಅಭೇದವನ್ನು ಕಲ್ಪಿಸಿ, ಒಬ್ಬನ ತಲೆಗೇ ಅಂದರೆ ಮರಿತೋಂಟದಾರ್ಯನ ತಲೆಗೆ – ಎಲ್ಲ ಗ್ರಂಥಗಳನ್ನೂ ಕಟ್ಟಿ ಕನ್ನಡ, ಸಂಸ್ಕೃತೇತಿಹಾಸಕಾರರಿಗೆ ಸಮಸ್ಯೆಯನ್ನು ತಂದೊಡ್ಡಿದ್ದಾರೆ. ಇದರಲ್ಲಿ ಮುಖ್ಯಸ್ಥರು ಶ್ರೀ ಪಿ. ಆರ್. ಕರಿಬಸವಶಾಸ್ತ್ರಿಗಳು. ಶ್ರೀ ಶಾಸ್ತ್ರಿಗಳವರು "ವೀರಶೈವ ಮತಸ್ಥರಿಗೆ ಬಹು ಅನುಕೂಲವಾಗಿಯೂ, ಅತ್ಯಾವಶ್ಯಕ ವಿಷಯಗಳೊಡನೆ ಕ್ರೋಡಿಕರಿಸಲ್ಪಟ್ಟಿರುವುದಾಗಿಯೂ,"[1] ಇರುವ ಕೃತಿಗಳನ್ನು ನೀಡಿ ಧರ್ಮೀಯರ ಕೃತಜ್ಞತೆಗೆ ಪಾತ್ರರಾದರೂ ಕೆಲವೆಡೆಗಳಲ್ಲಿ ಮೂಲವನ್ನೂ ಮಾರ್ಪಡಿಸಿದಂತೆ ತೋರುತ್ತದೆ. ಅದನ್ನಿಲ್ಲಿ ಗಮನಿಸೋಣ.

ಮೊದಲನೆಯದಾಗಿ, ಸನ್ ೧೮೯೩ರಲ್ಲಿ ಮೈಸೂರಿನ ಶ್ರೀ ವೆಂಕಟಾಚಲಂ ಶೆಟ್ಟರಿಂದ ಪ್ರಕಟಗೊಂಡ 'ವೀರಶೈವಪ್ರದೀಪಿಕಾ' ಎಂಬ ಗ್ರಂಥದ ಆರಂಭದಲ್ಲಿ ಹೀಗಿದೆ—

> ಶ್ರೀಮನ್ನಿರಾಭಾರ ವೀರಶೈವಾನ್ವಯ ಕೂಟಸ್ಥಪ್ರಭುದೇವ
> ಪರಂಪರಾಗತ ಶ್ರೀ ಮರಿತೋಂಟದಾರ್ಯರಿಂ, ವೇದಾಗಮ
> ಪುರಾಣೋಪನಿಷದಾದಿ ಪ್ರಮಾಣಗಳತ್ತಣಿಂ ಸಂಗ್ರಹಿಸಿ
> ಕರ್ನಾಟಕ ತಾತ್ಪರ್ಯ ಸಹಿತವಾಗಿ ರಚಿಸಲ್ಪಟ್ಟ ವೀರಶೈವ ಪ್ರದೀಪಿಕಾ,

ಇದನ್ನು ಪ್ರಕಟಿಸಿದ, ಶ್ರೀ ವೆಂಕಟಾಚಲಂ ಶೆಟ್ಟರು ಪೀಠಿಕೆಯಲ್ಲಿ ಹೀಗೆ ಹೇಳಿದ್ದಾರೆ :—

---

[1] ಎಂ. ಆರ್. ವೆಂಕಟಾಚಲಶೆಟ್ಟಿ, ವೀರಶೈವ ಪ್ರದೀಪಿಕೆ, ಪೀಠಿಕಾ (1) ಶ್ರೀಕೃಷ್ಣ ವಿಲಾಸ ಮುದ್ರಾಕ್ಷರ ಶಾಲೆ, ಮೈಸೂರು, ಇಲ್ಲಿ 1893 ರಲ್ಲಿ ಪ್ರಕಟವಾದ ಗ್ರಂಥ.

"ಶ್ರೀಮನ್ನಿರಂಜನ ಗಣೇಂದ್ರಾವತಾರ ಪ್ರಭುದೇವ ಪರಂಪರಾಗತ ಶ್ರೀ ಮರಿತೋಂಟದಾರ್ಯರೆಂಬ ಷಟ್ಸ್ಥಲ ಚರಮೂರ್ತಿಗಳು ತರ್ಕಚಂದ್ರಿಕೆ, ವೀರಶೈವಾನಂದ ಚಂದ್ರಿಕೆ, ಷಟ್ಸ್ಥಲ ಚಂದ್ರಿಕೆ, ಕೈವಲ್ಯಸಾರ ಮುಂತಾದ ಗ್ರಂಥಗಳನ್ನು ಸಂಸ್ಕೃತ ಭಾಷೆಯಲ್ಲಿಯೂ ಸಿದ್ಧೇಶ್ವರ ಪುರಾಣ, ಷಟ್ಸ್ಥಲತಿಲಕ ಮೊದಲಾದ ಗ್ರಂಥಗಳನ್ನು ಕರ್ಣಾಟಕ ಭಾಷೆಯಲ್ಲಿಯೂ ರಚಿಸಿ, ಕಡೆಯಲ್ಲಿ ವೀರಶೈವ ಮತಸ್ವರೂಪವು ಪಂಡಿತ ಪಾಮರರಿಗೆಲ್ಲಾ ಸಾಧಾರಣವಾಗಿ ತಿಳಿಯುವಂತೆ ಭಕ್ತಾದಿ ಷಟ್ಸ್ಥಲ ಲಕ್ಷಣ ಅಷ್ಟಾವರಣ ಲಕ್ಷಣಾದಿಗಳನ್ನು ವೇದಾಗಮ ಪುರಾಣಗಳಿಂದ ಸಂಗ್ರಹಿಸಿ ತಾತ್ಪರ್ಯವಂ ಬರೆದು, ವೀರಶೈವಪ್ರದೀಪಿಕೆಯೆಂಬ ಪೆಸರನ್ನಿಟ್ಟು ಈ ಗ್ರಂಥವಂ ರಚಿಸಿದರೆಂದು ತೋರುತ್ತದೆ. ಈ ಗ್ರಂಥದ ಒಂದೇ ಪ್ರತಿಯು ನಮಗೆ ಸಿಕ್ಕಿತು. ನೋಡುವಲ್ಲಿ ಅದರ ಕೊನೆಯ ಭಾಗವು ಇರಲಿಲ್ಲ. ಆದ್ದರಿಂದ ಆ ಗ್ರಂಥವನ್ನು ೨ ವರ್ಷದಿಂದ ಅಲ್ಲಲ್ಲಿ ವಿಚಾರಿಸಿದಾಗ್ಯೂ ಮತ್ತೊಂದು ಪ್ರತಿ ದೊರೆಯಲಿಲ್ಲ. ಈ ಗ್ರಂಥವು ವೀರಶೈವ ಮತಸ್ಥರಿಗೆ ಬಹು ಅನುಕೂಲವಾಗಿಯೂ, ಅತ್ಯಾವಶ್ಯಕ ವಿಷಯಗಳೊಡನೆ ಕ್ರೋಢೀಕರಿಸಲ್ಪಟ್ಟಿದ್ದಾಗಿಯೂ ಇರುವುದರಿಂದ ಇರುವಷ್ಟನ್ನೇ ಮುದ್ರಿಸಬೇಕೆಂದು ಪ್ರಯತ್ನಿಸುವಲ್ಲಿ ಪಿ. ಆರ್. ಕರಿಬಸವಶಾಸ್ತ್ರಿಗಳು, ಇನ್ನೂ ಕೆಲವು ಪ್ರಕರಣಗಳನ್ನು ಸಂಗ್ರಹಿಸಿ ಕೊಡುತ್ತೇನೆ, ಅದರೊಡನೆ ಮುದ್ರಿಸಿರೆಂದು ಹೇಳಿ ವೇದಾಂಗವಾರ್ಥೈಕ್ಯ ಪ್ರತಿಪಾದನ, ಶಿವಭಕ್ತಿಮಹಿಮೆ, ಸತ್ಪಾತ್ರದಾನ ನಿರೂಪಣ, ಎಂಬ ಮೂರು ಪ್ರಕರಣಗಳನ್ನು ಬರೆದುಕೊಟ್ಟರು. ಈ ಮೂರು ಪ್ರಕರಣಗಳನ್ನು ಕಡೆಗೆ ಸೇರಿಸಿ ಮುದ್ರಣವಂ ಮಾಡಿಸಿದೆನು. ಇದರಲ್ಲಿ ಹಸ್ತಸಾಹಿತ್ಯ ಅಕ್ಷರ ವ್ಯತ್ಯಾಸ ಮೊದಲಾದ ದೋಷಗಳು ಇನ್ನೇನಾದರೂ ಇದ್ದಲ್ಲಿ ಇನ್ನೊಂದು ಸಾರಿ ಕ್ರಮಪಡಿಸಲಾಗುವುದು."

ಎರಡನೆಯದಾಗಿ, ೧-೨-೧೮೯೫ರಲ್ಲಿ ಪ್ರಕಟವಾದ ಶ್ರೀ ಸಿದ್ಧೇಶ್ವರ ಪುರಾಣದ ಆರಂಭದಲ್ಲಿ—

ಶ್ರೀಮದೇಕೋತ್ತರ ಶತಸ್ಥಲ ಪ್ರತಿಪಾದಕ
ವೀರಶೈವ ಸಿದ್ಧಾಂತ ಕ್ಷೀರಪಾರಾವಾರ ಪಾರೀಣರಾದ
ಮರಿತೋಂಟದಾರ್ಯರಿಂದ ರಚಿಸಲ್ಪಟ್ಟ
ಶ್ರೀ ಸಿದ್ಧೇಶ್ವರ ಪುರಾಣವು

—ಎಂತಲೂ - ಲೇಖಕ ಪ್ರಮಾದಾದಿ ದೋಷಗಳಿಲ್ಲದೆ ಮೈಸೂರು ಮಹಾರಾಜಾ ಕಾಲೇಜು ಕನ್ನಡ ಪಂಡಿತ ಪಿ. ಆರ್. ಕರಿಬಸವಶಾಸ್ತ್ರಿಗಳಿಂದ

ತಿದ್ದಿಸಿ
ಮೈಸೂರು
ಸ್ವಕೀಯ ಶಂಕರವಿಲಾಸ ಮುದ್ರಾಕ್ಷರ ಶಾಲೆಯಲ್ಲಿ
ಮುದ್ರಿಸಿ ಪ್ರಕಟಿಸಲ್ಪಟ್ಟಿತು.

ಎಂತಲೂ ಇದೆ.

ಪ್ರಕಾಶಕ ಶ್ರೀ ಪಿ. ವಿ. ರುದ್ರಪ್ಪನವರು, ಇದಕ್ಕೆ ಒಂದು ಪೀಠಿಕೆ ಬರೆಯುತ್ತಾ, "ಮರಿತೋಂಟದಾರ್ಯರು ಈ ಸಿದ್ಧೇಶ್ವರ ಪುರಾಣವಲ್ಲದೆ ಕನ್ನಡದಲ್ಲಿ ಸಿದ್ಧಲಿಂಗೇಶ್ವರ ಸ್ತೋತ್ರ, ಕರ್ಣಾಟಕ ಶಬ್ದಮಂಜರಿ ಮೊದಲಾದ ಗ್ರಂಥಗಳನ್ನೂ, ಸಂಸ್ಕೃತದಲ್ಲಿ ವೀರಶೈವಾನಂದ ಚಂದ್ರಿಕೆ, ವೀರಶೈವಪ್ರದೀಪಿಕೆ, ಕೈವಲ್ಯಸಾರ, ಷಟ್ಸ್ಥಲದೀಪಿಕೆ ಮೊದಲಾದ ಗ್ರಂಥಗಳನ್ನು ರಚಿಸಿದ್ದಾರೆ. ಮುಂದುವರಿಯುತ್ತಾ ಶ್ರೀಯುತರು- "ನಮಗೆ ದೊರಕಿದ ಮೂರು ಪ್ರತಿಗಳಲ್ಲಿಯೂ ಅಕ್ಷರ ಸ್ಖಾಲಿತ್ಯ ಅಕ್ಷರ ವ್ಯತ್ಯಾಸ ರೂಪವಾದ ತಪ್ಪುಗಳಂತೂ ಎಷ್ಟೋ ಇದ್ದವು. ಅವುಗಳನೆಲ್ಲಾ ಸರಿಮಾಡುವಲ್ಲಿ ವ್ಯಾಕರಣ ವಿರುದ್ಧವಾದ ಪ್ರಕೃತಿ ಪ್ರಯೋಗರೂಪವಾದ ದೋಷವೂ ಕೂಡ ಕೈಲಾದಮಟ್ಟಿಗೂ ಕವಿಯ ಆಶಯವು ಕೆಡದಂತೆ ಪರ್ಯಾಯ ಪದವನ್ನು ಹಾಕಿ, ಛಂದಸ್ಸಿಗೂ ವ್ಯಾಕರಣಕ್ಕೂ ಅನುಕೂಲವಾಗಿ ತಿದ್ದಲ್ಪಟ್ಟಿದೆ. ಹೀಗಿರುವಲ್ಲಿ ಕೆಲವರು ಪುರಾಣವನ್ನು ಮನಸ್ಸಿಗೆ ಬಂದಂತೆ ತಿದ್ದಿದ್ದಾರೆಂದು . ಪ್ರಸ್ತಾಪಿಸಿಕೊಳ್ಳಬಹುದು. ಮಹನೀಯರು ರಚಿಸಿದ ಗ್ರಂಥವನ್ನು ಅವರ ತಾತ್ಪರ್ಯಕ್ಕೆ ವಿರುದ್ಧವಾಗಿ ತಿದ್ದಿದವರಿಗೆ ಗುರುದ್ರೋಹವು ಎಂದಿಗೂ ತಪ್ಪುವುದಿಲ್ಲ. ಅಂಥ ಸಂದರ್ಭವೇನೂ ನಡೆಯದಿದ್ದಾಗ್ಯೂ "ತಿದ್ದಿದ್ದಾರೆ ಮೊದಲಿನಂತಿಲ್ಲ" ಎಂದು ಪಾಪಭೀತಿಯಿಲ್ಲದೆ ಸಾಧುಜನಗಳಿಗೆ ಕ್ಷುದ್ರವಚನಗಳನ್ನು ಉಪದೇಶಿಸಿ ಈ ಪುರಾಣ ವಿಷಯದಲ್ಲಿ ಆಸ್ಥೆಯನ್ನು ತಪ್ಪಿಸುವ ವಂಚಕರು, ಗುರುದ್ರೋಹಕ್ಕೂ, ದುರ್ಗತಿಗೂ ಪಾತ್ರರಾಗದೆ ಹೋಗುವುದಿಲ್ಲ" ಎಂದು ಶಾಪ ಹಾಕಿದ್ದಾರೆ. ಶ್ರೀಯುತರ ಆಗ್ರಹಕ್ಕೆ ಕಾರಣ ತಿಳಿಯದು. ಬಹುಶಃ ಅವರ ಕಾಲದಲ್ಲೇ ಅವರು ತಿದ್ದಿದ ಬಗ್ಗೆ ಟೀಕೆ ಟಿಪ್ಪಣಿಗಳು ಬಂದಿರಬೇಕು. ಅದಕ್ಕೆ ಅಷ್ಟು ರೋಷಭೀಷಣವಾದ ಮಾತುಗಳು ಹೊರಬಿದ್ದಿರುವುದು ಸತ್ಯ ಹಾಗೂ ಸಹಜ ಎನ್ನಿಸುತ್ತದೆ. ಇರಲಿ.

ಈ ಮೇಲೆ ತಿಳಿಸಿದ ವೀರಶೈವ ಪ್ರದೀಪಿಕೆ ಮತ್ತು ಶ್ರೀ ಸಿದ್ಧೇಶ್ವರ ಪುರಾಣ ಎಂಬ ಈ ಎರಡು ಕೃತಿಗಳಲ್ಲೂ ಶ್ರೀ ಪಿ. ಆರ್. ಕರಿಬಸವಶಾಸ್ತ್ರಿಗಳು ಹೇಳಿದ ಅಥವಾ ಹೇಳಿಸಿದ ಕೃತಿಗಳನ್ನು ಮರಿತೋಂಟದಾರ್ಯನ ಕೊರಳಿಗೆ ಬಿಗಿದದ್ದು ಮೊದಲನೆಯ ತಪ್ಪು; ಮೂಲ ಕೃತಿಗಳನ್ನು ತಮಗೆ ಇಷ್ಟಬಂದಂತೆ ತಿದ್ದಿದುದು ಎರಡನೆಯ ತಪ್ಪು; ತಿದ್ದಿದ್ದು ಸರಿಯಲ್ಲವೆಂದವರ ಮೇಲೆ ರೇಗಿ ಶಾಪ ಹಾಕಿದ್ದು ಮೂರನೆಯ ತಪ್ಪು.

ಇದೇ ರೀತಿ ಕ್ರಿ. ಶ. ೧೯೦೭ರಲ್ಲಿ ಮರಾಠಿಭಾಷಾನುವಾದ ಸಹಿತ ಶ್ರೀ ರಂಗಾಚಾರಿ ಶಾಸ್ತ್ರಿಯವರು ಸಂಪಾದಿಸಿದ "ಕೈವಲ್ಯಸಾರ" ಎಂಬ ಗ್ರಂಥದಲ್ಲಿ ಪ್ರಕಾಶಕರಾದ ಶ್ರೀ ಮಣ್ಣೂರ ಮಠಾಧ್ಯಕ್ಷ ಶ್ರೀ ಮಲ್ಲಿಕಾರ್ಜುನ ಶಾಸ್ತ್ರಿಗಳು—

ಶ್ರೀಮತ್ಪರಮಹಂಸ ಮರಿತೋಂಟದಾರ್ಯಕೃತ– ಎಂದೇ ಅಚ್ಚು ಹಾಕಿಸಿದ್ದಾರೆ. ಸೊಲ್ಲಾಪುರದ ವಾರದವರು ಮೇಲೆ ತಿಳಿಸಿದ (೧೯೦೭) ಈ ಸಂಸ್ಕೃತ ಮತ್ತು ಕನ್ನಡ ಗ್ರಂಥಗಳಾವುವೂ ಮರಿತೋಂಟದಾರ್ಯನವಲ್ಲ. ಆತನವು ಎರಡು ಗ್ರಂಥಗಳು; ಅವು ಸಂಸ್ಕೃತದವುಗಳು: ಒಂದು ವೀರಶೈವಾನಂದ ಚಂದ್ರಿಕಾ, ಮತ್ತೊಂದು ತತ್ತ್ವ ಪ್ರದೀಪಿಕಾ ಎಂಬ ವೀರಶೈವ ಸಿದ್ಧಾಂತ ಶಿಖಾಮಣಿ ವ್ಯಾಖ್ಯಾ. ಮಿಕ್ಕ ಸಂಸ್ಕೃತ ಮತ್ತು ಎಲ್ಲ ಕನ್ನಡ ಪುಸ್ತಕಗಳನ್ನೂ [2] ಬರೆದವನು ವಿರಕ್ತತೋಂಟದಾರ್ಯ. ಈಗ ಇದರ ಸತ್ಯಾಸತ್ಯತೆಯನ್ನು ಪರಿಶೀಲಿಸೋಣ—

ಮೊದಲನೆಯದಾಗಿ, ಮರಿತೋಂಟದಾರ್ಯನಿಗೆ "ತೋಂಟದಸ್ವಾಮಿ" [3] ಎಂದು ಹೆಸರಿದ್ದರೆ, ವಿರಕ್ತ ತೋಂಟದಾರ್ಯನಿಗೆ – ತೋಂಟದ ಸಿದ್ಧಲಿಂಗ ಶಿವಯೋಗೀಂದ್ರ [4] ತೋಂಟದ ಸಿದ್ಧಲಿಂಗದೇವ, [5] ತೋಟದ ಸಿದ್ಧಲಿಂಗದೇಶಿಕ [6]—ಎಂಬ ಹೆಸರುಗಳು ರೂಢಿಯಲ್ಲಿವೆ.

ಎರಡನೆಯದಾಗಿ, ಇವನ ಗುರುಪರಂಪರೆಯೇ ಬೇರೆ, ಅವನ ಗುರುಪರಂಪರೆಯೇ ಬೇರೆ. ವೀರಶೈವಾನಂದಚಂದ್ರಿಕಾ ಅಪ್ರಕಟಿತ ಮೊದಲ ಭಾಗ ಕ್ರಿಯಾಕಾಂಡ ದಲ್ಲೂ, [7] ಮತ್ತು ಅಚ್ಚಾಗಿರುವ ಇದೇ ಗ್ರಂಥದ ಎರಡನೆಯ ಭಾಗ ವಾದಕಾಂಡದಲ್ಲೂ [8]

---

[2] 1) ಸಿದ್ಧೇಶ್ವರ ಪುರಾಣ, 2) ಪಾಲ್ಕುರಿಕೆ ಸೋಮೇಶ್ವರ ಪುರಾಣ, 3) ಚಿದಾನಂದ ಸಿಂಧು, 4) ಶತಕತ್ರಯ ವ್ಯಾಖ್ಯಾನ, 5) ಮನೋವಿಜಯ ವ್ಯಾಖ್ಯಾನ, 6) ಸಿದ್ಧಲಿಂಗೇಶ್ವರ ಶತಕ, 7) ಕರ್ಣಾಟಕ ಶಬ್ದಮಂಜರಿ, 8) ಪಂಚಪ್ರಕಾರ ಗದ್ಯ ಎಂಬ ಕನ್ನಡ ಕೃತಿಗಳು—(1) ಕೈವಲ್ಯಸಾರ (2) ಸರ್ವಾಗಮ ಸಂಗ್ರಹ, (3) ಷಟ್ಸ್ಥಲ ದೀಪಿಕಾ ಎಂಬ ಸಂಸ್ಕೃತ ಕೃತಿಗಳು.

[3] ವೀರಶೈವಾನಂದ ಚಂದ್ರಿಕಾ; ವಾದಕಾಂಡ ಹುಬ್ಬಳ್ಳಿಯಲ್ಲಿ ಮೂರು ಸಾವಿರ ಮಠದ ಪ್ರಕಟಿತ ಗ್ರಂಥ—ಪೀಠಿಕೆ. (ಪು. iii)

[4] ಶ್ರೀ ಸಿದ್ಧೇಶ್ವರ ಪುರಾಣ ಮತ್ತು ಪಾಲ್ಕುರಿಕೆ ಸೋಮೇಶ್ವರ ಪುರಾಣ—ಈ ಕೃತಿಗಳ ಪ್ರತಿ ಸಂಧಿಯ ಅಂತ್ಯದ ಪದ್ಯಗಳು.

[5] ಮನೋವಿಜಯ ವ್ಯಾಖ್ಯಾನ, ಪು. 2, ಸಟೀಕಶತಕತ್ರಯ ವ್ಯಾಖ್ಯಾನ ಪು. 1.

[6] ಕ. ಕ. ಚ. II, ಪು. 282; ಕೈವಲ್ಯಸಾರ I, 4.

[7] ಪ್ರಾಚ್ಯ ಸಂಶೋಧನಾ ಸಂಸ್ಥೆ, ಮೈಸೂರು. ಹಸ್ತಪ್ರತಿ. S. A. 423.

[8] ಹುಬ್ಬಳ್ಳಿ ಮೂರು ಸಾವಿರ ಮಠದ ಗ್ರಂಥ, ಪು. 1.

"ಕಾರುಣ್ಯಾಬ್ಧಿಃ ಸಂಪ್ರದಾಯಪ್ರಸಿದ್ಧೌ
ಬದ್ಧಶ್ರದ್ಧಃ ಸಿದ್ಧೇಶ್ವರಸ್ಯ ಸರ್ವಾಭಿಜ್ಞಃ
ಕೋಪಿ ಕೌದೀಮಹಾಂತ ಸ್ವಾಮೀ
ಭೂಮಾವಾವಿರಾಸೀತೆ ವೀರಾಗೀ

o o o o
o o o o
o o o o

ನಿರ್ಗತ್ಯಾಥ ಸದೇಶಿಕಃ ಸ್ವವಸಂತೀಂ ಸಂಪ್ರಾಪ್ಯಮಾಂ ಪ್ರೇಮತೋ
ಜ್ಞಾನಾನುಗ್ರಹ ಪಾತ್ರತಾಮುಪನಯನೇ ಕಾರುಣ್ಯಪಾತೋ ನಿಧಿಃ ||
ವಾಚಂ ಮೇ ಮರಿತೋಂಟದಾರ್ಯ ಮನಸಿ ಪ್ರಕ್ಷಿಪ್ಯಕಾಲಾಂತರೇ
ವತ್ಸ್ಯೈ ತದ್ವವಚಾನುರೂಪಮುಚಿತಂ ಕುರ್ವೀತ್ಯಪಾದೀಚ್ಚಮಾಂ ||

—ಹೀಗೆ ಸಿದ್ಧೇಶ್ವರ ಶಿವಯೋಗಿಗಳು, ಅನಂತರ ಕೌದೀಮಹಾಂತ ಸ್ವಾಮಿಗಳು, ಅನಂತರ ತನ್ನನ್ನೂ ಮರಿತೋಂಟದಾರ್ಯನು ಹೇಳಿಕೊಂಡಿದ್ದಾರೆ,[9] ವಿರಕ್ತ ತೋಂಟದಾರ್ಯನು ಶ್ರೀ ಸಿದ್ಧೇಶ್ವರ ಪುರಾಣ ಮತ್ತು ಪಾಲ್ಕುರಿಕೆ ಸೋಮೇಶ್ವರ ಪುರಾಣಗಳ ಮೊದಲನೆಯ ಸಂಧಿಗಳಲ್ಲಿ ಸಿದ್ಧಲಿಂಗಯತಿಗಳ ಶಿಷ್ಯರಾದ ಬೋಳಬಸವ ಸ್ವಾಮಿಗಳು, ಅವರ ಶಿಷ್ಯರು ಗೂಳೂರು ಸಿದ್ಧವೀರೇಶ್ವರ ಸ್ವಾಮಿಗಳು, ಅವರ ಶಿಷ್ಯ ವಿರಕ್ತ ತೋಂಟದಾರ್ಯ–ಹೀಗೆ ತನ್ನ ಗುರುಪರಂಪರೆಯನ್ನು ಹೇಳಿಕೊಂಡಿದ್ದಾನೆ.

ಮೂರನೆಯದಾಗಿ, ಮರಿತೋಂಟದಾರ್ಯನು ಡಂಬಳದಿಂದ ಕೆಳದಿಯ ಕಿರಿಯ ಸೋಮಶೇಖರನ ಆಸ್ಥಾನಕ್ಕೆ ಬಂದು ಅಲ್ಲಿಯೇ ರಾಜಗುರುವಾಗಿ ಇದ್ದು ;[10] ಕಿರಿಯ

---

[9] ಈ ಗುರುಪರಂಪರೆಯಲ್ಲಿ ಗದುಗಿನ ತೋಂಟದಾರ್ಯ ಮಠದ ಶ್ರೀ ಅರ್ಧನಾರೀಶ್ವರ ಸ್ವಾಮಿಗಳೂ ಒಬ್ಬರು. ಇವರೇ ಮರಿತೋಂಟದಾರ್ಯನಿಗೆ ಅನುಗ್ರಹಿಸಿದ ಗುರುಗಳೆಂದೂ, ವೈ. ನಾಗೇಶಶಾಸ್ತ್ರಿಗಳು ತಿಳಿಸುತ್ತಾರೆ. ಶ್ರೀಯುತರು "ಶ್ರೀ ಜಗದ್ಗುರು ತೋಂಟದ ಶ್ರೀಮದರ್ಧನಾರೀಶ್ವರ ಪುರಾಣ" ಎಂಬ ಗ್ರಂಥವನ್ನೂ ರಚಿಸಿದ್ದಾರೆ.

ಪ್ರಕಾಶಕರು : ಶ್ರೀ ತೋಟಪ್ಪ ವೀರಪ್ಪ ಕೋಟಿ, ಬಿ.ಎ.ಎಲ್ಎಲ್.ಬಿ. ವಕೀಲರು, ಗದಗ. ಈ ಗ್ರಂಥದ ಎರಡನೆಯ ಸಂಧಿಯಲ್ಲಿ ಕೆಳದಿ ಕಿರಿಯ ಸೋಮಶೇಖರನ ರಾಜ್ಯಭಾರವನ್ನೂ, ಮೂರನೆಯ ಸಂಧಿಯಲ್ಲಿ ವೀರಭದ್ರ ಮತ್ತು ಮಲ್ಲಾಂಬಿಕೆಯರ ಪುತ್ರ ಬಸವರಾಜ ಹಾಗೂ ಅರ್ಧನಾರೀಶ್ವರರ ಶಿಷ್ಯ ಮರಿತೋಂಟದಾರ್ಯ — ಇವರ ವಿಚಾರವನ್ನೂ ಹೇಳಿದ್ದಾರೆ.

[10] ವೀರಶೈವಾನಂದಚಂದ್ರಿಕಾ ಕ್ರಿಯಾಕಾಂಡ, ಮೈಸೂರು ಪ್ರಾಚ್ಯ ಸಂಶೋಧನಾ ಸಂಸ್ಥೆಯ ಹಸ್ತಪ್ರತಿ 1 ಶ್ಲೋಕ 12-15.

ಬಸವಪ್ಪನಾಯಕನ ಆಸ್ಥಾನದಲ್ಲಿ[11] ತನ್ನ ದೀಕ್ಷಾಗುರು ಅರ್ಧನಾರೀಶ್ವರರ ಅಪ್ಪಣೆಯಂತೆ ವೀರಶೈವಾನಂದ ಚಂದ್ರಿಕೆಯನ್ನು[12] ಪಶೌಸಪ್ಪ ಪಂಡಿತರೇ ಮೊದಲಾದ ಬುಧರ ಸಹಾಯದಿಂದ[13] ಶಕ ೧೬೬೬ ನೆಯ ರುಧಿರೋದ್ಗಾರಿ ಸಂ || ಮಾರ್ಗಶಿರ ಶು || ೫ ಗುರುವಾರ ಬರೆದು ಮುಗಿಸುತ್ತಾನೆ.[14] ಅಂತೆಯೇ ವಾದಕಾಂಡದ ಅಂತ್ಯದಲ್ಲಿ "....ಎಡವಮುರಾರಿ ಕೋಟಿ ಕೋಲಾಹಲ ಏಕಾಂಗವೀರ ಸಪ್ತಾಂಗಹರಣ ಪಶ್ಚಿಮ ಸಮುದ್ರಾಧೀಶ್ವರ ವಿಶುದ್ಧ ವೈದಿಕಾದ್ವೈತ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ ಕೆಳದೀ ಸದಾಶಿವರಾಯ ನಾಯಕ ವಂಶ ದುಗ್ಧಾರ್ಣವ ಪೂರ್ಣಚಂದ್ರ ವೀರಭದ್ರಧರಣೀಂದ್ರ ಧರ್ಮಪತ್ನೀ ಮಲ್ಲಾಂಬಾ ಹೃದಯಾನಂದನ ಬಸವ ವಸುಧಾಸಂಕ್ರಂದನೋಪದೇಶೇ ವೀರಶೈವಾನಂದ ಚಂದ್ರಿಕಾಯಾಂ ವಾದಕಾಂಡೇ ವೀರಶೈವ ಮತೋತ್ಕರ್ಷ ತನ್ನಿಷ್ಟ ಶಿವಭಕ್ತೋತ್ಕರ್ಷ ನಿರೂಪಣಂ ನಾಮ ಚತುರ್ವಿಂಶತಿ ತಮಂ ಪ್ರಕರಣಂ"[15]—ಹೀಗೆ ಹೇಳಿದೆ. ಆದ್ದರಿಂದ ಇವನ ಆಶ್ರಯದಾತ ಮುಖ್ಯವಾಗಿ ಕೆಳದೀ ವೀರಭದ್ರ ಮತ್ತು ಮಲ್ಲಮಾಂಬೆಯರ ಪುತ್ರ ಕಿರಿಯ ಬಸವಪ್ಪನಾಯಕ. ಈ ಬಸವಪ್ಪನ ಆಳ್ವಿಕೆಯ ಅವಧಿಯಲ್ಲಿ (ಕ್ರಿ. ಶ. ೧೭೪೦-೧೭೫೫) ಇದ್ದು, ಕ್ರಿ. ಶ. ೧೭೪೪ ರಲ್ಲಿ ವೀರಶೈವಾನಂದ ಚಂದ್ರಿಕೆಯನ್ನು ಬರೆದು ಮುಗಿಸಿದ್ದರಿಂದ ಇವನ ಕಾಲ ೧೮ ನೆಯ ಶತಮಾನದ ಮಧ್ಯಭಾಗ ಎಂದು ನಿರ್ಧರಿಸಬಹುದು.

ವಿರಕ್ತ ತೋಂಟದಾರ್ಯನು ನಂದಿಪುರದಿಂದ ಬಿಜ್ಜಾವರಕ್ಕೆ ಹೋಗಿ ಅಲ್ಲಿ ಆಳುತ್ತಿದ್ದ ಶ್ರೀ ತೋಂಟದ ಸಿದ್ಧಲಿಂಗಭೂಪಾಲನಲ್ಲಿ ರಾಜಗುರುವಾಗಿದ್ದುಕೊಂಡು, ಕೃತಿ

---

[11] ಈ ಡಂಬಳದ ಸಿದ್ಧೇಶ್ವರ ದೇವರ ಗದ್ದುಗೆಯ ತೋಂಟದ ಸ್ವಾಮಿಗಳಿಗೆ ಕೆಳದಿಯ ಕಿರಿಯ ಬಸವಪ್ಪ ನಾಯಕನು ಭೂರಿ ಭೂಸ್ವಾಸ್ಥೆಯನ್ನು ಶಿವಾರ್ಪಿತವಾಗಿ ಧಾರೆಯೆರೆದು ಕೊಟ್ಟಿದ್ದಾನೆ—ಕೆ. ನೃ. ವಿ. ಪು. 200.

[12] "........ಪಂಡಿತ ಬಸವಪ್ಪ ವೀರಪ್ಪ ಕೋಟಿ ಇವರಿಂದ ಶೋಧಿಸಿ ಬರೆಯಿಸಲ್ಪಟ್ಟ ನಿರಂಜನ ಜಂಗಮ ದರ್ಪಣದಲ್ಲಿ"—ಶ್ರೀ ಕೌದೀಮಹಾಂತ ಸ್ವಾಮಿಗಳು ಮೂಲ ಪುರುಷರಾದ ತೋಂಟದ ಸಿದ್ಧಲಿಂಗಸ್ವಾಮಿಗಳಿಂದ ಎಂಟನೆಯ ನಿರಂಜನ ಪಟ್ಟಾಧಿಕಾರಿಗಳೆಂದು ಬರೆಯಲ್ಪಟ್ಟಿದೆ. ಮತ್ತು ಆ ಗ್ರಂಥದಲ್ಲಿ ಮರಿತೋಂಟದಾರ್ಯರಿಗೆ ಕೌದೀಮಹಾಂತಸ್ವಾಮಿಗಳ ಮುಂದಿನ ಪಟ್ಟಾಧಿಕಾರಿಗಳಾದ ಶ್ರೀ ಅರ್ಧನಾರೀಶ್ವರ ಸ್ವಾಮಿಗಳು ಷಟ್ಸ್ಥಲೋಪದೇಶವನ್ನು ಮಾಡಿ ವೀರಶೈವಾನಂದಚಂದ್ರಿಕೆಯನ್ನು ಬರೆಯಲು ಅಪ್ಪಣೆ ಮಾಡಿದಂತೆ ಉಕ್ತವಾಗಿದೆ."

—ವೈ. ನಾಗೇಶಶಾಸ್ತ್ರಿಗಳು, ಶ್ರೀ ಸಿದ್ಧೇಶ್ವರ ಪುರಾಣವು, ಪ್ರಸ್ತಾವನೆ ಪು. 4.

[13] ವೀರಶೈವಾನಂದ ಚಂದ್ರಿಕಾ, ವಾದಕಾಂಡದ ಪೀಠಿಕೆ (ಪು. iii). ಬಹುಶಃ ಇದು ಕಥಾಕಾಂಡದ ಶ್ಲೋಕವಿರಬೇಕು (ಹುಬ್ಬಳ್ಳಿ ಮೂರು ಸಾವಿರ ಮಠದ ಪ್ರಕಟಣೆ)

[14] ಅದೇ.

[15] ಅದೇ. ಪು. 467.

ರಚನೆ ಮಾಡಿರುವುದಾಗಿ ತಿಳಿಸುತ್ತಾನೆ.[16] ಈ ಬಿಜ್ಜಾವರವು (ಈಗ ತುಮಕೂರು ಜಿಲ್ಲೆಯಲ್ಲಿರುವ ಒಂದು ಸಣ್ಣ ಗ್ರಾಮ) ಪ್ರಸಿದ್ಧ ರಾಜ್ಯವಾಗಿದ್ದು ಸಿದ್ಧಲಿಂಗ ಭೂಪಾಲನ ಆಳ್ವಿಕೆಯ ಅವಧಿಯು ಆ ರಾಜ್ಯ ಜೀವನದಲ್ಲಿ ಅತ್ಯುತ್ತಮ ದಿನಗಳೆಂದು ತಿಳಿಯುತ್ತದೆ.[17] ಅವನ ಗುರುವೂ, ಆಸ್ಥಾನ ಕವಿಯೂ ಆಗಿದ್ದ ವಿರಕ್ತ ತೋಂಟದಾರ್ಯನ ಕಾಲವು ೧೬ನೆಯ ಶತಮಾನದ ಮಧ್ಯಕಾಲ.[18]

---

[16] "...ಇವರು ರಚಿಸಿದ ಗ್ರಂಥಗಳ ಮೊದಲಲ್ಲೆಲ್ಲಾ ನಿರಂಜನಲಿಂಗದ ಸ್ತುತಿ ಮಾಡಿರುವುದು ಒಂದು ಹೆಗ್ಗುರುತಾಗಿದೆ. ಬಿಜ್ಜಾವರವೆಂಬ ಪಟ್ಟಣಕ್ಕೆ ತೋಂಟದ ಸಿದ್ಧಲಿಂಗ ಭೂಪಾಲನೆಂಬುವವನು ಅರಸನಾಗಿದ್ದನೆಂದೂ, ಅವನಿಗೆ ನಂದೀಪುರದ ಸಿಂಹಾಸನದ ಪರ್ವತೇಶರಿಂದ ದೀಕ್ಷಾತ್ರಯವನ್ನು ಹೊಂದಿದ್ದ ತೋಂಟದಾರ್ಯನು ಗುರುವಾಗಿದ್ದನೆಂದೂ ತೋಂಟದಾರ್ಯನಿಗೆ ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಸಂಪ್ರದಾಯದ ಗೂಳೂರ ಸಿದ್ಧವೀರ ಸ್ವಾಮಿಗಳಿಂದ ವಿರಕ್ತಾಶ್ರಮವು ಕೊಡಲ್ಪಟ್ಟಿರಬೇಕೆಂದೂ ಇವರ ಗ್ರಂಥಗಳ ಆಧಾರದಿಂದಲೇ ಕಂಡು ಬರುತ್ತದೆ."

—ವಿರೂಪಾಕ್ಷಯ್ಯ, ಶತಕತ್ರಯವ್ಯಾಖ್ಯಾನದ ಪೀಠಿಕೆ. ಪು. VI.

ಗುರುಬಸವೇಶನೊಲ್ದು ಬೆಸಸಿರ್ದ ಮನೋವಿಜಯ ಪ್ರಬಂಧಮಂ
ಧುರುಗಲಿಯುಪ್ಪ ಬಿಜ್ಜವರದೀಶ್ವರ ತೋಂಟದ ಸಿದ್ಧಲಿಂಗ ಭೂ
ವರನಿಗನಾರತಂ ವಿವಿಧ ಭಕ್ತಿಯಿನರ್ಚಿತ ತೋಂಟದಾರ್ಯನಾ
ದರದೆ ಪ್ರಕಾಶಿಸಲ್ಸಕಲ ಕೋವಿದರಾದರಗೆಯ್ಯದಿರ್ಪರೇ ||

—ಸವ್ಯಾಖ್ಯಾನ ಮನೋವಿಜಯಂ. ಪು. 149.

[17] E.C. III ಮಳವಳ್ಳಿ 82, ಅದೇ. XVI ಮುದ್ದಗಿರಿ; 3 ; ಮನೋವಿಜಯ ಚೆನ್ನಬಸವಪುರಾಣ ಪು.768, ಕಂಠೀರವನರಸರಾಜವಿಜಯ ಪು. 208;

A descriptive catalogue of Kanarese Manuscripts, Madras Vol. I, P. 37; Ibid. Vol. IV. P. 1030. No. 704
ಕ.ಕ.ಚ. II ಪು. 282 ; ಮತ್ತು 314.

[18] ಕ.ಕ.ಚ. II ಪು. 281—282; ವೈ. ನಾಗೇಶಶಾಸ್ತ್ರಿಗಳು, ಸಿದ್ಧೇಶ್ವರ ಪುರಾಣವು ಪ್ರಸ್ತಾವನೆ ಪು. 5. ಆದರೆ ವಿರೂಪಾಕ್ಷಯ್ಯನವರು ಮಾತ್ರ "17ನೆಯ ಶತಮಾನದಲ್ಲಿದ್ದಿರ ಬಹುದೆಂದು ಕಾಣುತ್ತದೆ" ಎಂದು ಹೇಳಿದ್ದಾರೆ. ಪೀಠಿಕೆ. ಪು. Vi.

ನಾಲ್ಕನೆಯದಾಗಿ, ಮರಿತೋಂಟದಾರ್ಯನಿಗೆ ಯಾವ ಅಂಕಿತವೂ ಇದ್ದಂತಿಲ್ಲ. ಆದರೆ "ಪದವಾಕ್ಯಪ್ರಮಾಣೇತ್ಯಾದಿ" ವಿಶೇಷಣಗಳಿವೆ.[19] ವಿರಕ್ತ ತೋಂಟದಾರ್ಯನಿಗೆ "ಗುರುನಿರಂಜನಲಿಂಗ" ಎಂಬ ಅಂಕಿತವೂ[20], "ಗುರುನಿರಂಜನಲಿಂಗ ಪದಕಮಲ ಸೌರಭಾಸಕ್ತ ಪಟ್ಟದ ಪಟ್ಟಸ್ಥಲಾಚಾರ ಸಂಪನ್ನ ಶೈವಪಂಚಾಕ್ಷರೀ ಮಂತ್ರಹೃದಯ ಅಖಿಲ ಶಾಸ್ತ್ರಾಸ್ತ್ರ ಕೋವಿದ" ಎಂಬ ವಿಶೇಷಣಗಳೂ ಇವೆ.[21]

ಐದನೆಯದಾಗಿ, ಇಬ್ಬರ ಕೃತಿಗಳೂ ಬೇರೆ ಬೇರೆ. ಮರಿತೋಂಟದಾರ್ಯನು ಉದ್ದಾಮ ಪಂಡಿತ.[22] ವಿರಕ್ತ ತೋಂಟದಾರ್ಯನು ಪ್ರತಿಭಾವಂತ ಕವಿ.[23] ಕುಲದಲ್ಲಿ ಇಬ್ಬರೂ ವೀರಶೈವರು, ಭೂರುದ್ರರು, ಶ್ರೇಷ್ಠ ಶಿವಯೋಗಿಗಳು. ಇಬ್ಬರೂ ರಾಜ ಗುರುಗಳಾಗಿದ್ದಾರೆ.[24] ಇಬ್ಬರೂ ಸ್ವವಿಷಯಗಳನ್ನು ಯಾವ ಸಂದೇಹಕ್ಕೂ ಎಡೆಯಿರದಂತೆ ಹೇಳಿಕೊಂಡಿದ್ದಾರೆ. ಅದರಲ್ಲೂ ವಿರಕ್ತ ತೋಂಟದಾರ್ಯನು ತನ್ನ ಕನ್ನಡ ಕೃತಿಗಳಲ್ಲಿ ಒಂದು ಕಾವ್ಯದಲ್ಲಿ ಬಳಸಿದ, ಪದ, ಪದಪುಂಜ ಹಾಗೂ ಪದ್ಯಭಾಗಗಳನ್ನು ತನ್ನ ಮತ್ತೊಂದು ಕಾವ್ಯದಲ್ಲಿ ಹಾಕಿದ್ದಾನೆ. ಒಂದೇ ಅಚ್ಚಿಗೆ ಬೇರೆ ಬೇರೆ ಹೆಸರಿನ ಎರಡು ಪಾಕಗಳನ್ನು ಹೊಯ್ದಂತಿದೆ.[25]

---

[19] ಸಿದ್ಧಾಂತಶಿಖಾಮಣಿವ್ಯಾಖ್ಯಾ ಅಥವಾ ತತ್ತ್ವಪ್ರದೀಪಿಕಾ-ಗ್ರಂಥಾರಂಭ ನೋಡಿ. ವೀರಶೈವಾನಂದ ಚಂದ್ರಿಕಾ, ವಾದಕಾಂಡ, ಪು. 2; ಪದ—ವ್ಯಾಕರಣ, ವಾಕ್ಯ—ಮೀಮಾಂಸೆ, ಪ್ರಮಾಣ—ತರ್ಕ—ಈ ಮೂರರಲ್ಲೂ ನಿಷ್ಣಾತನಾದವನು ಎಂದರ್ಥ.

[20] ಕ.ಕ.ಚ. II ಪು. 282; ವಿರೂಪಾಕ್ಷಯ್ಯನವರು, ಶತಕತ್ರಯ ವ್ಯಾಖ್ಯಾನದ ಪೀಠಿಕೆ. ಪು. VI; ಕೈವಲ್ಯಸಾರ. I, 1; ಸಿದ್ಧೇಶ್ವರ ಪುರಾಣದ ಪ್ರತಿಸಂಧಿಯ ಆದಿ ಮತ್ತು ಅಂತ್ಯದ ಪದ್ಯಗಳು; ಪಾಲ್ಕುರಿಕೆ ಸೋಮೇಶ್ವರ ಪುರಾಣದ ಪ್ರತಿಸಂಧಿಯ ಆದಿ ಮತ್ತು ಅಂತ್ಯದಲ್ಲಿ; ಸವ್ಯಾಖ್ಯಾನ ಮನೋವಿಜಯಂ, ಪೀಠಿಕಾ ಪ್ರಕರಣಂ-ಪ. 1; ಅದೇ. ಪ್ರತಿಪ್ರಕರಣದ ಅಂತ್ಯ; ಶತಕತ್ರಯದ ಆದಿ.

[21] ಕ.ಕ.ಚ. II, 292.

[22] ಸಂಸ್ಕೃತದಲ್ಲಿ ಮಾತ್ರ.

[23] ಉಭಯಭಾಷೆಗಳಲ್ಲೂ ಕಾವ್ಯಗಳನ್ನೂ ವ್ಯಾಖ್ಯಾನಗಳನ್ನೂ ರಚಿಸಿದ್ದಾನೆ.

[24] ಮರಿತೋಂಟದಾರ್ಯನು ಕೆಳದಿಯ ಕಿರಿಯ ಬಸವಪ್ಪನಾಯಕನಿಗೆ, ವಿರಕ್ತ ತೋಂಟದಾರ್ಯನು ಬಿಜ್ಜಾವರದ ಸಿದ್ಧಲಿಂಗ ಭೂಪಾಲನಿಗೆ.

[25] ಸಿದ್ಧೇಶ್ವರ ಪುರಾಣ — ಸೋಮೇಶ್ವರ ಪುರಾಣ
I-13, 14, 24 — I-11, 12, 15.
ಮತ್ತು ಎರಡೂ ಕಾವ್ಯಗಳ ಪ್ರತಿ ಸಂಧಿಯ ಅಂತ್ಯ ಇತ್ಯಾದಿ.

ಈ ಸುದೀರ್ಘವಾದ ವಿಚಾರದಿಂದ ಕೆಳದಿಯ ಆಸ್ಥಾನಕವಿ ಮರಿತೋಂಟ ದಾರ್ಯನು ಕನ್ನಡ ಗ್ರಂಥಗಳನ್ನು ಬರೆದಿಲ್ಲ; ಆತ ಬರೆದಿರುವುದು ಎರಡೇ ಎರಡು ಸಂಸ್ಕೃತ ಗ್ರಂಥಗಳು: ಒಂದು ವೀರಶೈವಾನಂದಚಂದ್ರಿಕಾ; ಮತ್ತೊಂದು ತತ್ತ್ವ ಪ್ರದೀಪಿಕಾ ಅಥವಾ ವೀರಶೈವಸಿದ್ಧಾಂತ ಶಿಖಾಮಣಿವ್ಯಾಖ್ಯಾ ಎಂಬುದು ಸ್ಪಷ್ಟ ವಾಗುತ್ತದೆ.

ಈಗ ನಮ್ಮ ವಿಚಾರ ಧಾರೆಯನ್ನು ಸಂಸ್ಕೃತ ಶ್ಲೋಕ ಮತ್ತು ಕನ್ನಡ ಟೀಕು – ಇವುಗಳನ್ನುಳ್ಳ ವೀರಶೈವ ಪ್ರದೀಪಿಕೆ[26] ಮತ್ತು ಷಟ್ಸ್ಥಲಕೌಮುದಿ[27] ಎಂಬ ಕೃತಿಗಳ ಕಡೆಗೆ ಹರಿಸೋಣ. ಇಲ್ಲಿ ಹೆಸರುಗಳು ಎರಡಿದ್ದರೂ ಕೃತಿ ಮಾತ್ರ ಒಂದೇ. ವಸ್ತು, ರಚನೆ, ವಿಭಜನೆ, ವ್ಯಾಖ್ಯಾನ ಎಲ್ಲದೂ ಒಂದೇ. 'ಋತಂ ಸತ್ಯಂ ಪರಬ್ರಹ್ಮ ಪುರುಷಂ ಸಾಂಬಮೀಶ್ವರಮ್'[28] ಎಂಬ ಶ್ಲೋಕದಿಂದ "ಇಕ್ಷು ರಂಭಾಫಲಾದೀನಿ ಸಖಂಡಾನಿ ನಿವೇದಯೇತ್"[29] ಎಂಬ ಶ್ಲೋಕದವರೆಗೆ ಎಲ್ಲಿಯೂ ಯಾವ ಬದಲಾವಣೆಯೂ ಇಲ್ಲ. ವೀರಶೈವ ಮತ ಪ್ರಕ್ರಿಯೆಗಳನ್ನೊಳಗೊಂಡ ಈ ಧರ್ಮಗ್ರಂಥದಲ್ಲಿ ಸ್ಥೂಲವಾಗಿ ಎರಡು ಭಾಗಗಳಿವೆ. ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ – ಎಂಬ ಷಟ್ಸ್ಥಲ ವಿಚಾರವು ಪೂರ್ವಾರ್ಧದಲ್ಲೂ, ಗುರು, ಲಿಂಗ, ಜಂಗಮ, ಭಸ್ಮ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದ – ಎಂಬ ಅಷ್ಟಾವರಣ ವಿಚಾರವು ಉತ್ತರಾರ್ಧದಲ್ಲೂ ಬಿತ್ತರಗೊಂಡಿವೆ. ಒಟ್ಟಿನಲ್ಲಿ ಹೇಳುವುದಾದರೆ ಮೇಲಿನ ಎರಡು ಹೆಸರುಗಳನ್ನುಳ್ಳ ಗ್ರಂಥ ಒಂದೇ; ಬೇರೆ ಬೇರೆ ಅಲ್ಲ; ಒಂದರ ಪ್ರತಿ ಮತ್ತೊಂದು.

---

[26] ಮಹಾರಾಜಾ ಕಾಲೇಜ್ ಮುನಿಷಿ ಶ್ರೀ ಪಿ. ಆರ್. ಕರಿಬಸವಶಾಸ್ತ್ರಿಗಳು ಸಂಗ್ರಹಿಸಿಕೊಟ್ಟ ಶ್ರೀ ವೆಂಕಟಾಚಲಂ ಶೆಟ್ಟರಿಂದ ಸ್ವಕೀಯ ಶ್ರೀ ಕೃಷ್ಣವಿಲಾಸ ಮುದ್ರಾಕ್ಷರ ಶಾಲೆ, ಮೈಸೂರು–ಇಲ್ಲಿ ಕ್ರಿ. ಶ. 1893ರಲ್ಲಿ ಮುದ್ರಿತವಾದ ಗ್ರಂಥ.

[27] ಮೈಸೂರು ಶ್ರೀ ಹೊಸಮಠಾಧ್ಯಕ್ಷರಾದ ಚರಮೂರ್ತಿ ಶ್ರೀ ಬಸವಲಿಂಗ ಸ್ವಾಮಿಗಳಿಂದ ಪರಿಶೋಧಿತವಾಗಿ, ಮೈಸೂರು ದೊಡ್ಡಪೇಟೆಯಲ್ಲಿರತಕ್ಕ ಶ್ರೀಮತ್ಕನ್ಯಕಾ ಪರಮೇಶ್ವರೀ ಪ್ರೆಸ್ಸಿನಲ್ಲಿ ಮುದ್ರಾಪಿತವಾಗಿ, ಶಾಲಿವಾಹನ ಶಕ 1850ನೆಯ ಪ್ರಭವ ನಾಮಸಂವತ್ಸರದ ಭಾದ್ರಪದಮಾಸ ಕ್ರಿ. ಶ. 1927ನೇ ಸೆಪ್ಟೆಂಬರ್‌ನಲ್ಲಿ ಪ್ರಕಟಿಸಲ್ಪಟ್ಟ ಗ್ರಂಥ.

[28] ಮೇಲಿನ ಎರಡೂ ಗ್ರಂಥಗಳ ಮೊದಲ ಪುಟಗಳು.

[29] ಮೇಲಿನ ಮೊದಲ ಗ್ರಂಥದ 132 ಪುಟ ಮತ್ತು ಎರಡನೆಯ ಗ್ರಂಥದ 123ನೆಯ ಪುಟಗಳನ್ನು ನೋಡಿ.

ಕೃತಿ ಒಂದೇ ಆಗಿದ್ದಲ್ಲಿ ಹೆಸರುಗಳು ಎರಡು ಬಂದದ್ದೇಕೆ? ಮೂಲಲೇಖಕನೇ ಎರಡೂ ಹೆಸರುಗಳನ್ನಿಟ್ಟನೇ? ಅಥವಾ ಮಾನ್ಯ ಸಂಪಾದಕರು ಕೊಟ್ಟ ನಾಮ ಧೇಯವೋ? ಒಂದು ವೇಳೆ ಸಂಪಾದಕರುಗಳು ಹೆಸರನ್ನು ಒದಲಾಯಿಸಿದ್ದರೆ, ಮೂಲಕರ್ತೃವು ಇಟ್ಟ ಹೆಸರೇನು? ಎಂಬೆಲ್ಲ ಪ್ರಶ್ನೆಗಳೇಳುತ್ತವೆ. ಆದರೆ ಇವು ಗಳಿಗೆ ಸ್ಪಷ್ಟ ಉತ್ತರ ಹುಡುಕುವುದು ಕಷ್ಟ. ಆದರೂ ಈ ಬಗ್ಗೆ ಒಂದು ಊಹೆ ಯನ್ನು ಹರಿಸಬಹುದು--

ಮೇಲಿನ ಧರ್ಮಗ್ರಂಥದ ಹೆಸರು "ಷಟ್ಸ್ಥಲಕೌಮುದಿ" ಎಂದೇ ಇದ್ದಿರಬೇಕು. 'ವೀರಶೈವ ಪ್ರದೀಪಿಕೆ' ಎಂಬ ಹೆಸರು, ಅದರ ಸಂಪಾದಕರಾದ ಶ್ರೀ ಪಿ.ಆರ್ ಕರಿಬಸವ ಶಾಸ್ತ್ರಿಗಳು ಅಥವಾ ಅದರ ಪ್ರಕಾಶಕರಾದ ಶ್ರೀ ವೆಂಕಟಾಚಲಂ ಶೆಟ್ಟರವರು ಕೊಟ್ಟದ್ದಾಗಿರಬೇಕು. ಈ ಊಹೆಗೆ ಕಾರಣ ಇಲ್ಲದಿಲ್ಲ. ಶ್ರೀ ಶಾಸ್ತ್ರಿಗಳವರು ತಾವು ಸಂಪಾದಿಸಿದ ಕೃತಿಯ ಆರಂಭದಲ್ಲಿ ಹೀಗೆ ಒಕ್ಕಣಿಕೆಯನ್ನು ರಚಿಸಿದ್ದಾರೆ- "ಶ್ರೀಮನ್ನಿರಾಭಾರ ವೀರಶೈವಾನ್ವಯ ಕೂಟಸ್ಥ ಪ್ರಭುದೇವ ಪರಂಪರಾಗತ ಶ್ರೀ ಮರಿತೋಂಟದಾರ್ಯರಿಂ ವೇದಾಗಮ ಪುರಾಣೋಪನಿಷದಾದಿ ಪ್ರಮಾಣಗಳತ್ತಣಿಂ ಸಂಗ್ರಹಿಸಿ ಕರ್ಣಾಟಕ ತಾತ್ಪರ್ಯ ಸಹಿತವಾಗಿ ರಚಿಸಲ್ಪಟ್ಟ 'ವೀರಶೈವ ಪ್ರದೀಪಿಕೆ"[30]. ಆದರೆ ಈ ಒಕ್ಕಣಿಕೆ ಮೂಲದಲ್ಲಿಲ್ಲ[31]. ಅಲ್ಲಿ 'ತೋಂಟದ ಸಿದ್ಧೇಶ್ವರನೆಂಬಾಚಾರ್ಯನಿಂ' ಎಂದಷ್ಟೇ ಇದೆ. 'ಮರಿ' ಎಂಬ ಉಪಸರ್ಗ ಅಂಟಿಕೊಂಡಿಲ್ಲ. ಅಲ್ಲದೆ "ಶ್ರೀಮನ್ನಿರಾಭಾರ ವೀರಶೈವಾನ್ವಯ" ಇತ್ಯಾದಿ ಯಾವ ಗುಣವಾಚಕ ಸರಣಿಯೂ ಇಲ್ಲ. ಆದ್ದರಿಂದ ಒಕ್ಕಣೆ ಶ್ರೀ ಶಾಸ್ತ್ರಿಗಳವರ ಸ್ವಕಪೋಲ ಕಲ್ಪಿತ ಇದ್ದಿರಬೇಕು.

ಎರಡನೆಯದಾಗಿ, ಪ್ರತಿ ಉಲ್ಲಾಸಾಂತ್ಯದ ಗದ್ಯವನ್ನು ಗಮನಿಸೋಣ- ಭಕ್ತಸ್ಥಲ ನಿರೂಪಣದ ಪ್ರಥಮೋಲ್ಲಾಸದ ಅಂತ್ಯದಲ್ಲಿ — "ಇತಿ ಶ್ರೀಮತ್ಪರಶಿವ ಚರಣಕಮಲಾರಾಧಕನಾದ ತತ್ಪ್ರಸಾದಾಸಾದಿತ ನಿರ್ಮಲ ಜ್ಞಾನವೈಭವನಾದ ನಿಖಿಲ ನಿಗಮಾಗಮೇತಿಹಾಸಸ್ಮೃತಿ ಪುರಾಣ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣನಾದ, ನಿರಾಭಾರ ವೀರಶೈವ ಸಾಮ್ರಾಜ್ಯ ಧುರಂಧರನಾದ ತೋಂಟದ ಸಿದ್ಧೇಶ್ವರನೆಂಬಾಚಾರ್ಯನಿಂ ಸಂಗ್ರಹಿಸಲ್ಪಟ್ಟ ವೀರಶೈವ ಪ್ರದೀಪಿಕೆಯೊಳ್ ಷಟ್ಸ್ಥಲ ಪ್ರಕರಣದಲ್ಲಿ ಭಕ್ತಸ್ಥಲ ನಿರೂಪಣಂ ಪ್ರಥಮೋಲ್ಲಾಸಂ ಸಂಪೂರ್ಣಮಾದುದು"[32] ಎಂದಿದೆ.

---

30 ಗ್ರಂಥಾರಂಭದ ಪುಟ

31 ಕೆಳದಿಯ ಬಳಿ ಇರುವ ಬನದ ಗದ್ದೆ ಮಠದಲ್ಲಿರುವ ಓಲೆ ಪ್ರತಿ

32 ವೀರಶೈವ ಪ್ರದೀಪಿಕೆ. ಪು. 20

ಇದೇ ರೀತಿಯ ಇತರ ಉಲ್ಲಾಸಗಳ ಅಂತ್ಯದ ಹೇಳಿಕೆಗಳನ್ನು ಗಮನಿಸೋಣ. ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಸ್ಥಲಗಳಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಮೇಲೆ ಹೇಳಿದ ಭಕ್ತಸ್ಥಲದ ಒಕ್ಕಣೆಯೇ ಇದೆ. ಮುಂದಿನ "ಅಷ್ಟಾವರಣ ನಿರೂಪಣ" ಭಾಗದ "ಗುರು"ವಿನ ಆವರಣದಲ್ಲಿ[33] ಮೇಲಿನ ಭಕ್ತಸ್ಥಲದ ಒಕ್ಕಣೆಯೇ ಇದೆ. ಆದರೆ 'ಲಿಂಗ ಲಕ್ಷಣ ನಿರೂಪಣಂ' ಎಂಬ ವಿಭಾಗದ ಅಂತ್ಯದಲ್ಲಿ "ಇಂತೀ ನಿರಾಭಾರ ವೀರಶೈವ ಸಾಮ್ರಾಜ್ಯಧುರಂಧರನಾದ ತೋಂಟದ ಸಿದ್ಧೇಶ್ವರ ನೆಂಬಾಚಾರ್ಯನಿಂ ಸಂಗ್ರಹಿಸಲ್ಪಟ್ಟ "ಷಟ್ಸ್ಥಲಕೌಮುದಿ"ಯೊಳ್ ಷಟ್ಸ್ಥಲ ಪ್ರಕರಣದಲ್ಲಿ ಅಷ್ಟಾವರಣ ಪ್ರಕರಣದೊಳ್ ಶಿವಲಿಂಗ ಲಕ್ಷಣ ನಿರೂಪಣಂ"[34] ಎಂದಿದೆ.

ಮೇಲಿನ ಎರಡನೆಯ ಅಧ್ಯಾಯ ಮತ್ತು ಮೂರನೆಯ ಅಧ್ಯಾಯದ 'ಗುರು'ವಿನ ವಿಭಾಗಗಳಲ್ಲೆಲ್ಲಾ "ವೀರಶೈವ ಪ್ರದೀಪಿಕೆಯೊಳ್" ಎಂದಿದ್ದುದು ಈ ಲಿಂಗಲಕ್ಷಣ ವಿಭಾಗದಲ್ಲಿ ಇದ್ದಕ್ಕಿದ್ದ ಹಾಗೆಯೇ "ಷಟ್ಸ್ಥಲ ಕೌಮುದಿಯೊಳ್" ಎಂದಾಗಿದೆ. ಇದೇ ರೀತಿ ಜಂಗಮಲಕ್ಷಣ, ಭಸ್ಮಧಾರಣವಿಧಾನ, ರುದ್ರಾಕ್ಷ ಲಕ್ಷಣಗಳ ಮೂರನೆಯ ಅಧ್ಯಾಯದ ಅಂತ್ಯದಲ್ಲಿ 'ವೀರಶೈವ ಪ್ರದೀಪಿಕೆಯೊಳ್' ಎಂತಲೂ, 'ಶಿವಪಂಚಾಕ್ಷರಿಮಂತ್ರ'ದ ವಿಭಾಗದಲ್ಲಿ ಮಾತ್ರ 'ಷಟ್ಸ್ಥಲಕೌಮುದಿ'[35] ಎಂತಲೂ ಇದೆ. ನಾಲ್ಕನೆಯ ಅಧ್ಯಾಯದ ಶಿವಪ್ರಸಾದ ಲಕ್ಷಣದಲ್ಲಿ 'ವೀರಶೈವ ಪ್ರದೀಪಿಕೆಯಲ್ಲಿ' ಎಂತಲೂ, ಐದನೆಯ ಅಧ್ಯಾಯದ 'ಶಿವಭಕ್ತಿ ಪ್ರಶಂಸೆ' ಮತ್ತು ಆರನೆಯ ಅಧ್ಯಾಯದ 'ವೇದಾಗಮೈಕ್ಯ' — ಇತ್ಯಾದಿಗಳಲ್ಲಿ "ವೀರಶೈವ (ಮತ) ಪ್ರದೀಪಿಕೆ" ಎಂತಲೂ ಇದೆ. ಏಳನೆಯ ಅಧ್ಯಾಯದ ಸತ್ಪಾತ್ರದಾನ ವಿಭಾಗದಲ್ಲಿ 'ಫಲಸ್ತುತಿ' ಮಾಡುವಾಗ—

> ಸಂಗೃಹ್ಯವೇದಾಗಮಾದಿ ಪ್ರಮಾಣೇಭ್ಯೋಯಥಾಮತಿ
> ತೋಂಟದಾರ್ಯೇಣ ರಚಿತಾ ವೀರಶೈವ ಪ್ರದೀಪಿಕಾ ||

—ಎಂದಿದೆ. ಇಲ್ಲಿ 'ತೋಂಟದಾರ್ಯ' ಎಂದಷ್ಟೇ ಇದೆ. "ಮರಿ ಅಥವಾ ವಿರಕ್ತ" ಎಂಬ ಯಾವ ಉಪಸರ್ಗವೂ ಅಂಟಿಕೊಂಡಿಲ್ಲ. ಈ ಅಧ್ಯಾಯದ ಅಂತ್ಯದಲ್ಲಿ "ಶ್ರೀಮತ್ಪರ ಶಿವಪ್ರಸಾದಾಸಾದಿತ ನಿರ್ಮಲಜ್ಞಾನ ವೈಭವನಾದ ತೋಂಟದ ಸಿದ್ಧೇಶ್ವರ

---

[33] ಅದೇ. ಪು. 56.

[34] ಅದೇ. ಪು. 69,

[35] ಅದೇ. ಪು. 110.

ನೆಂಬಾಚಾರ್ಯನಿಂ ಸಂಗ್ರಹಿಸಲ್ಪಟ್ಟ ವೀರಶೈವ ಪ್ರದೀಪಿಕೆಯು ಸಂಪೂರ್ಣ ಮಾದುದು."[36] ಎಂದಿದೆ. ಈ ಎಲ್ಲ ಉಲ್ಲಾಸಗಳ ಅಂತ್ಯದ ಗದ್ಯದಲ್ಲಿ 'ಏಕರೂಪತೆ' ಇಲ್ಲ. ಅಲ್ಲದೆ ಒಂದು ಕಡೆ 'ವೀರಶೈವ ಪ್ರದೀಪಿಕೆ'ಯೆಂದೂ, ಮತ್ತೊಂದು ಕಡೆ 'ಷಟ್ಸ್ಥಲಕೌಮುದಿ'ಯೆಂದೂ ಸಂಪಾದಕರು ಹೆಸರಿಸಿದ್ದಾರೆ. ಹೊಸಮಠಾಧ್ಯಕ್ಷರಾದ ಚರಮೂರ್ತಿ ಶ್ರೀ ಬಸವಲಿಂಗಸ್ವಾಮಿಗಳಿಂದ ಪರಿಶೋಧಿತವಾದ 'ಷಟ್‌ಸ್ಥಲ ಕೌಮುದಿ'ಯಲ್ಲಿ ಇಂತಹ ಯಾವ ಬದಲಾವಣೆಯೂ ಇಲ್ಲ. ಅಲ್ಲದೆ ಮೂಲವನ್ನೇ ಪಡಿಮೂಡಿಸಿರುವುದು ಕಂಡುಬರುತ್ತದೆ. ಆದ್ದರಿಂದ ಮೇಲೆ ತಿಳಿಸಿದ ಗ್ರಂಥದ ಹೆಸರು 'ಷಟ್ಸ್ಥಲ ಕೌಮುದಿ'ಯೇ ಹೊರತು 'ವೀರಶೈವ ಪ್ರದೀಪಿಕೆ' ಅಲ್ಲ.

ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವಿದೆ. ಅದು 'ವೀರಶೈವ ಪ್ರದೀಪಿಕೆ'ಯ ಅಂತ್ಯದಲ್ಲಿ ಬರುವ ಮೂರು ಹೊಸ ಪ್ರಕರಣಗಳಿಗೆ ಸಂಬಂಧಿಸಿದ್ದು— ಈ ವೀರಶೈವ ಪ್ರದೀಪಿಕೆಯ ಪ್ರಕಾಶಕರಾದ ಶ್ರೀ ವೆಂಕಟಾಚಲಂ ಶೆಟ್ಟರವರು ತಮ್ಮ ಪೀಠಿಕೆಯಲ್ಲಿ, "....ಪಿ. ಆರ್. ಕರಿಬಸವಶಾಸ್ತ್ರಿಗಳು ಇನ್ನೂ ಕೆಲವು ಪ್ರಕರಣಗಳನ್ನು ಸಂಗ್ರಹಿಸಿಕೊಡುತ್ತೇನೆ, ಅದರೊಡನೆ ಮುದ್ರಿಸಿರೆಂದು ಹೇಳಿ, ವೇದಾಗಮಾರ್ಥೈಕ್ಯ ಪ್ರತಿಪಾದನ, ಶಿವಭಕ್ತಿ ಮಹಿಮೆ, ಸತ್ಪಾತ್ರದಾನ ನಿರೂಪಣ ಎಂಬ ಮೂರು ಪ್ರಕರಣಗಳನ್ನು ಬರೆದುಕೊಟ್ಟರು. ಈ ಮೂರು ಪ್ರಕರಣಗಳನ್ನು ಕಡೆಗೆ ಸೇರಿಸಿ ಮುದ್ರಣವಂ ಮಾಡಿಸಿದೆನು" ಎಂದು ಹೇಳಿಕೊಂಡಿರುವುದರಿಂದ ಮೇಲಿನ ಮೂರು ಪ್ರಕರಣಗಳೂ ಶ್ರೀ ಶಾಸ್ತ್ರಿಗಳವರು ಸಂಗ್ರಹಿಸಿಕೊಟ್ಟವುಗಳು. ಈ ಮೂರು ಭಾಗಗಳೂ ಮೂಲದ ಷಟ್ಸ್ಥಲ ಕೌಮುದಿಯಲ್ಲಿಲ್ಲ. ಇವುಗಳನ್ನು ಶಿವರಹಸ್ಯ, ಶಿವಧರ್ಮೋತ್ತರ, ಆದಿತ್ಯಪುರಾಣ, ಸ್ಕಾಂದಪುರಾಣ, ಕೂರ್ಮಪುರಾಣ, ಕಾಳಿಕಾಖಂಡ, ವಾತುಲಾಗಮ – ಮೊದಲಾದ ಪ್ರಾಚೀನ ಗ್ರಂಥಗಳಿಂದ ಸಂಗ್ರಹಿಸಿದ್ದಾರೆ. ಅವುಗಳನ್ನೇ 'ಷಟ್ಸ್ಥಲ ಕೌಮುದಿ'ಗೆ ಸೇರಿಸಿ 'ವೀರಶೈವ ಪ್ರದೀಪಿಕೆ' ಎಂದು ಕರೆದಿರುವುದು ಕಂಡುಬರುತ್ತದೆ. ಈ ಮೇಲಿನ ಮೂರು ಪ್ರಕರಣಗಳ ಅಂತ್ಯದಲ್ಲಿ ಬರುವ "ಇದು ತೋಂಟದಾರ್ಯರಿಂ ರಚಿತವಾದ ವೀರಶೈವ ಪ್ರದೀಪಿಕೆಯೊಳ್....ಪ್ರಕರಣವು ಸಮಾಪ್ತವು" ಎಂಬ ಗದ್ಯವನ್ನೂ ಸೇರಿಸಿದ್ದಾರೆ. ಅಂದಮೇಲೆ, ಈ ಕಡೆಯ ಮೂರು ಪ್ರಕರಣಗಳೂ ಷಟ್ಸ್ಥಲಕೌಮುದಿಕಾರನು ಬರೆದವುಗಳಲ್ಲ ಎಂದು ಸ್ಪಷ್ಟವಾಗುತ್ತದೆ.

ಈ ಷಟ್ಸ್ಥಲ ಕೌಮುದಿಯ ಕರ್ತೃ ಯಾರು? ವಿರಕ್ತ ತೋಂಟದಾರ್ಯನೇ? ಅಥವಾ ಮರಿತೋಂಟದಾರ್ಯನೇ? ಎಂಬುದು ನಮ್ಮ ಮುಂದಿನ ಪ್ರಶ್ನೆ.

---

[36] ಅದೇ. ಪು. 154.

ಶ್ರೀ ಪಿ. ಆರ್. ಕರಿಬಸವಶಾಸ್ತ್ರಿಗಳು 'ಮರಿತೋಂಟದಾರ್ಯ'ನೆಂದು ಹೇಳಿದರೂ, ಅದು ಅವಸದ್ದಲ್ಲ. ಕೃತಿಯ ಹೆಸರು ಹೇಗೆ ಷಟ್ಸ್ಥಲ ಕೌಮುದಿಯಿಂದ 'ವೀರಶೈವ ಪ್ರದೀಪಿಕೆ'ಗೆ ಬದಲಾಯಿತೋ ಅದೇ ರೀತಿ ತೋಂಟದ ಸಿದ್ಧೇಶ್ವರನೆಂದಿದ್ದುದು ವಿರಕ್ತ ತೋಂಟದಾರ್ಯನಾಗದೆ ಮರಿತೋಂಟದಾರ್ಯನೆಂದಾಗಿದೆ ಎಂದೆನಿಸುತ್ತದೆ. ಈ ರೀತಿ ಹೇಳಲು ನಮಗಿರುವ ಪ್ರಬಲ ಆಧಾರವೆಂದರೆ ಜಂಗಮ ಪಾದೋದಕ ವಿಚಾರಕ್ಕೆ ಸಂಬಂಧಿಸಿದುದು. ಮರಿತೋಂಟದಾರ್ಯನ ವೀರಶೈವಾನಂದ ಚಂದ್ರಿಕೆಯಲ್ಲಿ ಬರುವ ಪಾದೋದಕದ ವೈಶಿಷ್ಟ್ಯಕ್ಕೂ[37] ಈ ಷಟ್ಸ್ಥಲ ಕೌಮುದಿಯಲ್ಲಿ ಬರುವ ಪಾದೋದಕದ ಉಗ್ರತಮ ಖಂಡನೆಗೂ[38] ಹೋಲಿಸಿ ನೋಡಿದರೆ ಇವು ಏಕ ಕರ್ತೃಕಗಳಲ್ಲ ಎಂಬುದು ಸ್ಪಷ್ಟವಾಗುತ್ತದೆ. "....ವೀರಶೈವಾನಂದ ಚಂದ್ರಿಕಾ ಎಂಬ ಗ್ರಂಥದಲ್ಲಿಯಾದರೋ ಪಾದೋದಕ ಪ್ರಸಾದ ನಿಷೇವಣ ವಿಚಾರವು ವಿಸ್ತಾರವಾಗಿ ಕಥಿತವಾಗಿದೆ. ಆದರೂ ಅಲ್ಲಿ ಈ ಷಟ್ಸ್ಥಲ ಕೌಮುದೀ ಗ್ರನ್ಥಕಾರನಿಂದ ಬಣ್ಣಿಸಲ್ಪಟ್ಟರತಕ್ಕ ನಡವಳಿಕೆಗಳ ಪ್ರಸ್ತಾಪವು ಮಾಡಲ್ಪಟ್ಟಿಲ್ಲವು."[39] ಕೌಮುದಿಕಾರನಂತೂ ಜಂಗಮ ಪಾದೋದಕದ ಬಗ್ಗೆ, ಅದರಲ್ಲೂ ಪಾದೋದಕವನ್ನು ಲಿಂಗದ ಮೇಲೆ ಎರೆಯುವುದರ ಬಗ್ಗೆ ನಿಷ್ಠುರದ ಮಾತುಗಳನ್ನೇ ಆಡಿದ್ದಾನೆ. "ಪಾದಪೂಜೆಯಂ ಮಾಡುವ ಸನ್ದರ್ಭದಲ್ಲಿ ಕೆಲವರು ವಿತಂಡಾವಾದಿಗಳು ಪಾತ್ರದಲ್ಲುದಕವನಿರಿಸಿಕೊಂಡು, ಪ್ರಥಮದಲ್ಲಿ ಆ ಪಾತ್ರೆಗೆ ಆಪಾದ ತಲವಂ ಸಮ್ಮಾರ್ಜಿಸಿ, ಬಳಿಕ ಆ ಸಮ್ಮಾರ್ಜನೋದಕದಿಂದಲೇ ಪಾದದ್ವಯದಂಗುಷ್ಠ ದ್ವಯವಂ ಸಮ್ಮಾರ್ಜಿಸಿ, ಬಳಿಕ ಆ ಪಾತ್ರದಲ್ಲೂ ಉದಕದಿಂದಲೇ ಪಾದದ್ವಯದ ಅಂಗುಷ್ಠಾದಿಕ ನಿಷ್ಠಾಂತವಾಗಿ ಆ ಪಾತ್ರೆಗೆ ಸಮ್ಮಾರ್ಜಿಸಿ, ಪುನಃ ಆ ಉದಕ ದಿಂದಲೇ ಪಾದದ್ವಯದಂಗುಷ್ಠಕ್ಕೆ ಅಭಿಷೇಕವಂ ಮಾಡಿ, ಅದನ್ನು ತೀರ್ಥವನ್ನಾಗಿ ಭ್ರಮಿಸಿ ಸ್ವೀಕರಿಸುತ್ತಾರೆ... ಈ ದುರಾಚಾರವು ಪಾದಪ್ರಕ್ಷಾಳನೋದಕದಿಂ ಮುಖಕ್ಷಾಳನಂ ಗೈದು, ಆಪಾದಮುಖಪ್ರಕ್ಷಾಳನೋಭಯೋದಕದಿಂ ಗಂಡೂಷಿಸಿ, ಪಾದಪ್ರಕ್ಷಾಳನ, ಮುಖಪ್ರಕ್ಷಾಳನ, ಗಂಡೂಷ ಈ ಮೂರು ಪ್ರಕಾರದ ಸಂಸ್ಕಾರವುಳ್ಳ ಉದಕವಂ ಪಾನ ಮಾಡಿದ ಹಾಗೆ ಆಗುತ್ತದೆ."[40] ಈ ಅಭಿಪ್ರಾಯಕ್ಕೂ ವೀರಶೈವಾ ನಂದ ಚಂದ್ರಿಕೆಯ ಜಂಗಮ ಹಿರಿಮೆಯ ಅಭಿಪ್ರಾಯಕ್ಕೂ[41] ಸಂಪೂರ್ಣ ವಿರೋಧ

---

[37] ಮೈಸೂರು ಪ್ರಾಚ್ಯಗ್ರಂಥ ಸಂಶೋಧನಾ ಸಂಸ್ಥೆಯಲ್ಲಿರುವ ವೀರಶೈವಾನಂದ ಚಂದ್ರಿಕೆಯ ಕ್ರಿಯಾಕಾಂಡದ ಹಸ್ತಪ್ರತಿಯಲ್ಲಿನ ಅಷ್ಟಾವರಣ ಪ್ರಕರಣ ನೋಡಿ.

[38] ಪಾದೋದಕಸ್ಥಲಮ್. ಪು. 102-117.

[39] ಶ್ರೀ ಬಸವಲಿಂಗಸ್ವಾಮಿಗಳು, ಷಟ್ಸ್ಥಲ ಕೌಮುದಿ, ಪ್ರಸ್ತಾವನೆ ಪು. 1.

[40] ಅದೇ. ಪು. 111; ವೀರಶೈವ ಪ್ರದೀಪಿಕೆ. ಪು. 115-116.

[41] ಕ್ರಿಯಾಕಾಂಡ-ಅಷ್ಟಾವರಣ ಪ್ರಕರಣ

ವಿದೆ. ಜಂಗಮನು ಶಿವಾಂಶಸಂಭೂತನೂ, ಶಿವಸ್ವರೂಪಿಯೂ ಆದವನೆಂಬ ಭಾವನೆ ಚಂದ್ರಿಕೆಯನ್ನೋದಿದಾಗ ಬಂದರೆ, ಜಂಗಮ ಎಷ್ಟೇ ದೊಡ್ಡವನಾದರೂ, ಶಿವನಿಗಿಂತಲೂ ಶ್ರೇಷ್ಠನಲ್ಲ ಎಂಬ ಭಾವನೆಯು ಕೌಮುದಿಯನ್ನೋದಿದಾಗ ಬರುತ್ತದೆ. ಇವೆರಡೂ ಏಕಕರ್ತೃಕಕೃತಗಳಾಗಿದ್ದಿದ್ದರೆ ಈ ರೀತಿಯ ವಿರೋಧಾಭಿಪ್ರಾಯಗಳು ಬರಲು ಅವಕಾಶವಿರುತ್ತಿರಲಿಲ್ಲ. ಒಟ್ಟಿನಲ್ಲಿ ವೀರಶೈವಾನಂದ ಚಂದ್ರಿಕೆಯ ಕರ್ತೃ ಮರಿತೋಂಟದಾರ್ಯನೇ ಎಂದು ನಮಗೆ ಸ್ಪಷ್ಟವಾಗಿ ತಿಳಿಯುವುದರಿಂದ, "ಷಟ್ಸ್ಥಲ ಕೌಮುದಿ"ಯು ತೋಂಟದ ಸಿದ್ಧೇಶ್ವರನೆಂಬ ಹೆಸರಿನ ವಿರಕ್ತ ತೋಂಟದಾರ್ಯನದೆಂದು ಊಹಿಸಬಹುದಾಗಿದೆ.

## ಒಂದು ವಿಚಾರ:

ವೈ. ನಾಗೇಶಶಾಸ್ತ್ರಿಗಳು, ಪಿ. ಆರ್. ಕರಿಬಸವಶಾಸ್ತ್ರಿಗಳು ಇಟ್ಟ ತಪ್ಪು ಹೆಜ್ಜೆಗಳನ್ನು ಗುರುತಿಸಿ ಒಂದೆಡೆಯಲ್ಲಿ "ಈ ವಿಚಾರದಿಂದ ಸಿದ್ಧೇಶ್ವರ ಪುರಾಣವನ್ನು ಬರೆದ ವಿರಕ್ತ ತೋಂಟದಾರ್ಯನಿಗಿಂತಲೂ ಮರಿತೋಂಟದಾರ್ಯನು ಬೇರೆಯವನೆಂಬುದು ಸ್ಫುಟವಾಗುವುದು"[42] ಎಂದಿದ್ದಾರೆ. ಆದರೆ ಅದೇನು ಕಾರಣವೋ ಮತ್ತೊಂದೆಡೆಯಲ್ಲಿ ತಾವೇ ಶ್ರುತಿ ತಪ್ಪಿ ಹಾಡಿದ್ದಾರೆ. ಮೊದಲನೆಯದಾಗಿ, ಶ್ರೀ ಶಾಸ್ತ್ರಿಗಳವರು "ಕನ್ನಡ ವೀರಶೈವಾನಂದ ಚಂದ್ರಿಕೆ" ಎಂಬ ಭಾಷಾಂತರ ಗ್ರಂಥದ ಆದಿಯಲ್ಲಿ ತಮ್ಮ ಅಭಿಪ್ರಾಯವನ್ನು ಸೂಚಿಸುವೆಡೆಯಲ್ಲಿ ಮರಿತೋಂಟದಾರ್ಯನಿಗೂ, ವಿರಕ್ತ ತೋಂಟದಾರ್ಯನಿಗೂ ಭೇದವಿದೆಯೆಂದು ಹೇಳಲಿಲ್ಲ.[43] ಈ ಕನ್ನಡ ವೀರಶೈವಾನಂದ ಚಂದ್ರಿಕೆಯ ಗ್ರಂಥಕರ್ತರಾದ ಶ್ರೀ ಸಿರಸಿ ಗುರುಶಾಂತಶಾಸ್ತ್ರಿಗಳವರು ಬೇಲಿಮಠದ ಶ್ರೀ ಸಿದ್ಧಲಿಂಗಸ್ವಾಮಿಯವರ ಸಂಕ್ಷಿಪ್ತ ಪರಿಚಯವನ್ನು ಬರೆಯುವೆಡೆಯಲ್ಲಿ ಮರಿತೋಂಟದಾರ್ಯ ಮತ್ತು ಸಿದ್ಧೇಶ್ವರ ಪುರಾಣದ ವಿರಕ್ತ ತೋಂಟದಾರ್ಯ ಇಬ್ಬರನ್ನೂ

---

[42] ಶ್ರೀ ಸಿದ್ಧೇಶ್ವರ ಪುರಾಣವು, ಪ್ರಸ್ತಾವನೆ, ಪು. 5.

[43] ಕನ್ನಡ ವೀರಶೈವಾನಂದ ಚಂದ್ರಿಕೆ (ವಾದಕಾಂಡ) ಸಂ. ಸಿರಸಿ ಗುರುಶಾಂತಶಾಸ್ತ್ರಿಗಳವರು, ಪ್ರಕಾಶಕರು : ಬೆಂಗಳೂರು ನಗರದ ಬೇಲಿಮಠದ ಷ॥ ಬ್ರ॥ ನಿ॥ ಪ್ರ॥ ಶ್ರೀ ಚರಮೂರ್ತಿ ಸಿದ್ಧಲಿಂಗಸ್ವಾಮಿಗಳು. ಶ್ರೀ ಶಾಸ್ತ್ರಿಗಳವರು ಬರೆದ ವಿಮರ್ಶೆ ವಿಭಾಗ ನೋಡಿ. 1960.

ಕೊಡಿಸಿದ್ದಾರೆ.[44] ಇದನ್ನು ವೈ. ನಾಗೇಶಶಾಸ್ತ್ರಿಗಳು ಖಂಡಿಸಬಹುದಿತ್ತು. ಆದರೆ ಸುಮ್ಮನಿದ್ದಾರೆ. ಈ ಗ್ರಂಥ ಅಚ್ಚಾದದ್ದು ೧೯೬೦ ರಲ್ಲಿ.

ಇದೇ ರೀತಿಯ ಮತ್ತೊಂದು ನಿದರ್ಶನ: ಶ್ರೀಯುತ ಸಿ. ವ. ಚೆನ್ನಬಸವೇಶ್ವರ ಎಂಬುವರ ಪುರುಷಸೂಕ್ತ ಗ್ರಂಥಕ್ಕೆ ಬರೆದ ಪ್ರಸ್ತಾವನೆಯಲ್ಲಿ ಶ್ರೀ ಶಾಸ್ತ್ರಿಗಳವರು ವಿರಕ್ತ ತೋಂಟದಾರ್ಯನ ಶ್ರೀ ಸಿದ್ಧೇಶ್ವರ ಪುರಾಣದ ಒಂದು ಪದ್ಯವನ್ನು ಉದ್ಧರಿಸಿ "ಶ್ರೀ ಮರಿತೋಂಟದಾರ್ಯರ ಸಿದ್ಧೇಶ್ವರ ಪುರಾಣ"[45] ಎಂದಿದ್ದಾರೆ. ಈ ರೀತಿಯಲ್ಲಿ ಕಣ್ಣು ಬಿಟ್ಟುಕೊಂಡೇ ಜಾರಿರುವುದಕ್ಕೆ ಕಾರಣ ತಿಳಿಯದು.

ಎರಡನೆಯದಾಗಿ, ಶ್ರೀ ವೈ. ನಾಗೇಶಶಾಸ್ತ್ರಿಗಳವರು "೧೬ ನೆಯ ಶತಮಾನ ದಲ್ಲಿದ್ದು, ಶ್ರೀ ಸಿದ್ಧಲಿಂಗಯತಿಗಳಿಂದ ೮ನೆಯ ಪಟ್ಟಾಧಿಕಾರಿಗಳಾದ ಶ್ರೀ ಅರ್ಧನಾರೀ ಶ್ವರ ಸ್ವಾಮಿಗಳಿಂದ ಅನುಗ್ರಹಿತರಾಗಿ ವೀರಶೈವಾನಂದ ಚಂದ್ರಿಕೆ, ವೀರಶೈವ ಪ್ರದೀಪಿಕೆ, ಸಿದ್ಧಾಂತ ಶಿಖಾಮಣಿಯ ತತ್ತ್ವಪ್ರದೀಪಿಕೆಯೆಂಬ ಸಂಸ್ಕೃತವ್ಯಾಖ್ಯೆ –ಇವೇ ಮೊದಲಾದ ಸಂಸ್ಕೃತ ಗ್ರಂಥಗಳನ್ನು ಬರೆದವರು ಮರಿತೋಂಟದಾರ್ಯರು. ಇವರು ವಿರಕ್ತ ತೋಂಟದಾರ್ಯರಿಗಿಂತಲೂ ಬೇರೆಯವರೆಂಬುದು ವಿದಿತವಾಗುವುದು"[46] ಎನ್ನುವಾಗ ಒಂದು ವಿಷಯವನ್ನು ಅಷ್ಟಾಗಿ ಗಮನಿಸಿದಂತಿಲ್ಲ. ಅದು "ವೀರಶೈವ ಪ್ರದೀಪಿಕೆ"ಗೆ ಸಂಬಂಧಿಸಿದ್ದು. ಮೊದಲೇ ತಿಳಿಸಿದಂತೆ ವೀರಶೈವಾನಂದ ಚಂದ್ರಿಕಾ ಮತ್ತು ತತ್ತ್ವಪ್ರದೀಪಿಕಾ ಇವೆರಡೇ ಮರಿತೋಂಟದಾರ್ಯನ ಕೊಡುಗೆ, ಮಿಕ್ಕ ಎಲ್ಲ ಕನ್ನಡ ಮತ್ತು ಸಂಸ್ಕೃತ ಗ್ರಂಥಗಳೂ ವಿರಕ್ತ ತೋಂಟದಾರ್ಯನವು.

ಈಗ ಮರಿತೋಂಟದಾರ್ಯ ಮತ್ತು ವಿರಕ್ತ ತೋಂಟದಾರ್ಯ–ಇವರಿಗೆ ಸಂಬಂಧಿಸಿದ ಹಾಗೂ ಇಲ್ಲಿನವರೆಗೂ ಚರ್ಚಿಸಿದ ವಿಷಯಗಳನ್ನು ಸ್ಥೂಲವಾಗಿ ಹೀಗೆ ಪಟ್ಟಿ ಮಾಡ ಬಹುದು :—

---

[44] ಅದೇ. ಪು. 33.

[45] ಸಿ. ವ. ಚೆನ್ನಬಸವೇಶ್ವರ, ಬಳ್ಳಾರಿ, ಪುರುಷಸೂಕ್ತ (ಶಿವಾದ್ವೈತ ವ್ಯಾಖ್ಯೆ) ಶ್ರೀ ಮಹಾಂತೇಶ ಗ್ರಂಥಮಾಲೆ, ಶ್ರೀ ಮಚ್ಚರಣಗಿರಿ ಶಿವಯೋಗ, ಬೃಹನ್ಮಠ, ಹಾಲ್ವಿ, 1959. ಪ್ರಸ್ತಾವನೆ. ಪು. XVII - XVIII.

[46] ಶ್ರೀ ಸಿದ್ಧೇಶ್ವರ ಪುರಾಣವು, ಪ್ರಸ್ತಾವನೆ, ಪು. 5.

| ಕ್ರಮ ಸಂಖ್ಯೆ | ವಿಷಯ | ಕವಿ | ಕವಿ |
|---|---|---|---|
| ೧) | ಕವಿಯ ಹೆಸರು | ಮರಿತೋಂಟದಾರ್ಯ | ವಿರಕ್ತತೋಂಟದಾರ್ಯ |
| ೨) | ಉಪನಾಮಗಳು | ತೋಂಟದಸ್ವಾಮಿ | ತೋಂಟದ ಸಿದ್ಧಲಿಂಗ, ತೋಂಟದ ಸಿದ್ಧಲಿಂಗ ಶಿವಯೋಗೀಂದ್ರ, ಸಿದ್ಧಲಿಂಗ ದೇಶಿಕ |
| ೩) | ಸ್ಥಳ | ಡಂಬಳದಿಂದ ಕೆಳದಿಗೆ | ನಂದಿಪುರದಿಂದ ಬಿಜ್ಜಾವರಕ್ಕೆ |
| ೪) | ಕಾಲ | ಕ್ರಿ. ಶ. ೧೭೫೦ | ಕ್ರಿ. ಶ. ೧೫೬೦ |
| ೫) | ಅಂಕಿತ | ಇಲ್ಲ | “ ನಿರಂಜನಲಿಂಗ ” |
| ೬) | ವಿಶೇಷಣ | ಪದವಾಕ್ಯ ಪ್ರಮಾಣ<br>ಪಾರಾವಾರ ಪಾರೀಣ | ಗುರುನಿರಂಜನಲಿಂಗಪದಕಮಲ<br>ಸೌರಭಾಸಕ್ತಷಟ್ಪದ, ಷಟ್ಸ್ಥಲಾಚಾರ ಸಂಪನ್ನ, ಶೈವ ಪಂಚಾಕ್ಷರೀಮಂತ್ರ ಹೃದಯ, ಅಖಿಲ ಶಾಸ್ತ್ರಾರ್ಥಕೋವಿದ |
| ೭) | ಗುರುಪರಂಪರೆ | ಶ್ರೀ ಸಿದ್ಧೇಶ್ವರ ಶಿವಯೋಗಿಗಳು<br>\|<br>ಕೌದೀಮಹಾಂತ ಸ್ವಾಮಿಗಳು<br>\|<br>ಅರ್ಧನಾರೀಶ್ವರ ಸ್ವಾಮಿಗಳು<br>\|<br>ಮರಿತೋಂಟದಾರ್ಯರು | ಸಿದ್ಧಲಿಂಗಯತಿಗಳು<br>\|<br>ಬೋಳಬಸವಸ್ವಾಮಿಗಳು<br>\|<br>ಗೂಳೂರು ಸಿದ್ಧವೀರೇಶ್ವರ ಸ್ವಾಮಿಗಳು<br>\|<br>ವಿರಕ್ತ ತೋಂಟದಾರ್ಯರು |

| ಕ್ರಮ ಸಂಖ್ಯೆ | ವಿಷಯ | ಕವಿ | ಕವಿ |
|---|---|---|---|
| ೮) | ರಾಜಾಶ್ರಯ | ಕೆಳದಿಯ ಕಿರಿಯ ಬಸವಪ್ಪನಾಯಕ | ಬಿಜ್ಜಾವರದ ಶ್ರೀ ತೋಂಟದ ಸಿದ್ಧಲಿಂಗಭೂಪಾಲ |
| ೯) | ಕೃತಿಗಳು | ೧) ತತ್ತ್ವಪ್ರದೀಪಿಕಾ ಅಥವಾ ವೀರಶೈವಸಿದ್ಧಾಂತ ಶಿಖಾಮಣಿ ವ್ಯಾಖ್ಯಾ (ಸಂಸ್ಕೃತ)<br>೨) ವೀರಶೈವಾನಂದ ಚಂದ್ರಿಕಾ (ಸಂಸ್ಕೃತ) | ೧) ಶ್ರೀ ಸಿದ್ಧೇಶ್ವರ ಪುರಾಣ (ಕನ್ನಡ)<br>೨) ಚಿದಾನಂದ ಸಿಂಧು (ಕನ್ನಡ)<br>೩) ಪಾಲ್ಕುರಿಕೆ ಸೋಮೇಶ್ವರ ಪುರಾಣ (ಕನ್ನಡ)<br>೪) ಸಿದ್ಧಲಿಂಗೇಶ್ವರ ಶತಕ (ಕನ್ನಡ)<br>೫) ಕರ್ನಾಟಕ ಶಬ್ದಮಂಜರಿ (ಕನ್ನಡ)<br>೬) ಮನೋವಿಜಯ ವ್ಯಾಖ್ಯಾ (ಕನ್ನಡ)<br>೭) ಶತಕತ್ರಯ ವ್ಯಾಖ್ಯಾ (ಕನ್ನಡ)<br>೮) ಪಂಚಪ್ರಕಾರ ಗದ್ಯ (ಕನ್ನಡ)<br>೯) ಕೈವಲ್ಯಸಾರ (ಸಂಸ್ಕೃತ)<br>೧೦) ಷಟ್ಸ್ಥಲ ದೀಪಿಕಾ (ಸಂಸ್ಕೃತ ಮತ್ತು ಕನ್ನಡ)<br>೧೧) ಸರ್ವಾಗಮಸಾರ (ಸಂಸ್ಕೃತ ಮತ್ತು ಕನ್ನಡ)<br>೧೨) ಷಟ್ಸ್ಥಲ ಕೌಮುದಿ (ಸಂಸ್ಕೃತ ಮತ್ತು ಕನ್ನಡ) |
| ೧೦) | ಅರ್ಹತೆ | ಪ್ರಕಾಂಡ ಪಂಡಿತ | ಪ್ರತಿಭಾಶಾಲಿಕವಿ |

## ii) ಕವಿ ಲಿಂಗಣ್ಣ, ವೆಂಕ ಮತ್ತು ಸುಬ್ಬ

ತೆಲುಗಿನ "ಜಕ್ಕುಲು" ಎಂಬ ಪದವು "ಯಕ್ಷ" ಶಬ್ದಭವವೇ ಅಲ್ಲವೇ ಎಂಬ ವಾದವಿರುವಂತೆ[47] ಅದೇ ಯಕ್ಷಗಾನ ಪ್ರಸಂಗಗಳು ಹಾಗೂ ಅವುಗಳ ಕರ್ತೃಗಳ ಬಗ್ಗೆ ಕನ್ನಡದಲ್ಲಿ ಒಂದು ದೊಡ್ಡದಾದ ವಿವಾದವೇ ಎದ್ದಿದೆ. ಡಾ|| ಕೋಟ ಶಿವರಾಮ ಕಾರಂತರೂ, ಶ್ರೀ ಕುಕ್ಕಿಲ ಕೃಷ್ಣಭಟ್ಟರೂ ಈ ಬಗ್ಗೆ ಸಾಕಷ್ಟು ಚರ್ಚಿಸಿದ್ದಾರೆ.[48] ಮೊದಲನೆಯದಾಗಿ, ಯಕ್ಷಗಾನವನ್ನು ಕುರಿತದ್ದು : ಶಬ್ದದ ಅವತಾರ, ಕನ್ನಡನಾಡಿನ ಕಲೆಯೋ ಅಥವಾ ಎರವಲು ತಂದದ್ದೋ ಇತ್ಯಾದಿ ಅಂಶಗಳನ್ನೂ; ಎರಡನೆಯದಾಗಿ, ಹಲವು ಯಕ್ಷಗಾನ ನಾಟಕಗಳ ಕರ್ತೃಗಳ ಬಗ್ಗೆ—ಮುಖ್ಯವಾಗಿ "ಸುಬ್ಬ" ಎಂಬುವನ ವಿಚಾರದಲ್ಲಿ–ಸಾಕಷ್ಟು ಚರ್ಚೆ ನಡೆಸಿದ್ದಾರೆ.[49] ಆ ಬಗೆಗೆ ವಿಚಾರ ಮಾಡೋಣ.

ಅ) ಮೊದಲನೆಯದಾಗಿ, ಒಬ್ಬ ವೆಂಕನೆಂಬುವನು ತನ್ನ ತಂದೆ ಸುಬ್ಬನನ್ನೂ ತಾತ ವೆಂಕಾರ್ಯನನ್ನೂ ತನ್ನ "ಮೈರಾವಣ ಕಾಳಗ"ದಲ್ಲಿ ಸ್ಮರಿಸಿರುವುದನ್ನು ನೋಡಬಹುದು.

ಭೂಕವಿಗಳೊಳ್ ಶೋಭಿಸುತ ಮೆರೆವ ಬಾಲವಾ
ಲ್ಮೀಕಿಯೆಂದೆನಿಸಿ ಸಂಸ್ಕೃತದ ರಾಮಚರಿ
ತಾ ಕಥಾಸಾರಮಂ ಕರ್ಣಾಟಕಾವ್ಯದಿಂದತಿಮನೋಹರವಾಗಿಯೆ ||
ಪ್ರಾಕ್‌ವೃದ್ಧರಬಲೆಯರು ಎಲ್ಲರುಂ ತಿಳಿವಂತೆ
ಪ್ರಾಕಟಿಸಿದುರು ಮಹಿಮ ಹಂಪೆಯಾತ್ಮಜ ಸದ್ವಿ
ವೇಕಿ ವೆಂಕಾರ್ಯ ಪ್ರಧಾನಗಂ ತುಳಿಲ್ಗೈದುಸುರ್ವೆನೀ ಚಾರಿತ್ರಮಂ ||

—ಯಕ್ಷಗಾನ ಬಯಲಾಟ ಪು. ೨೪೬ (೧೯೬೩.)

---

[47] ಸುರವರಂ ಪ್ರತಾಪರೆಡ್ಡಿ ಮತ್ತು ರಾಳ್ಳಪಲ್ಲಿ ಅನಂತಕೃಷ್ಣಶರ್ಮ, ಆಂಧ್ರುಲ ಸಾಂಘಿಕ ಚರಿತ್ರ ನೋಡಿ.

[48] ಶಿವರಾಮ ಕಾರಂತ, ಯಕ್ಷಗಾನ ಬಯಲಾಟ (1963) ಮತ್ತು ಕುಕ್ಕಿಲ ಕೃಷ್ಣಭಟ್ಟ, ಮಧುಪುರ ಹಾಗೂ ರಾಷ್ಟ್ರಮತ ವಾರಪತ್ರಿಕೆ, ವಿಶೇಷಾಂಕ 1960-61 ಜನವರಿ (ಸಂ. 8) ಮಂಗಳೂರು; ಮತ್ತು ನಮ್ಮ ಅಜಪುರ (ನಮ್ಮ ಬ್ರಹ್ಮಾವರ) ಕರ್ಣಾಟಕ ಸಂಘ, ಬ್ರಹ್ಮಾವರ, 1961.

[49] ಯಕ್ಷಗಾನ ಬಯಲಾಟ ಪು. 41-51 ಮತ್ತು ಕುಂಬಳೆ ಪಾರ್ತಿಸುಬ್ಬ ಕವಿಯ ವಿಚಾರ 31-5-61ರಲ್ಲಿ ಜರುಗಿದ ಸುಬ್ಬ ಕವಿ ಜಯಂತೀ ಸಮಾರಂಭದ ಕುಕ್ಕಿಲರ ಅಧ್ಯಕ್ಷ ಭಾಷಣ.

ಮತ್ತು

ಅಜಪುರದ ಬುಧಕುಲದೊಳುದಿಸಿದ
ಸುಜನ ಸುರಧೇನು ಸುಬ್ಬಾಭಿದಾನನ ನಿಜಪದಯುಗಗಳನು

—ಅದೇ ಪು. ೨೪೪

ಈ ಪದ್ಯಗಳನ್ನು ಆಧರಿಸಿ ಈ ಕವಿಯ ವಂಶವೃಕ್ಷವನ್ನು ಹೀಗೆ ಹೇಳಬಹುದು :




ಇವರಲ್ಲಿ ಮೊದಲನೆಯವನಾದ ಹಂಪೆಯಾತ್ಮನ ಬಗ್ಗೆ ಹೆಚ್ಚು ವಿವರ ಇಲ್ಲ. ಎರಡನೆಯವನಾದ ವೆಂಕಾರ್ಯನ ಬಗ್ಗೆ ತುಂಬಾ ಪ್ರವರ ಇದೆ. ಈತ "ಬಾಲ ವಾಲ್ಮೀಕಿ" ಎಂದು ಖ್ಯಾತನಾದ "ಪ್ರಧಾನಿ" ಎಂದರೆ ಮಹಾಮಂತ್ರಿ. ಎಲ್ಲಿ? ಯಾರಿಗೆ? ಎಂಬುವವರ ಬಗೆಗೆ ಕಾರಂತರು ಕೆಳದಿ ಹಿರಿಯ ಬಸವಪ್ಪನಾಯಕನ ಆಸ್ಥಾನದಲ್ಲಿದ್ದವನು ಎಂದಿದ್ದರೆ,[50] ಶ್ರೀ ಕುಕ್ಕಿಲರು, ಕವಿ ಚರಿತ್ರೆಕಾರರ ಅಭಿಪ್ರಾಯ ವನ್ನೇ ಸಮರ್ಥಿಸಿ, ಕ್ರಿ. ಶ. ೧೭೬೩ ರ ಅನಂತರದಲ್ಲಿ ಕೆಳದಿಯನ್ನು ಸ್ವಾಧೀನಪಡಿಸಿ ಕೊಂಡು ಆಳಿದ ಹೈದರಾಲಿಯ ಮಂತ್ರಿಯಾಗಿದ್ದಿರಬೇಕು ಎಂದಿದ್ದಾರೆ.[51] "ಅಜಪುರ" ಎಂದರೆ ಬ್ರಹ್ಮಾವರ ಎಂದು ಕಾರಂತರು ಹೇಳಿದರೆ,[52] ಕುಕ್ಕಿಲರು "ಆಡುವಳ್ಳಿ" ಎಂದಿದ್ದಾರೆ.[53] ಅನಂತರ, ಹಂಪೆಯಾತ್ಮಜನಾಗಿ, ಪ್ರಧಾನನಾಗಿ ಷಡ್ದರ್ಶನೀವಲ್ಲಭ, ಘಟಿಕಾಪ್ರಬಂಧರಚನಾದಿದಗ್ಧ ಮತ್ತು "ಬಾಲವಾಲ್ಮೀಕಿ" ಎಂಬ ಬಿರುದುಗಳನಾಂತು, "ರಾಮಾಯಣ", "ಇಂದಿರಾಭ್ಯುದಯ", "ಹನುಮ ದ್ವಿಲಾಸ" ಹಾಗೂ ಸಂಸ್ಕೃತದಲ್ಲಿ "ಅಲಂಕಾರಮಣಿದರ್ಪಣ" ಮೊದಲಾದವನ್ನು

[50] ಅದೇ. ಪು. 244

[51] ಮಧುಪುರ, ಪು. 142-43

[53] Loc-cit.

ಬರೆದ ವೆಂಕಾಮಾತ್ಯನು ಸುಮಾರು ೯೮೬೫ ವಾರ್ಧಕ ಷಟ್ಪದಿ ಪದ್ಯಗಳ ಬೃಹತ್ ರಾಮಾಯಣವನ್ನು ರಚಿಸಿದ್ದಾನೆ.[54] ಪೀಠಿಕಾ ಸಂಧಿಯಲ್ಲಿ—

'ಇನಕುಲೋದ್ಭವನಾದ ಸರ್ವಜ್ಞನಾಜ್ಞೆಯಿಂ
ವನದಿನೇಖಲೆಯೊಳುಂ ಪಂಡಿತಾಹ್ಲಾದಮೆನೆ
ವಿನಯದಿಂದುಸುರಿದಂ ಬಾಲವಾಲ್ಮೀಕಿ ತಾ ಶ್ರೀರಾಮಸಚ್ಚರಿತೆಯ
(ಬಾಲಕಾಂಡ, ಪೀಠಿಕಾ ಪು. ೩೨)

ಎಂದಿರುವುದರಿಂದ, ಶ್ರೀಮದ್ರಾಮಾಯಣವನ್ನು ರಚಿಸಿದ್ದಕ್ಕೆ 'ಬಾಲವಾಲ್ಮೀಕಿ' ಎಂಬ ಬಿರುದು ಇದ್ದುದು ತಿಳಿಯುತ್ತದೆ. ಪ್ರತಿಸಂಧಿಯ ಕಡೆಯಲ್ಲಿ 'ಇದು ಶ್ರೀರಾಮಚಂದ್ರಪಾದಾರವಿಂದವಂದನ ಪವನನಂದನ ವರಪ್ರಸಾದಾಸಾಧಿತ ಸಾರಸ್ವತಾ ಸಾಹಿತ್ಯ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಕವಿತಾ ಪರಿಶೀಲಿತಾತ್ಮ ನಿಷ್ಠಾಗರಿಷ್ಠ ಗಾಂಧರ್ವ ಕಲಾವಿದ ವಿವಿಧ ವಿದ್ವಜ್ಜನೋಪಲಾಲನೀಯ ರಾಮಪುರಿ ಹಂಪೆಯಾಮಾತ್ಯ ತನೂಭವ ವೆಂಕಾಹ್ವಯ ವಿರಚಿತವಾದ ಶ್ರೀಮದ್ರಾಮಾಯಣ ಮಹಾಪ್ರಬಂಧದೊಳ್....ಸಮಾಪ್ತಂ ಶ್ರೀ ಶ್ರೀ ಶ್ರೀ" ಎಂತಲೂ, ಇಂದಿರಾಭ್ಯುದಯದ ಕಡೆಯಲ್ಲಿ"....ಸಾಹಿತ್ಯ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಕವಿತಾ ಪರಿಶೀಲನಾತ್ಮ ನಿಷ್ಠಾಗರಿಷ್ಠ ಗಾಂಧರ್ವ ಕಲಾಧುರಂಧರ ನಿಸ್ಸಹಾಯ ಪ್ರಬಂಧ ನಿರ್ಮಾಣ ಚಾತುರೀ ಧುರೀಣೋಪಲಾಲಿತ ಶ್ರೀ ರಾಮಪುರೀ ಹಂಪೆಯಾಮಾತ್ಯ ತನೂಭವ ವೆಂಕಯಾಮಾತ್ಯ ವಿರಚಿತ ರಮಾಭ್ಯುದಯ ಮಹಾಪ್ರಬಂಧದೊಳ್...." ಎಂತಲೂ ಇರುವುದರಿಂದ ರಾಮಪುರಿಯ ಹಂಪೆಯಾಮಾತ್ಯನ ಮಗ ವೆಂಕಾಮಾತ್ಯ ಎಂಬುದು ಸ್ಪಷ್ಟವಾಗುತ್ತದೆ.

ಶ್ರೀಮದ್ ರಾಮಾಯಣ, ಇಂದಿರಾಭ್ಯುದಯವೇ ಮೊದಲಾದ ಕೃತಿಗಳನ್ನು ಕಾಣಿಕೆಯಾಗಿ ಕೊಟ್ಟ ವೆಂಕಾಮಾತ್ಯನ ಮಗ ಸುಬ್ಬ. ಇವನು ಬರೀ ಕಂದ ಪದ್ಯದಲ್ಲೇ 'ಹನೂಮದ್ರಾಮಾಯಣಂ'[55] ಎಂಬ ಗ್ರಂಥವನ್ನು ಬರೆದಿದ್ದಾನೆ. ಇವನ

---

[54] ಬಾಲಕಾಂಡ, ಅಯೋಧ್ಯಾಕಾಂಡ, ಅರಣ್ಯಕಾಂಡ, ಕಿಷ್ಕಿಂಧಾಕಾಂಡ ಮತ್ತು ಸುಂದರಕಾಂಡ ಈ ಐದು ಕಾಂಡಗಳು ಮದ್ರಾಸ್ ಪ್ರಾಚ್ಯ ಗ್ರಂಥಾಗಾರದ 52ನೆಯ ಪ್ರಕಟಣೆ (1956) (ಸಂ) ಟಿ. ಚಂದ್ರಶೇಖರನ್.

[55] ಮುನ್ನೂರು ಶಿವರಾಮಯ್ಯನವರಿಂದ ಪರಿಶೋಧಿತವಾಗಿ 1913 ರಲ್ಲಿ ಪ್ರಕಟವಾದ ಅಡುವಳ್ಳಿ ವೆಂಕಾರ್ಯನತನುಜ ಸುಬ್ರಹ್ಮಣ್ಯ ವಿರಚಿತ "ಹನುಮದ್ರಾಮಾಯಣಂ"

ಮಗನೇ ಸರಸಿಜೋದ್ಭವನಾಮಪುರ (ಅಜಪುರ-ಆಡುವಳ್ಳಿ) ದ ವೈರಾವಣ ಕಾಳಗದ ಕರ್ತೃ[56]. ಈ ವಂಶವೃಕ್ಷದಲ್ಲಿ ಸಂದೇಹಕ್ಕೆ ಆಸ್ಪದವೇ ಇಲ್ಲ.

ಎರಡನೆಯ ಸುಬ್ಬ ದೈವಜ್ಞವಿಠಲ ಮತ್ತು ಗೌರಿಯರ ಪುತ್ರ. ಇವನು ನಗರದವನೋ ನಗಿರೆಯವನೋ ತಿಳಿಯದು. ಕಾರಂತರು ನಗಿರೆಯ ಸುಬ್ಬ ಎಂದರೆ,[57] ಕುಕ್ಕಿಲರು ನಗರದ ಸುಬ್ಬ ಎನ್ನುತ್ತಾರೆ.[58] ಆದರೆ 'ದೈವಜ್ಞ ಹರಿಭಕ್ತ ವಿಠಲನಾವನಿತೆ ಗೌರಿಯು ಪಡೆದ ತರಳ ಸುಬ್ರಹ್ಮಣ್ಯನು' ಎಲ್ಲಿಯೋ ಇರಲಿ ಯಕ್ಷಗಾನ ಪ್ರಸಂಗಗಳನ್ನು ನೀಡಿರುವುದು ಕಂಡುಬರುತ್ತದೆ. ಈತನ ಕೃತಿಗಳು ಎರಡು: ರಾವಣೋದ್ಭವ ಮತ್ತು ಶಂಬರಾಸುರ ಕಾಳಗ.

ಇ) ಮೂರನೆಯವನು ಪುತ್ರಕಾಮೇಷ್ಟಿಯೇ ಮೊದಲಾದ ರಾಮಾಯಣ ಪ್ರಸಂಗಗಳನ್ನು ಬರೆದ ಕರ್ತೃ. ಇವನನ್ನು ಶ್ರೀ ಕಾರಂತರು ಅನಾಮಧೇಯ ನೆನ್ನುತ್ತಾರೆ.[59] ಕುಕ್ಕಿಲರು ಪಾರ್ತಿಸುಬ್ಬ ಎಂದಿದ್ದಾರೆ.[60] ಇವನು ಪುತ್ರಕಾಮೇಷ್ಟಿ, ಸೀತಾಸ್ವಯಂವರ, ಪಟ್ಟಾಭಿಷೇಕ, ಪಂಚವಟಿ, ವಾಲಿಸಂಹಾರ, ಚೂಡಾಮಣಿ ಅಥವಾ ಉಂಗುರಸಂಧಿ, ಸೇತುಬಂಧನ, ಅಂಗದಸಂಧಾನ, ಕುಂಭಕರ್ಣಾದಿ ಕಾಳಗ ಮತ್ತು ಕುಶಲವರ ಕಾಳಗವೆಂಬ ರಾಮಾಯಣ ಪ್ರಸಂಗಗಳನ್ನೂ, ಐರಾವತ, ಕೃಷ್ಣ ಚರಿತೆ (ಬಾಲಲೀಲೆ ಗೋಪೀವಸ್ತ್ರಾಪಹಾರದವರೆಗೆ) ಎಂಬ ಭಾರತ ಮತ್ತು ಭಾಗವತ ಪ್ರಸಂಗಗಳನ್ನು ರಚಿಸಿದವನು.[61]

---

[56] ಬಹುಶಃ ಇವನ ತಾತ ಹಂಪೆಯೊಮೂತ್ಯನ ಕಾಲದಲ್ಲಿ ರಾಮಪುರಿಯಲ್ಲಿದ್ದು, ಇವನ ತಂದೆ ವೆಂಕಾರ್ಯನ ಕಾಲಕ್ಕೆ ಅಥವಾ ತನ್ನ ಕಾಲಕ್ಕೆ ಆಡುವಳ್ಳಿಗೆ ಬಂದಿದ್ದಿರಬೇಕು.

[57] ಯಕ್ಷಗಾನ ಬಯಲಾಟ—ಪು. 190-191.

[58] ಮಧುಪುರ, ಪು. 130.

[59] ಯಕ್ಷಗಾನ ಬಯಲಾಟ, ಪು. 212.

[60] ಕುಕ್ಕಿಲ ಕೃಷ್ಣಭಟ್ಟರ ಅಧ್ಯಕ್ಷ ಭಾಷಣ 31-5-61 ರಲ್ಲಿ ಕೋಟೆಕಾರು ಸಾಹಿತ್ಯ ಸಂಘದ ಆಶ್ರಯದಲ್ಲಿ ಜರುಗಿದ ಪಾರ್ತಿಸುಬ್ಬ ಕವಿ ಜಯಂತೀ ಸಮಾರಂಭ.

[61] ಶ್ರೀಯುತ ಕುಕ್ಕಿಲ ಕೃಷ್ಣಭಟ್ಟರೊಡನೆ 31-10-68 ಮತ್ತು 1-11-68 (ರಾಜ್ಯೋತ್ಸವದ ದಿನ) ಚರ್ಚೆ ನಡೆಸಿ, ಅವರ ಹೇಳಿಕೆ ಸತ್ಯವೆಂದು ಕಂಡುಬಂದದ್ದರಿಂದ ಇಲ್ಲಿ ಹೇಳಲಾಗಿದೆ. ಈ ಉಪಕಾರಕ್ಕಾಗಿ ಶ್ರೀಯುತರಿಗೆ ಕೃತಜ್ಞರಾಗಿದ್ದೇವೆ.

ಈ) ನಾಲ್ಕನೆಯವನು ಕೆಳದಿಯ ಸುಬ್ಬ. [62] ಇವನು ರುಕ್ಮಿಣೀಸ್ವಯಂವರ ಪ್ರಸಂಗದ ಕೊನೆಯಲ್ಲಿ—

"ಧಾರಿಣಿಗೆ ಪಶ್ಚಿಮದಿ ಶೋಭಿಪ | ವಾರನಿಧಿಯಾನಾಳ್ವ ಕೆಳದಿಯ | ಭೂರಮಣ ಬಸವೇಂದ್ರನಂಘ್ರಿಯ | ಸೇರಿ ಬಾಳ್ವ ॥ ೩ ॥ ಕ್ಷಿತಿಯ ದಿವಿಜರ ಕುಲದೊಳುದಿಸಿದ | ಮತಿ ವಿಶಾರದ ವೆಂಕಣಾರ್ಯನ | ಸತಿ ಸುಗುಣೆ ದೇವಮ್ಮನೆನಿಪಳ | ಸುತಸುಶೀಲ ॥ ೪ ॥ ನೆರೆ ಪ್ರೌಢ ಚನ್ನಯ್ಯನನುಜನು | ತರಳಸುಬ್ಬನು ಶಿವೆಯ ಸಾಕ್ಷಾ | ತ್ಕರುಣದಿಂ ನುಡಿಸಿರ್ದ ಶ್ರೀವರ | ಚರಿತವನ್ನು ॥ ೫ ॥ ಭಕುತಿಯಿಂದಲಿ ಕೇಳಿ ಪೇಳುವ | ಸಕಲ ಜನಸಂತತಿಗೆ ಸರಸಿಜ | ಸುಖಸುಧಾರಕರರುಳ್ವ ಪರಿಯಂ | ತಖಿಳ ಶುಭವ ॥ ೬ ॥ ಎಸೆವ ಹೇಮಾಚಲಕೆ ದಕ್ಷಿಣ | ವಸುದೆಯೊಳಗತ್ಯಧಿಕ ತರದಿಂ | ದಸಿತ ಮಾಗಿಹ ಕುಟಜಗಿರಿಯೊಳು | ವಸತಿಯುಳ್ಳ ॥ ೭ ॥ ವಾಸವಾದಿ ಸುರೌಘನುತ ಜಗ | ದೀಶೆಪಾವನ ವೇಷೆ ರವಿಶತ | ಭಾಷೆ ಮೂಕಾಂಬಿಕೆಯು ಪಾಲಿಪಳ್ | ತೋಷದಿಂದ ॥ ೮ ॥ ಧರಣಿಯೊಳಗರಿತವರು ಕನ್ನಡ | ವರಮಹಾ ಕಾವ್ಯವನು ಮನ್ನಿಸಿ | ಇರಲು ತಪ್ಪುಗಳನ್ನು ತಿದ್ದುತ | ಕರುಣಿಸುವುದು ॥ ೯ ॥"

ಎಂತಲೂ ಪಾರಿಜಾತದಲ್ಲಿ—

ಮಹಿಯಸುಮನಸ ಕುಲದೊಳುದಿಸಿದ !
ಮಹದಧಿಕಮತಿ ವೆಂಕಣಾರ್ಯನ |
ಮಹಿಳೆ ದೇವಮ್ಮನ ತನೂದ್ಭವ | ಮಹಿತ ಸುಗುಣ ॥
ನೀತಿಯುತ ಚನ್ನಯ್ಯವರಸಹ |
ಜಾತ ಸುಬ್ಬನು ಪೇಳಿದನು ಶ್ರೀ
ನಾಥನನುಪಮ ಕಥೆಯನಿದನೀ ಭೂತಳದಲಿ ॥

ಎಂದೂ ಹೇಳಿಕೊಂಡಿರುವುದರಿಂದ ಈತನು ಕೆಳದಿಯ ಭೂರಮಣನಾದ ಬಸವೇಂದ್ರನ ಆಶ್ರಯದಲ್ಲಿದ್ದ ಕವಿ ವೆಂಕಣಾರ್ಯ ಅವನ ಪತ್ನಿ ದೇವಮ್ಮ, ಅವರ ಹಿರಿಯ ಮಗ ಚೆನ್ನಯ್ಯ, ಆ ಚೆನ್ನಯ್ಯನ ತಮ್ಮ ಸುಬ್ಬ ಎಂಬುದು ಸ್ಪಷ್ಟವಾಗುತ್ತದೆ. ಇವನು ರುಕ್ಮಿಣೀಸ್ವಯಂವರ ಮತ್ತು ಪಾರಿಜಾತ ಎಂಬ ಎರಡು ಪ್ರಸಂಗಗಳ ಕರ್ತೃ. ಇವನ ಹುಟ್ಟೂರು ಕೆಳದಿ. [63]

---

[62] ಕವಿಚರಿತೆಕಾರರು ಇವನನ್ನು ರಾಮಜೋಷ್ಯವವ ಕರ್ತೃವಿನ ಜೊತೆ ಸೇರಿಸಿದ್ದಾರೆ. ಕ. ಕ. ಚ. III ಪು. 228.

[63] ಇದನ್ನು ಟಿ. ಮಹಾಬಲೇಶ್ವರಭಟ್ಟರು 28 ಮೇ 1961 ರಲ್ಲಿ ಸಾಗರದಲ್ಲಿ ನಡೆದ ಶಿವಮೊಗ್ಗ ಜಿಲ್ಲಾ ಬರಹಗಾರರ ಪ್ರಥಮ ಸಮ್ಮೇಳನದ ತಮ್ಮ ಸ್ವಾಗತ ಭಾಷಣದಲ್ಲಿ ಪುಷ್ಟೀಕರಿಸಿದ್ದಾರೆ.

## (iii) ವೆಂಕ, ಸುಬ್ಬರು

ವೆಂಕ, ಸುಬ್ಬರು ಹೆಚ್ಚಾಗಿ ಗದ್ದಲಕ್ಕೆ ಕಾರಣರಾಗಿದ್ದಾರೆ. ಶ್ರೀ ಕಾರಂತರು ಮೈರಾವಣ ಕಾಳಗದ ಕರ್ತೃವಾದ ಅಜಪುರದ ಸುಬ್ಬನಲ್ಲಿ, ರುಕ್ಮಿಣೀಸ್ವಯಂವರ ಮತ್ತು ಪಾರಿಜಾತಗಳನ್ನು ಬರೆದ ಕೆಳದಿಯ ಸುಬ್ಬನನ್ನೂ, ಐರಾವತ, ಶ್ರೀ ಕೃಷ್ಣ ಲೀಲೆ, ಕುಶಲವರ ಕಾಳಗಗಳನ್ನು ಬರೆದ ಅನಾಮಧೇಯ ಅಥವಾ ಕುಕ್ಕಿಲರ ಪಾರ್ತಿ ಸುಬ್ಬನನ್ನೂ ಸೇರಿಸಿ ಒಬ್ಬ ಸುಬ್ಬನನ್ನು ಎತ್ತಿಹಿಡಿದಿದ್ದಾರೆ.[64] ಶ್ರೀ ಕುಕ್ಕಿಲ ಕೃಷ್ಣಭಟ್ಟರು ಹನೂಮದ್ರಾಮಾಯಣವನ್ನು ಬರೆದ ಆಡುವಳ್ಳಿ ಸುಬ್ರಹ್ಮಣ್ಯನಲ್ಲಿ ನಮ್ಮ ರುಕ್ಮಿಣೀಸ್ವಯಂವರ ಮತ್ತು ಪಾರಿಜಾತಗಳ ಕರ್ತೃವಾದ ಕೆಳದೀ ಸುಬ್ಬನನ್ನು ಐಕ್ಯಗೊಳಿಸಿದ್ದಾರೆ.[65] ಆದರೆ ಇಬ್ಬರೂ ಹಾದಿ ತಪ್ಪಿದ್ದಾರೆ. ಏಕೆಂದರೆ ಈ ಮೇಲೆ ತಿಳಿಸಿದ ಪ್ರಸಂಗಗಳ ಕರ್ತೃ ಒಬ್ಬನಲ್ಲ, ಇಬ್ಬರಲ್ಲ, ಮೂವರು. ಮೊದಲನೆಯವನು ಹನೂಮದ್ರಾಮಾಯಣವನ್ನು ಬರೆದ ಆಡುವಳ್ಳಿಯ ಸುಬ್ರಹ್ಮಣ್ಯ, ಎರಡನೆಯವನು ಪಾರಿಜಾತ ಮತ್ತು ರುಕ್ಮಿಣೀಸ್ವಯಂವರಗಳನ್ನು ರಚಿಸಿದ ಕೆಳದಿಯ ಸುಬ್ಬ, ಮೂರನೆಯವನು ರಾಮಾಯಣ ಪ್ರಸಂಗಗಳ ಕರ್ತೃ ಪಾರ್ತಿಸುಬ್ಬ.[66] ಈ ಪಾರ್ತಿಸುಬ್ಬನು ತುಂಬಾ ಅವಾಂತರಕ್ಕೆ ಕಾರಣನಾಗಿದ್ದಾನೆ. ಶ್ರೀ ಮುಳಿಯ ತಿಮ್ಮಪ್ಪಯ್ಯನವರು ವಿವರಿಸಿದ ಪಾರ್ತಿಸುಬ್ಬನೆಂಬ ಪ್ರಸಂಗ ಕರ್ತೃವನ್ನು[67] ರಾಷ್ಟ್ರಕವಿ ಗೋವಿಂದ ಪೈ[68] ಮತ್ತು ಶ್ರೀ ಕುಕ್ಕಿಲ ಕೃಷ್ಣಭಟ್ಟರು ಅನುಮೋದಿಸಿದ್ದಾರೆ. ಅಷ್ಟೇ ಅಲ್ಲ, "ಪ್ರಕೃತ ಒಂದೇ ಮಾತಿನಿಂದ ಹೇಳುವುದಾದರೆ ಆಂಧ್ರದಲ್ಲಿ ಕೂಚಿಪುಡಿಯ ಸಿದ್ಧೇಂದ್ರಯತಿ ಮತ್ತು ಕೇರಳದಲ್ಲಿ ಕೊಟ್ಟಾರಕರ ಮಹಾರಾಜ(ವಂಚಿಧರಾವರ) ಇವರಂತೆ ನಮ್ಮ ಯಕ್ಷಗಾನದಲ್ಲಿ ಹೊಸ ಜೀವಕಳೆಯನ್ನು ತುಂಬಿ ಬಲು ದೊಡ್ಡ ಸುಧಾರಣೆಯನ್ನು ಮಾಡಿದ ಮಹಾವ್ಯಕ್ತಿ ಪಾರ್ತಿಸುಬ್ಬನು"[69] ಎಂದು ಘೋಷಿಸಿದ್ದಾರೆ. "ಒಟ್ಟಿನಲ್ಲಿ ಸುಬ್ಬನ ಕೃತಿಗಳ ಮೂಲಕ ಯಕ್ಷಗಾನ ಸಾಹಿತ್ಯಕ್ಕೆ ಕಳೆಯೇರಿದೆ; ಅವನಿಂದ ಯಕ್ಷಗಾನ ಸಾಹಿತ್ಯವು ಚಿರಸ್ಮರಣೀಯವೆಂದರೆ

---

[64] ಯಕ್ಷಗಾನ ಬಯಲಾಟ ಪು. 210.

[65] ಮಧುಪುರ. ಪು. 130.

[66] ನಾಲ್ಕನೆಯವನು ರಾವಣೋದ್ಭವ ಮತ್ತು ಶಂಬರಾಸುರ ಕಾಳಗ ಇವುಗಳ ಕರ್ತೃ ನಗಿರೆ ಅಥವಾ ನಗರದ ಸುಬ್ಬ.

[67] ಪಾರ್ತಿಸುಬ್ಬ (ಕೃತಿ ಅಥವಾ ಸಂಭಾವನೆಯಲ್ಲಿರುವ ಲೇಖನ ನೋಡಿ)

[68] ನವಭಾರತ—27-1-1955.

[69] ಕುಂಬಳೆ ಪಾರ್ತಿಸುಬ್ಬ ಕವಿಯ ಕಾಲ ಮತ್ತು ಕರ್ತೃತ್ವದ ನಿರ್ಣಯ, ಪು. 13,

ತಪ್ಪಾಗದು” – ಎಂಬುದಾಗಿ ಪ್ರೊ|| ಎಂ. ಮರಿಯಪ್ಪಭಟ್ಟರೂ ಅಭಿಪ್ರಾಯ ಪಟ್ಟಿದ್ದಾರೆ.[70] ಆದರೆ – ಶಿವರಾಮ ಕಾರಂತರು ಇದನ್ನು ವಿರೋಧಿಸಿ ಹಲವು ಕಾರಣಗಳನ್ನು ಕೊಟ್ಟಿದ್ದಾರೆ. ಮುಖ್ಯವಾಗಿ, ಶ್ರೀ ಗೋವಿಂದ ಪೈಗಳವರ ಹೇಳಿಕೆಯೊಂದನ್ನು ಟೀಕಿಸಿ, “ಈ ಕವಿಯು ವಿಠಲ ಮತ್ತು ಗೌರಿಯರ ಪುತ್ರ, ನಗರ (ನಗಿರೆ) ಸುಬ್ಬನ ‘ರಾವಣೋದ್ಭವ’ದ ಕೊನೆಯಲ್ಲಿ ಪಾರ್ತಿಸುಬ್ಬನನ್ನು ಕುರಿತು ಒಂದು ಚರಮ ಶ್ಲೋಕವಿದೆ ಎಂಬ, ಎಲ್ಲಿಯೂ ಕಾಣಸಿಗದ ಕಾಲ್ಪನಿಕವಾದೊಂದು ದಾಖಲೆಯನ್ನು ಮುಂದೊಡ್ಡಿ, ಅದರ ಮೇಲಿಂದಲೇ ಪಾರ್ತಿಸುಬ್ಬನ ಕಾಲನಿರ್ಣಯ ಮಾಡಿದವರೂ ಇದ್ದಾರೆ. ಆ ಚರಮ ಪದ್ಯದ ಭಾಷೆಯಲ್ಲಿ, ಈ ಶತಮಾನದಲ್ಲಿ ಕವಿಯೆಂಬ ಅರ್ಥದಲ್ಲಿ ರೂಢಿಗೆ ಬಂದಿರುವ ‘ಸಾಹಿತಿ’ ಎಂಬ ಪದವೊಂದೇ, ‘ಇದು ಸಂಶೋಧಕರ ಸೃಷ್ಟಿ’ ಎಂಬುದಕ್ಕೆ ದಾಖಲೆ ಸಾಕಿತ್ತು.’[71] ಎಂದಿದ್ದಾರೆ. ಆದರೆ, ಇಲ್ಲಿ ಒಂದು ಮಾತು ಹೇಳುವುದು ಅನಿವಾರ್ಯವೆನಿಸಿದೆ. ಶ್ರೀ ಪೈಯವರಾಗಲೀ, ಕಾರಂತರಾಗಲೀ ರಾವಣೋದ್ಭವದ ಮೂಲಕೃತಿಯನ್ನು ಗಮನಿಸಬೇಕೆ ಹೊರತು ಅಚ್ಚಾದ ಗ್ರಂಥವನ್ನಲ್ಲ. ‘ಯಕ್ಷರ ಸಾಹಿತಿ’ ಎಂಬ ಪದಗಳನ್ನುಳ್ಳ ಈ ಪದ್ಯವು[72] ದಿವಂಗತ ಕವಿಭೂಷಣ ವೆಂಕಟಪ್ಪಶೆಟ್ಟರೆಂಬ ಪ್ರಸಿದ್ಧ ಅರ್ಥಧಾರಿಗಳಿಂದ (ಯಕ್ಷಗಾನ ಕವಿಗಳೂ ಹೌದು) ರಚಿಸಲ್ಪಟ್ಟದ್ದೆಂದು ತಿಳಿದು ಬರುತ್ತದೆ. ಉಡುಪಿ ಶ್ರೀ ಕೃಷ್ಣ ಪ್ರೆಸ್ಸಿನಲ್ಲಿ ಅಚ್ಚಾದ ಯಕ್ಷಗಾನ ನಾಟಕಗಳಲ್ಲಿ ಹಲವರಲ್ಲಿ ಒಂದೊಂದು ಕಂದ ಪದ್ಯ ಇದೆ. ಇವು ಪ್ರೂಫ್ ನೋಡುತ್ತಿದ್ದ ದಿ|| ಕಡಂದಲೆ ರಾಮರಾಯರು ಬರೆದು ಸೇರಿಸಿದವು. ಇವರು ಪ್ರೂಫ್ ನೋಡುವಾಗ ಕಡೆಯ ಒಂದು “ಮಂಗಲಪದ ಒಂದು ಕಂದ ಪದ್ಯ” ಸೇರಿಸಿದ್ದುಂಟು. ಅವರಿಗೆ ಅದೊಂದು ಚಟ. ಅದೇ ರೀತಿ ವೆಂಕಟಪ್ಪಶೆಟ್ಟಿಯವರೂ ಸೇರಿಸಿದ್ದಾರೆ. ಆದ್ದರಿಂದ ಅಚ್ಚಾದ ಕೃತಿ ಎಷ್ಟು ಅಪಾಯಕಾರಿ ಎಂದು ತಿಳಿಯುವುದು ಅಗತ್ಯ.

ಇದೇನೇ ಇರಲಿ, ಪಾರ್ತಿಸುಬ್ಬ ಅಥವಾ ರಾಮಾಯಣ ಪ್ರಸಂಗಗಳ ಕರ್ತೃವಾದ ಸುಬ್ಬನು ಹನೂಮದ್ರಾಮಾಯಣವನ್ನು ಬರೆದವನಿಂದ ಭಿನ್ನನಾದ ವ್ಯಕ್ತಿ. ಹೇಗೆಂದರೆ, ಪ್ರಸಂಗಕಾರ ಸುಬ್ಬನ ಹನ್ನೊಂದು ಕೃತಿಗಳೂ ಛಂದೋಭಂಗದಿಂದ ಕೂಡಿವೆ. ಕಂದಪದ್ಯಗಳ ಲಕ್ಷಣವೇ ಅವನಿಗೆ ತಿಳಿದಿಲ್ಲ. ಆದರೆ ಹನೂಮದ್ರಾಮಾಯಣದ

---

[70] ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ, ಪು. 242.

[71] ಯಕ್ಷಗಾನ ಬಯಲಾಟ ಪು. 191.

[72] ರಸಿಕಂ ರಸಾಪ್ರ ಚಿತ್ರಂ ಪೊಸದೇಸಿಯ ಕಬ್ಬಿಗನೋಪಜಂ ಪಾರ್ವತಿಜಂ ||
ಕುಶಲಿಗ ಯಕ್ಷರಸಾಹಿತಿಯಸುವಳಿಸಿದ ಮುರ್ಮತಿ ಪಸರಿಸದಿರ್ಕೆಂದುಮುಂ ||

ಕರ್ತೃ ಇಡೀ ಗ್ರಂಥವನ್ನು ಕೇವಲ ಕಂದಪದ್ಯಗಳಲ್ಲೇ ರಚಿಸಿದ್ದಾನೆ.[73] ಬಹುಶಃ ಕನ್ನಡ ಸಾಹಿತ್ಯದಲ್ಲಿ ಜನ್ನನನ್ನು ಬಿಟ್ಟರೆ, ಬರಿಯ ಕಂದ ಪದ್ಯಗಳಲ್ಲೇ ಕಾವ್ಯ ಬರೆಯುವ ಪರಿಣತಿಯಲ್ಲಿ ಇವನೇ ಎರಡನೆಯವನೆಂದು ತೋರುತ್ತದೆ.

ಇದೇ ರೀತಿ, ಪಾರಿಜಾತ ಮತ್ತು ರುಕ್ಮಿಣೀಸ್ವಯಂವರಗಳನ್ನು ಬರೆದ ಕೆಳದಿ ಸುಬ್ಬನು ಹನೂಮದ್ರಾಮಾಯಣವನ್ನು ಬರೆದ ಆಡುವಳ್ಳಿ ಸುಬ್ಬನಿಂದ ಬೇರೆಯಾದವನು. ಇವನ ತಂದೆ ವೆಂಕಾರ್ಯ. ಈ ವೆಂಕಾರ್ಯನು ತನ್ನ ಕೃತಿಗಳಲ್ಲಿ ತನ್ನ ತಂದೆ 'ಲಿಂಗಪ್ಪ'ನನ್ನು ಸ್ಮರಿಸಿದ್ದಾನೆಯೇ ಹೊರತು ಆಶ್ರಯದಾತನ ಹೆಸರು ಹೇಳಿಲ್ಲ. ಅಂತೆಯೇ ಸಿಕ್ಕಿರುವ ಇವನ ಕೃತಿಗಳಲ್ಲಿ ಕೆಲವು ಗರಿಗಳು ಕಳೆದು ಹೋಗಿರುವುದರಿಂದ ಅವನು ತನ್ನ ಆಶ್ರಯದಾತನನ್ನು ಸ್ಮರಿಸಿಯೇ ಇಲ್ಲ ಎಂದು ಹೇಳುವುದಕ್ಕೂ ಬರುವುದಿಲ್ಲ. ಅಲ್ಲದೆ, ಇವನ ಮಗ ಕೆಳದಿ ಸುಬ್ಬನು ತನ್ನ ರುಕ್ಮಿಣೀ ಸ್ವಯಂವರದ ಅಂತ್ಯದಲ್ಲಿ 'ಧಾರಿಣಿಗೆ ಪಶ್ಚಿಮದಿ ಶೋಭಿಪ | ವಾರಿಸಿಧಿಯಾನಾಳ್ವ ಕೆಳದಿಯ | ಭೂರಮಣ ಬಸವೇಂದ್ರನಂಘ್ರಿಯ ಸೇರಿ ಬಾಳ್ವ' ವೆಂಕಣಾರ್ಯನ ಮಗ ತಾನು ಎಂದು ಹೇಳಿಕೊಂಡಿರುವುದರಿಂದ[74] ಈ ವೆಂಕನಿಗೆ ಕೆಳದಿಯ ಕಿರಿಯ ಬಸವಪ್ಪ ನಾಯಕನ ಆಶ್ರಯವಿದ್ದುದು ಸ್ಪಷ್ಟವಾಗಿ ತಿಳಿಯುತ್ತದೆ.

ವೆಂಕನು ತನ್ನ 'ಗಣಸಹಸ್ರನಾಮ'ದಲ್ಲಿ-

ಧರಣಿದೇವಲಲಾಮನೆನಿಸಿದ
ವರ ಕೆಳದಿ ಲಿಂಗಾರ್ಯ ತನೂಭವ
ಗರುವ ವೆಂಕಪನೀ ಗಣಾಧೀಶ್ವರರ ನಾಮಗಳಾ (ಪದ್ಯ 5)

---

[73] "ವೆಂಕಾರ್ಯನಮಗ ಸುಬ್ಬನು ಕೇವಲ ಕಂದಪದ್ಯಗಳಲ್ಲಿಯೇ ಹನೂಮದ್ರಾಮಾಯಣವೆಂಬ ಬೃಹತ್ ಕಾವ್ಯವನ್ನು ಬರೆದ ಕವಿ. ಶುದ್ಧವಾದ ಕಂದಪದ್ಯಗಳನ್ನು ರಚಿಸುವುದರಲ್ಲಿ ಆತನು ಸಿದ್ಧಹಸ್ತನೆಂಬುದು ಸರ್ವಶ್ರುತ. ಪಾರ್ತಿಸುಬ್ಬನ ರಚನೆಗಳಲ್ಲಿ ಕಂದಪದ್ಯಗಳು ಅತಿ ವಿರಳ. ಇದ್ದುವು ಸಹ ಛಂದೋಭಂಗವಲ್ಲಿವೆ. ತನಗೆ ಕಂದಪದ್ಯಗಳನ್ನು ರಚಿಸುವುದಕ್ಕೆ ತಿಳಿಯುವುದಿಲ್ಲ ಎಂದು ಆತನು ತನ್ನ ಐರಾವತ ಪ್ರಸಂಗದ ಕೊನೆಗೆ ವಿನಯದಿಂದ ಹೇಳಿಕೊಂಡಿದ್ದಾನೆ. "ಅರಿಯೆ ಲಕ್ಷಣಕರಂಪದ್ಯವಡಿ ಪ್ರಾಸು .." ಎಂಬ ವಾರ್ಧಿಕ ಷಟ್ಪದಿಯು ಅಚ್ಚಾದ 'ಐರಾವತ' ಪ್ರತಿಯಲ್ಲಿಯೂ ಇದೆಯಷ್ಟೆ! ಇಷ್ಟು ಮಾತ್ರ ಅಲ್ಲ, ಹನೂಮದ್ರಾಮಾಯಣದ ಕಥಾಭಾಗವು ಸಹ ರಾಮಾಯಣ ಪ್ರಸಂಗಗಳ ಕಥೆಯಿಂದ ಬಹುಥಾಭಿನ್ನವಾಗಿದೆ. ಶೂರ್ಪನಖಿಯ ಕುಚಚ್ಛೇದನವು ಅವರಲ್ಲಿಲ್ಲ"—ಕುಕ್ಕಿಲ ಕೃಷ್ಣಭಟ್ಟ, ಕುಂಬಳೆ ಪಾರ್ತಿಸುಬ್ಬಕವಿಯ ಕಾಲ ಮತ್ತು ಕರ್ತೃತ್ವದ ನಿರ್ಣಯ, ಪು. 24.

[74] ರುಕ್ಮಿಣೀ ಸ್ವಯಂವರ, ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯ, ಉಡುಪಿ, ಎರಡನೆಯ ಮುದ್ರಣ, 1951.

ಪೇಳಿದುದಾಗಿ ತಿಳಿಸುತ್ತಾನೆ. ಅಂತೆಯೇ, ಪಾರ್ವತೀವಲ್ಲಭ ಶತಕದಲ್ಲಿ-

ಧರಣಿದೇವಲಲಾಮನಾದ ಬಹುಶಾಸ್ತ್ರವ್ರಾತಮಂ ಬಲ್ಲಶಂ
ಕರ ಪಾದಾಂಬುಜ ಭಕ್ತಿಯುಕ್ತ ಕೆಳದೀ ಲಿಂಗಪ್ಪ ಸನ್ನುತ ಭಾ
ಸ್ಮರನಾತ್ಮೋದ್ಭವನಾದ ವೆಂಕ ವಿಬುಧಂ ಪೇಳ್ದೀ ಮಹಾವೃತ್ತಮಂ
ನೆರೆಬಲ್ಲರ್ಮನವೊಲ್ದು ಕೇಳದಿಹರೇ ವಿದ್ವತ್ ಸಭಾಮಧ್ಯದೊಳ್ (ಪದ್ಯ 2)

ಎಂದು ತಿಳಿಸಿದ್ದಾನೆ. ಇದರಿಂದ ಈ ಕವಿಯು ಧರಣಿದೇವಲಲಾಮನಾದ ಕೆಳದಿ ಲಿಂಗಪ್ಪನ ಮಗನೆಂದು ವಿದಿತವಾಗುತ್ತದೆ. ಈತನು ಕೆಳದಿ ರಾಮೇಶ ಎಂಬ ಅಂಕಿತನವನ್ನಿಟ್ಟುಕೊಂಡಂತೆ ಕಂಡುಬರುತ್ತದೆ. ರಾಮೇಶನನ್ನು ಕುರಿತು ಪ್ರತಿ ಹಾಡಿನ ಅಂತ್ಯದಲ್ಲೂ, ಪಾರ್ವತಿವಲ್ಲಭ ಶತಕದ ಅಂತ್ಯದಲ್ಲೂ, 'ಕೆಳದಿ ಪುರದರಸ ರಾಮೇಶ' ಎಂದು ಮುಕ್ತಾಯ ಮಾಡಿದ್ದಾನೆ. ಈತನು ಗಣಸಹಸ್ರನಾಮ, ಕೆಳದಿ ರಾಮೇಶ್ವರನನ್ನು ಕುರಿತ ಹಾಡುಗಳು, ಪಾರ್ವತೀವಲ್ಲಭ ಶತಕ-ಇವುಗಳಷ್ಟೇ ಅಲ್ಲದೆ 'ನರಹರಿ ವಿಜಯ' ಎಂಬ ಕಿರುಕಾವ್ಯವನ್ನೂ ರಚಿಸಿದ್ದಾನೆ. ಸಿಕ್ಕಿರುವ ಓಲೆಗಳಲ್ಲಿ ಇದಕ್ಕೂ ಹೆಚ್ಚು ಮಾಹಿತಿ ಇರುವುದಿಲ್ಲ.

ಸುಮಾರು ೯೮೬೫ ವಾರ್ಧಕ ಷಟ್ಪದಿಯ ಪದ್ಯಗಳುಳ್ಳ ಶ್ರೀಮದ್‌ರಾಮಾಯಣ ವೆಂಬ ಬೃಹತ್ ಕಾವ್ಯವನ್ನು ರಚಿಸಿದ ವೆಂಕಾಮಾತ್ಯನು ತನ್ನ ಕೃತಿಗಳು, ಗುರು, ಹಾಗೂ ರಾಜಾಶ್ರಯಗಳ ಬಗೆಗೆ ಹೇಳಿಕೊಂಡಿರಬಹುದು. ಆದರೆ ಗ್ರಂಥದ ಮೊದಲ ಗರಿಗಳು ಸಿಕ್ಕದಿರುವುದರಿಂದ ಏನೂ ಹೇಳಬರುವುದಿಲ್ಲ. ಈತ ತನ್ನ ತಂದೆ ರಾಮಪುರಿ ಹಂಪೆಯಾ ಮಾತ್ಯ ಎಂದು ಸ್ಪಷ್ಟವಾಗಿ ತಿಳಿಸಿದ್ದಾನೆ. ಇವನ ಮಗನೇ ಹನೂಮದ್ರಾಮಾಯಣ ಎಂಬ ಕಾವ್ಯವನ್ನು ಬರೆದ ಸುಬ್ಬ. ಈ ಸುಬ್ಬ ರುಕ್ಮಿಣೀ ಸ್ವಯಂವರ, ಪಾರಿಜಾತ, ಈ ಪ್ರಸಂಗಗಳ ಕರ್ತೃವಾದ ಕೆಳದಿ ಸುಬ್ಬನಿಂದ ಭಿನ್ನನಾದವನು. ಕೆಳದಿಯ ಸುಬ್ಬನು ಕೆಳದಿಯ ಕವಿಮನೆತನಕ್ಕೆ ಸೇರಿದವನು. ಆದ್ದರಿಂದ ಈ ಸುಬ್ಬದ್ವಯರನ್ನು ಹಡೆದ ತಂದೆ ತಾಯಿಗಳು ಬೇರೆ, ಬದುಕು ಮಾಡಿದ ರಾಜಾಸ್ಥಾನಗಳು ಬೇರೆ, ರಚಿಸಿ ಪ್ರಕಟಿಸಿದ ಕೃತಿಗಳೂ ಬೇರೆ ಬೇರೆ.

ಹನೂಮದ್ರಾಮಾಯಣವನ್ನು ಬರೆದ ಸುಬ್ಬನ ತಾತ ಹಂಪೆಯಾಮಾತ್ಯ. ಈತನು ಕವಿಯೋ ಅಲ್ಲವೋ ತಿಳಿಯದು. ಆದರೆ ಪಾರಿಜಾತ ಮತ್ತು ರುಕ್ಮಿಣೀ ಸ್ವಯಂವರಗಳನ್ನು ಬರೆದ ಕೆಳದಿ ಸುಬ್ಬನ ತಾತ ಕೆಳದಿಯ ಪ್ರಸಿದ್ಧ ಕವಿ ಲಿಂಗಣ್ಣ. ಈತನು ತನ್ನ ಕೆಳದಿ ನೃಪವಿಜಯದಲ್ಲಿ 'ಇದನೊಲಿದುಸುರ್ದಂ ವೆಂಕಪಾತ್ಮಜಂ ಲಿಂಗಬುಧಂ'[75] ಎಂತಲೂ, ಶಿವಪೂಜಾ ದರ್ಪಣದಲ್ಲಿ-

---

[75] ಅನುಬಂಧ 17 ನೋಡಿ.

"ಮೆರೆವೀ ಸತ್ಕೃತಿಯಂ ತಾಂ ವಿರಚಿಸಿದಂ ಸಕಲನೃಪಶಿರೋಮಣಿ ಕೆಳದೀ ||
ವರ ಬಸವೇಂದ್ರಾಶ್ರಿತ ಭೂಸುರ ಕುಲಮಣಿ ವೆಂಕಪಾತ್ಮಜಂಲಿಂಗಬುಧಂ ||"[76]

ಎಂತಲೂ, ಪ್ರತಿ ಆಶ್ವಾಸದ ಕಡೆಯಲ್ಲೂ—

ಯಿದಖಿಲ ಸುರನರೋರಗ ನಿಕರ ಮಕುಟ
ತಟ ಘಟಿತ ಮಾಣಿಕ್ಯ ಮಯೂಖ ಮಂಜರೀ
ಪುಂಜ ಶಬರೀಕೃತ ಕನಕತ್ಕನಕ ಪಾದುಕಾ
ವಿರಾಜಮಾನ ಶ್ರೀ ಮತ್ಸಾಂಬಸದಾಶಿವ
ಚರಣದ್ವಂದ್ವ ಭಕ್ತಿರಸ ಮಕರಂದ ಮತ್ತ
ಮಧುಕರಾಯಮಾಣ ಮಾನಸಭೂಸುರ
ಕುಲ ಪ್ರದೀಪ ಹರಿತಸಗೋತ್ರೋದ್ಭವ
ವೆಂಕಪಾತ್ಮಜ ಲಿಂಗಣ ಸೂರಿ ವಿರಚಿತ
ಶಿವಪೂಜಾದರ್ಪಣ ಪ್ರಬಂಧದೊಳ್....

ಎಂತಲೂ, ಶಿವಕಲ್ಯಾಣದಲ್ಲಿ—

"ಯಿಂತೆಂದು ಪುರಾತನ ಕವಿಗಳಂ ಬಲ
ಗೊಂಡು, ಶ್ರೀಮತ್ ಕೆಳದೀ ಬಸವರಾಜೇಂದ್ರ
ನೊಲ್ದಾಲಿಸಲ್........
ಕೆನೆವಾಲಂ ಸಕ್ಕರೆಯಿಂ |
ಮಿಸುಪಿಕ್ಷುವ ರಸದೆ ಜೇನಿನಿಂದಮರ್ದಿಂತಾ ||
ನಿನಿದೆನಿಕುಂ ಲಿಂಗಣ ವಿಭು |
ದನ ವಾಙ್ಮಾಧುರ್ಯಮಾಲಿಸಲ್ಕೀ ಕೃತಿಯೊಳ್ ||

(– ಶಿವಕಲ್ಯಾಣ, ಗರಿ ೨)

ಎಂತಲೂ,

ಪ್ರತಿ ಆಶ್ವಾಸಾಂತ್ಯದಲ್ಲೂ—

"ಯಿದಖಿಲ ಸುರ ನರೋರಗ ನಿಕರ
ಮಕುಟ ತಟಘಟಿತ ಶ್ರೀ ಮತ್ಸಾಂಬ
ಸದಾಶಿವ ಚರಣಾರವಿಂದ ದ್ವಂದ್ವ
ಭಕ್ತಿರಸ ನವೀನ ಮಕರಂದ ಮತ್ತ
ಮಧುಕರಾಯಮಾಣಮಾನಸ | ಹರಿತ
ಸಗೋತ್ರೋದ್ಭವ ಭೂಸುರವರ್ಯ ಲಿಂಗಣ

---

[76] ಶಿಪೂಜಾದರ್ಪಣ, ಗರಿ 12 (ಓಲೆ ಪ್ರತಿ)

ಸೂರಿ ವಿರಚಿತ | ಶಿವಕಲ್ಯಾಣಪುಣ್ಯಕಥಾ
ಸಮನ್ವಿತ | ಯಕ್ಷಗಾನ ಪ್ರಬಂಧದೊಳ್

ಎಂತಲೂ ಇರುವುದರಿಂದ,
ಪಾರ್ವತೀ ಪರಿಣಯ ಕಾವ್ಯದಲ್ಲಿ—

"ಯಿಾ ಕೃತಿಯನಾರಿಸಿ ಪೇಳ್ದವನಾರೆನಲ್ಕೆ
ಭೂಸುರವರ ಲಿಂಗಣಾಖ್ಯ ಬುಧನಂದನ
ಮೆಚ್ಚದರಾರ್ಥರಿತ್ರಿಯೊಳ್"

—ಪಾರ್ವತೀ ಪರಿಣಯ I, ವೃತ್ತ ೧೯ (ಓಲೆಪ್ರತಿ)

ಎಂತಲೂ, ಇರುವುದರಿಂದ—ಈ ಎಲ್ಲ ಕೃತಿಗಳನ್ನು ರಚಿಸಿದವನು ವೆಂಕಪಾತ್ಮಜನಾದ ಲಿಂಗಬುಧ. ಇವನು ಕೆಳದಿಯ ಬಸವರಾಜೇಂದ್ರನ ಆಸ್ಥಾನದಲ್ಲಿದ್ದವನು ಎಂಬುದು ಸ್ಪಷ್ಟವಾಗುತ್ತದೆ. ಹಾಗಾದರೆ ಈ ಬಸವರಾಜ ಯಾರು? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಉತ್ತರವಾಗಿ ಶ್ರೀ ಎ. ಆರ್. ಕೃ. ರವರು—"ಈ ಕವಿಯು ಕೆಳದೀವರ ಬಸವೇಂದ್ರಾಶ್ರಿತ"ನೆಂದು ಹೇಳಿಕೊಂಡಿದ್ದಾನೆಯಷ್ಟೆ. ಬಸವಪ್ಪನಾಯಕನೆಂಬ ಹೆಸರಿನವರು ಇಬ್ಬರಿದ್ದಾರೆ. ಇವರಲ್ಲಿ ಮೊದಲನೆಯವನು ಶಕ ೧೬೨೦ ರಿಂದ ೧೬೩೭ ರವರೆಗೆ ಆಳಿದನು. ಇವನಿಗೆ ಹಿರಿಯ ಬಸವಪ್ಪನಾಯಕನೆಂದು ಹೆಸರು. (ಪು. ೧೭೦) ಎರಡನೆಯವನು ಶಕ ೧೬೬೨ ರಿಂದ ೧೬೭೬ ರವರೆಗೆ ಆಳಿದನು. (ಪುಟ ೧೯೬) ಹಿರಿಯ ಬಸವಪ್ಪನಾಯಕನು ಪಂಡಿತರಿಗೆ ಆಶ್ರಯನಾಗಿದ್ದನೆಂದು ಅವನ ಕಾಲದಲ್ಲಿ ಹುಟ್ಟಿದ ಗ್ರಂಥಗಳಿಂದ ಗೊತ್ತಾಗುತ್ತದೆ. ಇದರಿಂದ ಅವನ ಕಾಲದಲ್ಲಿಯೇ ಲಿಂಗಣ್ಣನೂ ಇದ್ದನೆಂದು ಹೇಳುವುದಕ್ಕಾಗುವುದಿಲ್ಲ. ಏಕೆಂದರೆ ಈ ಗ್ರಂಥದಲ್ಲಿ ಶಕ ೧೬೮೫ ರವರೆಗೂ ನಡೆದ ಚರಿತ್ರೆಯು ಹೇಳಿದೆ. ಆದ್ದರಿಂದ ಈತನು ಎರಡನೆಯ ಬಸವಪ್ಪನ ಕಾಲದಲ್ಲಿ ಎಂದರೆ ಕ್ರಿ. ಶ. ೧೭೫೦ ರ ಸುಮಾರಿನಲ್ಲಿದ್ದನೆಂದು ಹೇಳಬಹುದು. ಈತನು ಜೀವಿಸಿದ್ದ ಕಾಲವನ್ನು ಖಂಡಿತವಾಗಿ ಗೊತ್ತುಮಾಡುವುದಕ್ಕೆ ಸದ್ಯಕ್ಕೆ ಯಾವ ಸಾಧನಗಳೂ ದೊರೆತಿಲ್ಲ" ಎಂದಿದ್ದಾರೆ.[77] ನಿಜ, ಶ್ರೀ ಎ. ಆರ್. ಕೃ. ರವರು ಮುನ್ನುಡಿ ರಚಿಸುವ ಕಾಲದಲ್ಲಿ ದೊರೆತಿರಲಿಲ್ಲ. ಆದರೆ, ಈಗ ಹಲವು ಸಾಧನಗಳು ಸಿಕ್ಕಿವೆ. ಮೊದಲನೆಯದು ಲಿಂಗಣ್ಣನು ಆಸ್ತಿ ಬದಲಾವಣೆಯನ್ನು ಕೇಳಿಕೊಂಡ ಪ್ರಕಾರ ಕೆಳದಿ ಬಸವಪ್ಪನಾಯಕನು ಅದನ್ನು ನಡೆಸಿಕೊಟ್ಟದ್ದು.[78] ಇದರಲ್ಲಿ

[77] ಕೆ. ನೃ. ವಿ. ಉಪೋ. ಪು. Vi. Vii.

[78] ಅನುಬಂಧ 15 ನೋಡಿ.

[79] ಅನುಬಂಧ 16 ನೋಡಿ.

ಸಾಗರದ ದಕ್ಷಿಣ ದಿಕ್ಕಿನಲ್ಲಿರುವ ಶಿರವಂತೆ ಸೀಮೆಯು ಕೆಳದಿಗೆ ತುಂಬಾ ದೂರವಿರುತ್ತದೆ. ಆದರೆ ಕವಿ ಲಿಂಗಣ್ಣನ ಆ ಆಸ್ತಿಯನ್ನು ರಾಮಪ್ಪನೆಂಬುವನು ತೆಗೆದುಕೊಂಡು ಅದಕ್ಕೆ ಬದಲಾಗಿ, ಕೆಳದಿಗೆ ಸಮೀಪದಲ್ಲಿರುವ ಸುಳುಗೋಡಿನ ಒಂದು ಆಸ್ತಿಯನ್ನು ಕೊಡ ಬೇಕೆಂದು ತಿಳಿಸಿದೆ. ಈ ರಾಜಶಾಸನದ ಕಾಲ ರೌದ್ರಿ ಸಂವತ್ಸರದ ಆಶ್ವೀಜಶುದ್ಧ ೧೦. ಅಂದರೆ ಕ್ರಿ. ಶ. ೧೭೪೦ ಸೆಪ್ಟೆಂಬರ್ ೧೯ ಶುಕ್ರವಾರವಾಗುತ್ತದೆ. ಈ ಕಾಲದಲ್ಲಿ ಕೆಳದಿಯ ಸಿಂಹಾಸನಕ್ಕೆ ಆಗತಾನೆ ಬಂದಿದ್ದವನು ಕಿರಿಯ ಬಸವಪ್ಪನಾಯಕ. ಈತನೇ ಲಿಂಗಣ್ಣನ ಈ ಅಲ್ಪ ಬೇಡಿಕೆಯನ್ನು ಈಡೇರಿಸಿದ್ದಾನೆ ಎಂದು ಊಹಿಸಬಹುದಾಗಿದೆ.

ಮತ್ತೊಂದು ಆಧಾರವೆಂದರೆ ಆಸ್ತಿ ವಿಭಾಗದ ಪತ್ರ.[79] ಕವಿ ಲಿಂಗಣ್ಣನು ಬದುಕಿದ್ದಾಗಲೇ ಅವನ ಮಕ್ಕಳು ಪಾಲು ಪಡೆದು ಬೇರೆಯಾದರು. ಲಿಂಗಣ್ಣನ ಮಗ ಶಾಮನು ತನ್ನ ತಮ್ಮನಾದ ವೆಂಕಣ್ಣನಿಗೆ ತಂದೆ ಲಿಂಗಣ್ಣನ ಅನುಮತಿಯ ಮೇರೆಗೆ ಚರಸ್ಥಿರ ಆಸ್ತಿಗಳನ್ನು ಹಂಚಿಕೊಟ್ಟಿದ್ದಾನೆ. ಇದು ೧೬೮೦ ನೆಯ ಈಶ್ವರ ಸಂವತ್ಸರದ ವೈಶಾಖ ಬಹುಳ ೭ ರಲ್ಲಿ ಎಂದಿದೆ. (ಆದರೆ ೧೬೮೦ ಕ್ಕೆ ಈಶ್ವರ ಬರುವುದಿಲ್ಲ, ಬಹುಧಾನ್ಯ ಬರುತ್ತದೆ.) ಈ ಲೆಕ್ಕಕ್ಕೆ ೧೭೫೭ ಮೇ ೧೦ ನೆಯ ತಾರೀಖು ಮಂಗಳವಾರ ವಾಗುತ್ತದೆ. ಈ ವೇಳೆಗಾಗಲೇ ಕಿರಿಯ ಬಸವಪ್ಪ ನಾಯಕನ ಆಳ್ವಿಕೆ ಮುಗಿದು ಕೇವಲ ಎರಡು ವರ್ಷಗಳಾಗಿರುತ್ತವೆ.

ಇದರಿಂದ ನಮಗೆ ಕ್ರಿ. ಶ. ೧೭೫೭ ಲಿಂಗಣ್ಣನ ಮುಪ್ಪಿನ ಕಾಲ, ಪ್ರಾಪ್ತ ವಯಸ್ಕರಾದ ಮಕ್ಕಳು ಹೊಂದಿಕೊಂಡು ಬಾಳದೆ ಆಸ್ತಿ ವಿಭಾಗ ಮಾಡಿಕೊಂಡು ಹೋದದ್ದೂ, ಕವಿಗೆ ರಾಜಾಶ್ರಯ ತಪ್ಪಿದ್ದೂ ತಿಳಿಯುತ್ತದೆ. ಬಹುಶಃ ಪಾರ್ವತೀ ಪರಿಣಯವನ್ನು ಈ ವೇಳೆಯಲ್ಲಿ ಬರೆದಿರಬೇಕು. ಆದ್ದರಿಂದಲೆ ಅದರಲ್ಲಿ ತನ್ನ ಪ್ರಭು ವಿನ ಸ್ಮರಣೆ ಮಾಡಿಲ್ಲ. ಅಂತೂ ಲಿಂಗಣ್ಣನ ಕಡೆಯ ದಿನಗಳು ತುಂಬಾ ದಾರುಣ ವಾದುವೆಂದು ಊಹಿಸಬಹುದಾಗಿದೆ.

ಮೇಲಿನ ಆಧಾರಗಳಿಂದ ಡಾ|| ಶಿವರಾಮ ಕಾರಂತರು ಹೇಳುವಂತೆ ಐರಾವತವೇ ಮೊದಲಾದ ಪ್ರಸಂಗಗಳು, ಹನೂಮದ್ರಾಮಾಯಣ ಮತ್ತು ರುಕ್ಮಿಣೀ ಸ್ವಯಂವರ ಪಾರಿಜಾತಗಳನ್ನು ಬರೆದ ಸುಬ್ಬ ಒಬ್ಬನಲ್ಲವೆಂತಲೂ, ಶ್ರೀ ಕುಕ್ಕಿಲ ಕೃಷ್ಣಭಟ್ಟರು ಹೇಳುವಂತೆ ಆಡುವಳ್ಳಿಯ ಹನೂಮದ್ರಾಮಾಯಣದ ಕರ್ತೃವೂ ಪಾರಿಜಾತ ಮತ್ತು ರುಕ್ಮಿಣೀ ಸ್ವಯಂವರದ ಕರ್ತೃವೂ ಒಬ್ಬನೇ ಅಲ್ಲವೆಂತಲೂ, ಆಡುವಳ್ಳಿಯ ಸುಬ್ಬನ ತಂದೆ ವೆಂಕಾಮಾತ್ಯನೇ ಬೇರೆ, ಕೆಳದೀ ಸುಬ್ಬನ ತಂದೆ ವೆಂಕಪನೇ ಬೇರೆ ಎಂಬುದು

[79] ಅನುಬಂಧ 16 ನೋಡಿ.

ಸ್ಪಷ್ಟವಾಗುತ್ತದೆ. "ಕ್ರಿ. ಶ. ೧೭೩೯ ರಿಂದ ೧೭೫೪ ರವರೆಗೆ ಕೆಳದಿ ರಾಜ್ಯವನ್ನು ಆಳಿದವನು ಎರಡನೆಯ ಬಸವಪ್ಪ ನಾಯಕನು. ಆಮೇಲೆ ಮೂರು ವರ್ಷ ಇವನ ದತ್ತ ಪುತ್ರನಾದ ಮೂರನೆಯ ಬಸವಪ್ಪನು ಆಳಿದ ಕಾಲ. ಈ ಇಬ್ಬರಲ್ಲಿ ಒಬ್ಬನ ಅಥವಾ ಇಬ್ಬರ ಕಾಲದಲ್ಲಿ ಸಹ ವೆಂಕಾರ್ಯನು ಅವರ ಆಶ್ರಯವನ್ನು ಪಡೆದುದಿರಬೇಕು. ಎರಡನೆಯ ಬಸವಪ್ಪನ ರಾಣಿಯು ನೀತಿಭ್ರಷ್ಟಳಾಗಿ ದತ್ತಪುತ್ರನನ್ನು ಕೊಲ್ಲಿಸಿ ತನ್ನ ನಿರಂಕುಶ ಪ್ರಭುತ್ವವನ್ನು ಮೆರೆಯಿಸುತ್ತಿದ್ದ ಸಂದರ್ಭವು ಹೈದರಾಲಿಗೆ ಅನುಕೂಲವಾಯಿತೆಂದು ಚರಿತ್ರೆಯಿಂದ ತಿಳಿಯುತ್ತದೆ. ಎರಡನೆಯ ಬಸವಪ್ಪನ ಕಾಲದಲ್ಲಿ ಆತನನ್ನು ಆಶ್ರಯಿಸಿಕೊಂಡಿದ್ದು ರಾಣಿಯ ಕಾಲದಲ್ಲಿ ಪ್ರಾಯಶಃ ಪದಚ್ಯುತನಾಗಿದ್ದಿರಬಹುದಾದ ಅತ್ಯಂತ ಬುದ್ಧಿಶಾಲಿಯೂ ಸಮರ್ಥನೂ ಆಗಿದ್ದ ವೆಂಕಾರ್ಯನನ್ನು ಹೈದರಾಲಿಯು ಅಮಾತ್ಯನನ್ನಾಗಿ ನೇಮಿಸಿಕೊಂಡಿರಬೇಕೆಂದು ನ್ಯಾಯವಾಗಿ ಅನುಮಾನಿಸಬಹುದು. ಸುಬ್ಬನ ಬಾಲ್ಯದಲ್ಲಿ ಈತನು ರುಕ್ಮಿಣೀ ಸ್ವಯಂವರವನ್ನು ರಚಿಸುವಾಗ ಕೆಳದಿಯ ಆ ರಾಜನ ಆಶ್ರಯದಲ್ಲಿದ್ದ ವೆಂಕಾರ್ಯನಿಗೆ ಅನಂತರ ಸುಬ್ಬನು 'ಪಾರಿಜಾತ' ಮತ್ತು ಹನೂಮದ್ರಾಮಾಯಣಗಳನ್ನು ರಚಿಸುವಾಗ ರಾಜಾಶ್ರಯವು ತಪ್ಪಿರಬೇಕು. ಆದುದರಿಂದಲೇ ಈ ಎರಡು ಗ್ರಂಥಗಳಲ್ಲಿ ತನ್ನ ತಂದೆಯ ರಾಜಾಶ್ರಯವನ್ನು ಕುರಿತು ಸುಬ್ಬನು ಪ್ರಸ್ತಾಪಿಸಲಿಲ್ಲ. ತದನಂತರ ವೆಂಕಟನು 'ಮೈರಾವಣ ಕಾಳಗ'ವನ್ನು ರಚಿಸುವಾಗ ವೆಂಕಾರ್ಯನು ಹೈದರಾಲಿಯ ಮಂತ್ರಿಯಾಗಿದ್ದುದರಿಂದ 'ವೆಂಕಾರ್ಯಪ್ರಧಾನನಂ' ಎಂದು ತನ್ನ ಅಜ್ಜನನ್ನು ವೆಂಕಟನು ಹೊಗಳಿದ್ದಾನೆ."[80] ಎಂಬ ಶ್ರೀ ಕುಕ್ಕಿಲ ಕೃಷ್ಣಭಟ್ಟರ ಈ ಮೇಲಿನ ಒಂದು ಮಾತೂ ಸತ್ಯವಲ್ಲ. ಸತ್ಯವೆಂದು ನಂಬುವುದಾದರೆ, ಬಸವಪ್ಪನ ರಾಣಿ ನೀತಿಭ್ರಷ್ಟಳಾದ್ದರಿಂದ ಕೆಳದಿ ಹೈದರನ ವಶವಾಗಲಿಲ್ಲ ಅಥವಾ ಹಾಳಾಗಲಿಲ್ಲ; ಅನ್ನ ತಿಂದ ಮನೆಗೆ ಕನ್ನ ಹಾಕುವ ಮಾಸರ್ಾದಕ ಬುದ್ಧಿಯ ಅಮಾತ್ಯರಿಂದ ಎಂದು ಹೇಳಬೇಕಾಗುತ್ತದೆ. ಆದರೆ ಗಣಸಹಸ್ರನಾಮ, ಪಾರ್ವತೀವಲ್ಲಭಶತಕ, ನರಹರಿವಿಜಯ ಇವೆಲ್ಲಕ್ಕಿಂತಲೂ ಮಿಗಿಲಾಗಿ ಕೆಳದೀ ರಾಮೇಶ್ವರನನ್ನು ಕುರಿತ ರಾಗ ತಾಳಗಳಿಂದ ಕೂಡಿದ ಅಮೂಲ್ಯವಾದ ಭಕ್ತಿಗೀತೆಗಳನ್ನು ರಚಿಸಿ ಆನಂದದಿಂದ ಹಾಡಿ ನಲಿದು, ಪರಮಾತ್ಮನ ಪಾದಾರವಿಂದ ಸೇರಿದ ಸಾತ್ತ್ವಿಕ ಸ್ವಭಾವದ ಕೆಳದಿ ವೆಂಕಾರ್ಯ "ಅಂತಹ ದ್ರೋಹಿಯಲ್ಲ" ಆತನು ಕೆಳದಿಯ ಲಿಂಗಣ್ಣನ ಮಗನೇ ಹೊರತು ರಾಮಪುರಿಯ ಹಂಪೆಯಾಮಾತ್ಯನ ಮಗನಲ್ಲ.

ಈಗ ಕ್ರಮವಾಗಿ ಈ ಹಲವು ವೆಂಕ, ಸುಬ್ಬರ ವಂಶವನ್ನು ಹೀಗೆ ಗುರುತಿಸೋಣ:

---

[80] ಮಧುಪುರ. ಪು. 143.

೧. ರಾಮುಪುರಿಯ
ಹಂಪೆಯಾಮಾತ್ಯ
|
ವೆಂಕಾರ್ಯ : (ಕ್ರಿ. ಶ. ೧೭೭೦) ಹೈದರನ ಪ್ರಧಾನಿ, "ಬಾಲವಾಲ್ಮೀಕಿ"; ಶ್ರೀಮದ್ರಾಮಾಯಣದ ಕರ್ತೃ. (೯೮೬೫ ವಾರ್ಧಕಷಟ್ಪದಿ ಪದ್ಯಗಳು)
|
ಸುಬ್ಬ : (ಕ್ರಿ. ಶ. ೧೭೭೫) (ಲಕ್ಷ್ಮಿಯ ಗಂಡ) ಆಜಪುರ ಅಥವಾ ಆಡುವಳ್ಳಿಯವ. ಹನೂಮದ್ರಾಮಾಯಣದ ಕರ್ತೃ. (ಕಂದಪದ್ಯಗಳಿಂದ ಕೂಡಿದ ಕಾವ್ಯ)
|
ವೆಂಕಟ : (೧೯ನೆಯ ಶತಮಾನದ ಆದಿಭಾಗ) : ಸರಸಿಜೋದ್ಭವನಾಮುಪುರ (ಆಡುವಳ್ಳಿ), ಮೈರಾವಣ ಕಾಳಗದ ಕರ್ತೃ.

೨. ದೈವಜ್ಞ ವಿಠಲ :
ಮತ್ತು ಗೌರಿ
|
ನಗರದ ಸುಬ್ಬ : (ಕಾಲ ೧೯ನೆಯ ಶತಮಾನದ ಆದಿಭಾಗ) ರಾವಣೋದ್ಭವ (ಅಪ್ಪಣ್ಣ ಜೋಯಿಸ) ಮತ್ತು ಶಂಬರಾಸುರ ಕಾಳಗದ ಕರ್ತೃ.

೩. ವೆಂಕಪ : ?
|
ಲಿಂಗಣ್ಣ : (ಕ್ರಿ.ಶ. ೧೭೪೦) — (ಕಿರಿಯ ಬಸವಪ್ಪನ ಆಶ್ರಿತ)
ಕೃತಿಗಳು :- i) ಕೆಳದಿನೃಪವಿಜಯಂ
ii) ದಕ್ಷಾಧ್ವರ ವಿಜಯಂ
iii) ಪಾರ್ವತೀಪರಿಣಯಂ
iv) ಶಿವಕಲ್ಯಾಣಂ
v) ಶಿವಪೂಜಾದರ್ಪಣಂ
|
ವೆಂಕ-
(ಪತ್ನಿದೇವಮ್ಮ) : (ಕ್ರಿ.ಶ. ೧೭೫೦)
ಕೃತಿಗಳು : — i) ಗಣಸಹಸ್ರನಾಮ
ii) ನರಹರಿ ವಿಜಯ
iii) ಕೆಳದಿ ರಾಮೇಶ್ವರನ ಕುರಿತ ಹಾಡುಗಳು
iv) ಪಾರ್ವತೀವಲ್ಲಭ ಶತಕ
|
ಚೆನ್ನಯ್ಯ | ಸುಬ್ಬ (ಕ್ರಿ. ಶ. ೧೭೭೦)

ಕೃತಿಗಳು :— i) ರುಕ್ಮಿಣೀ ಸ್ವಯಂವರ,
ii) ಪಾರಿಜಾತ

4. ಪಾರ್ವತೀನಂದನ-ಸುಬ್ಬ : (ಪಾರ್ತಿಸುಬ್ಬ) :
ಕಾಲ : (೧೯ನೆಯ ಶತಮಾನದ ಆದಿಭಾಗ)
ಸ್ಥಳ : ಕುಂಬಳೆ.

ಕೃತಿಗಳು : i) ಪುತ್ರಕಾಮೇಷ್ಠಿ – ಸೀತಾಸ್ವಯಂವರ
ii) ಪಟ್ಟಾಭಿಷೇಕ
iii) ಪಂಚವಟಿ – ವಾಲಿಸಂಹಾರ
iv) ಚೂಡಾಮಣಿ – ಉಂಗುರಸಂಧಿ
v) ಸೇತುಬಂಧನ
vi) ಅಂಗದ ಸಂಧಾನ
vii) ಕುಂಭಕರ್ಣಾದಿ ಕಾಳಗ
viii) ಕುಶಲವರ ಕಾಳಗ – ಮೊದಲಾದ ರಾಮಾಯಣ ಪ್ರಸಂಗಗಳು ಮತ್ತು
ix) ಐರಾವತ (ಭಾರತ ಪ್ರಸಂಗ)
x) ಕೃಷ್ಣ ಚರಿತೆ – ಬಾಲಲೀಲೆ – (ಗೋಪೀ ವಸ್ತ್ರಾಪಹಾರದವರೆಗೆ)
(ಭಾಗವತ ಪ್ರಸಂಗ)

(iv) **ಸಾರಸ್ವತ ವ್ಯಾಕರಣದ ಪ್ರತಿ ಮಾಡಿದ ಸುಬ್ಬ :**

ಇಷ್ಟು ಜನ ಸುಬ್ಬರಲ್ಲದೆ, ಕಾಶೀಕಾಂಡಚೆನ್ನವೀರನ ಸಾರಸ್ವತ ವ್ಯಾಕರಣವನ್ನು ಪ್ರತಿ ಮಾಡಿದ, ಕವಿ ಲಿಂಗಣ್ಣನ ವಂಶಕ್ಕೆ ಸೇರಿದ, ಕೆಳದಿಯವನೇ ಆದ ಮತ್ತೊಬ್ಬ ಸುಬ್ಬ ಕಾಣಸಿಗುತ್ತಾನೆ. ಉಪಲಬ್ಧವಿರುವ ಈ ಕೃತಿಯ ಅಂತ್ಯದಲ್ಲಿ "ಶ್ರೀ ಮನ್ಮಹಾಶಾಲಿವಾಹನ ಶಕ ೧೭೪೦ನೆಯ ಯುವಸಂವತ್ಸರ ಕಾರ್ತೀಕ ಮಾಸಸ್ಯ ದ್ವಿತೀಯ ಭಾರ್ಗವವಾಸರ ಯುಕ್ತಾಯಾಂ ಶತಭೀಷ ತಾರಾಯಾಂ ಪ್ರಾತರ್ಷಡ್ಘಟಿಕಾಯಾಂ । ವಂಶಪುರಿಸ್ಥೇನ ಸುಬ್ಬಣ್ಣಾಖ್ಯೇನ ಲೇಖಿತ ಸಾರಸ್ವತ ನಾಮ ವ್ಯಾಕರಣ ಸುಪುಸ್ತಕಸ್ಯ ಸಂಪೂರ್ಣ ಮಂಗಳಮಸ್ತು."

"ಶ್ರೀ ಗುರು ಬಸವಲಿಂಗಾಯ ನಮಃ"[81]

—ಎಂದಿದೆ.

ಈ ಹೇಳಿಕೆಯ ಪ್ರಕಾರ ಸಾರಸ್ವತ ವ್ಯಾಕರಣವನ್ನು ಪ್ರತಿ ಮಾಡಿದವನು ವಂಶಪುರಿ. ಅಂದರೆ (ವಂಶ–ಬಿದಿರು, ಪುರಿ–ಊರು) ಬಿದನೂರಿನ, ಸುಪ್ಪಣ್ಣಾಖ್ಯ ಅಂದರೆ ಸುಬ್ಬಣ್ಣ ಎಂಬುವನು ಕ್ರಿ.ಶ. ೧೮೧೮ರಲ್ಲಿ ಪ್ರತಿಮಾಡಿದನು ಎಂದು ತಿಳಿಯುತ್ತದೆ. ಆದರೆ ಈ ಸುಬ್ಬಣ್ಣನು ಪಾರಿಜಾತ ಮತ್ತು ರುಕ್ಮಿಣೀ ಸ್ವಯಂವರಗಳ ಕರ್ತೃವಾಗಿರಲಾರ. ಏಕೆಂದರೆ ಪ್ರತಿಮಾಡಿದ ಕಾಲಕ್ಕೂ, ಕೆಳದಿಯ ಪ್ರಸಂಗಕಾರ ಸುಬ್ಬನ ಕಾಲಕ್ಕೂ ಸುಮಾರು ಒಂದು ನೂರು ವರ್ಷಗಳ ಅಂತರ ಇದೆ. ಆದ್ದರಿಂದ ಕಾಶೀಕಾಂಡಚೆನ್ನವೀರ ಮಾಹೇಶ್ವರನಿಂದ ವಿರಚಿತವಾದ ಸಾರಸ್ವತ ವ್ಯಾಕರಣವನ್ನು ಪ್ರತಿ ಮಾಡಿದವನು ಕೆಳದಿಯ ಲಿಂಗಣ್ಣನ ಮೊಮ್ಮಗನ ಮಗ ಅಂದರೆ ಪಾರಿಜಾತ ಮತ್ತು ರುಕ್ಮಿಣೀ ಸ್ವಯಂವರಗಳನ್ನು ಬರೆದ ಸುಬ್ಬನ ಮಗನಿದ್ದಿರಬೇಕು. ಈ ಸುಬ್ಬಣ್ಣನ ಜನ್ಮಲಗ್ನ ಕುಂಡಲಿಯೊಂದು ದೊರೆಯುತ್ತದೆ.[82] ಅವನು ಹುಟ್ಟಿದ್ದು ಶಕವರುಷ ೧೭೯೫ ಅಂದರೆ ಕ್ರಿ.ಶ. ೧೭೭೩ರಲ್ಲಿ. ಅವನ ೪೫ನೆಯ ವಯಸ್ಸಿನಲ್ಲಿ ತನ್ನ ಸ್ವಂತ ಅಧ್ಯಯನಕ್ಕಾಗಿಯೋ ಇಲ್ಲವೇ ವಿದ್ಯಾರ್ಥಿಗಳಿಗೆ ವ್ಯಾಕರಣ ಹೇಳುವುದ ಕ್ಕಾಗಿಯೋ ಚೆನ್ನವೀರನ ಸಾರಸ್ವತ ವ್ಯಾಕರಣವನ್ನು ಪ್ರತಿ ಮಾಡಿಕೊಂಡಿದ್ದಾನೆ.

## v) ಚೆನ್ನವೀರ ಮಾಹೇಶ್ವರ

ಕೆಳದಿಯ ಸಾಹಿತ್ಯಸಹ್ಯಾದ್ರಿಯನ್ನೇರುವ ರಸಿಕವಿಹಾರಿಗೆ ಅದರ ತಪ್ಪಲಿನ ಕುಂಟಿಕಾಪುರದಲ್ಲಿ ಓರ್ವ ಮಾಹೇಶ್ವರನ ದರ್ಶನವಾಗುತ್ತದೆ. ಅವನೇ ಚೆನ್ನವೀರಕವಿ ಅಥವಾ ಕಾಶೀಕಾಂಡಚೆನ್ನವೀರ ಅಥವಾ ಚೆನ್ನವೀರಮಾಹೇಶ್ವರ. "ಇವನು ವೀರಶೈವ ಕವಿ; ಯಾಗಂಟಿ ಶರಭಲಿಂಗ ಭಕ್ತನು, ತೈತ್ತರೀಯ ಯಜುಃಶಾಖಾಧ್ಯಾಯಿ, ಅತ್ರಿಗೋತ್ರದವನು, ವೀರಮಾಹೇಶ್ವರ ತಂತ್ರ ಸೂತ್ರದವನು, ಶಿವಲೆಂಕಮಂಚಣ ಪಂಡಿತಾರಾಧ್ಯ ವಂಶೋದ್ಭವನು; ಇವನ ತಂದೆ ಕೋಕಿಲಾಕುಂಡ ಸಂಗನ ಗುರುಲಿಂಗ, ತಾಯಿ ನಂದ್ಯಂಬಿ, ಗುರುಪಿತೃವ್ಯ ನಂಬ್ಯಣ್ಣ, ಸ್ಥಳ ಸಹ್ಯಾದ್ರಿಯ ತಪ್ಪಲಲ್ಲಿರುವ ಕುಂಟಿಕಾಪುರ."[83] ಇವನು (೧) ಶಬ್ದಮಣಿ (ಸಾರಸ್ವತ ವ್ಯಾಕರಣ ಕನ್ನಡ ಟೀಕಾ), (೨) ಕಾಶೀಕಾಂಡ, (೩) ನಮಕ – ಚಮಕ ಅಥವಾ ಶ್ರೀರುದ್ರ

[81] O.R.I./S.P. 5087 ಗರಿ 54 (a)

[82] ಅನುಬಂಧ 10 ನೋಡಿ.

[83] ಕ.ಕ.ಚ. II; ಪು. 169.

ಕರ್ನಾಟಕ ಸಟೀಕಾ, (೪) ವೀರಮಾಹೇಶ್ವರ ತಂತ್ರದ ಟೀಕು - ಮೊದಲಾದ ಗ್ರಂಥಗಳ ಕರ್ತೃ. ಇವನ ಹೆಸರು, ಕುಲ, ಗೋತ್ರ, ಜನ್ಮಸ್ಥಳ ಮತ್ತು ಕೃತಿಗಳ ಬಗೆಗೆ ಸಂದೇಹವಿಲ್ಲದಿದ್ದರೂ, ಇವನು ಬಾಳಿ ಬದುಕಿ ಕೃತಿರಚನೆ ಮಾಡಿದ ಕಾಲ ಮತ್ತು ದೊರಕಿಸಿಕೊಂಡ ರಾಜಾಶ್ರಯ ಇವುಗಳು ಸಮಸ್ಯೆಗಳಾಗಿಯೇ ಇವೆ. ಇವುಗಳಿಗೆ ಕಿಂಚಿತ್ ಪರಿಹಾರವನ್ನು ಒದಗಿಸುವ ಪ್ರಯತ್ನ ಇಲ್ಲಿ ನಡೆದಿದೆ.

ಚೆನ್ನವೀರ ಎಲ್ಲಿಯವನು ?—

ಮೊದಲನೆಯದಾಗಿ, ಚೆನ್ನವೀರ ತನ್ನ ಜನ್ಮಸ್ಥಳವನ್ನು ಸಹ್ಯಾದ್ರಿ ತಪ್ಪಲಿನ ಕುಂಟಿಕಾಪುರವೆಂದು ಕಾಶಕೃತ್ಸ್ನ ಧಾತು ಕರ್ಣಾಟಕ ಟೀಕು, ಶ್ರೀರುದ್ರದ ಕರ್ನಾಟಕ ಟೀಕು, ಸಾರಸ್ವತ ವ್ಯಾಕರಣ ಟೀಕು, ಪುರುಷಸೂಕ್ತದ ಟೀಕು ಈ ಗ್ರಂಥಗಳ ಪ್ರತಿ ಅಧ್ಯಾಯಾಂತ್ಯಗಳಲ್ಲೂ ಹೇಳಿಕೊಂಡಿದ್ದಾನೆ. ಈ ಕುಂಟಿಕಾಪುರ ಯಾವುದೋ ತಿಳಿಯದು. ಕುಂದಾಪುರ ಇರಬಹುದು, ಕುಮಟ ಇರಬಹುದು. ಆದರೆ ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ನಿರಂಜನ ಪ್ರಣವಸ್ವರೂಪಿ ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಬರೆದ ಪತ್ರವೊಂದರಲ್ಲಿ ತಿಳಿಸಿರುವಂತೆ ತುಮಕೂರಿನ ಹತ್ತಿರದ ಗೂಳೂರಿನ ಬಳಿಯಿರುವ 'ಕೊಂಡಾಪುರ'[84] ಆಗಲಾರದು ಎನ್ನಿಸುತ್ತದೆ.

ಏಕೆಂದರೆ, ಅದು ಕೆಳದೀ ಷಡ್ದೇಶಕ್ಕೆ ಸೇರಿದ್ದು ಎಂಬುದಾಗಿ ತನ್ನ ಪುರುಷ ಸೂಕ್ತ ಟೀಕುವಿನಲ್ಲಿ ತಿಳಿಸಿದ್ದಾನೆ.[85] ಇದರಿಂದ ತಿಳಿಯುವುದು ಇಷ್ಟೆ—

ಚೆನ್ನವೀರ ಕವಿಯು ಜನ್ಮಸ್ಥಳ ಕುಂಟಿಕಾಪುರ. ಅದು ಸಹ್ಯಾದ್ರಿಯ ಸುಂದರ ಸಾನುಪ್ರದೇಶದ ತಪ್ಪಲಿನ, ಕೆಳದೀ ಷಡ್ದೇಶಕ್ಕೆ ಸೇರಿದ ಒಂದು ಊರು. ಆದರೆ ಈತನು ತನ್ನ ಯೌವನದ ದಿನಗಳನ್ನು ಕೆಳದಿಯಲ್ಲಿ ಕಳೆದಿದ್ದಿರಬೇಕು. ಕೆಳದಿ ಅರಸರಿಗೆ ಗುರುವಾಗಿದ್ದುಕೊಂಡು ವ್ಯಾಕರಣವೇ ಮೊದಲಾದ ಹಲವು ಕೃತಿಗಳನ್ನು ರಚಿಸಿದ್ದಿರಬೇಕು. ಹೇಗೆಂದರೆ ಈತನು ತನ್ನ 'ಕಾಶಕೃತ್ಸ್ನಧಾತು ಕರ್ಣಾಟಕ ಟೀಕಾ'ದ ಅಂತ್ಯದಲ್ಲಿ 'ಶ್ರೀ ಕೆಳದಿ ವೀರೇಶಾಯ ನಮಃ। ಶುಭಮಸ್ತು॥ ಶೋಭನಮಸ್ತು, ನಿರ್ವಿಘ್ನಮಸ್ತು.... ಶ್ರೀ ಶ್ರೀ ಶ್ರೀ'—ಇತ್ಯಾದಿಯಾಗಿ ಹೇಳಿ ಕೆಳದಿಯ ವೀರೇಶನನ್ನು ಸ್ಮರಿಸಿದ್ದಾನೆ.[86] ತನ್ನ ಸಾರಸ್ವತ ವ್ಯಾಕರಣದಲ್ಲೂ ಶ್ರೀರುದ್ರ ಟೀಕುವಿನಲ್ಲೂ ಕೆಳದಿಯ ಹೆಸರನ್ನು ಹೇಳದೆ, ಅನಂತರದ ಕಾಶಕೃತ್ಸ್ನ

---

[84] ಎ. ಎನ್. ನರಸಿಂಹಯ್ಯ, ಕಾಶಕೃತ್ಸ್ನ ಶಬ್ದಕಲಾಪ ಧಾತುಪಾಠ, ಪೀಠಿಕೆ ಪು. xvi.

[85] ಸಟೀಕ ಪುರುಷಸೂಕ್ತಂ, ಪು. 20.

[86] ಧಾತುಪಾಠ ಪು. 302 ; ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯ ಸಂ. ಕೆ. 453 ಪ್ರತಿಯ ಗರಿ 80 ರಲ್ಲೂ ಇದೇ ಇದೆ.

ಧಾತು ಟೀಕಾ, ಪುರುಷಸೂಕ್ತ ಟೀಕಾ ಇವುಗಳಲ್ಲಿ ಕೆಳದಿಯನ್ನು ಹೆಸರಿಸಿರುವುದರಿಂದ ಈತನು ಕೆಳದಿಗೆ ಬರುವ ಮುನ್ನವೇ ಸಾರಸ್ವತ ವ್ಯಾಕರಣವನ್ನೂ, ಶ್ರೀರುದ್ರ ಟೀಕುವನ್ನೂ ರಚಿಸಿದ್ದಿರಬೇಕೆಂದೂ, ಕೆಳದಿಗೆ ಬಂದು ಕಾಶಕೃತ್ಸ್ನ ಧಾತು ಟೀಕಾವನ್ನು ರಚಿಸಿ, ಪ್ರಸಿದ್ಧನಾಗಿ ಕೆಳದಿಯನ್ನಾಳುತ್ತಿದ್ದ ರಾಜನ ಗೌರವಕ್ಕೆ ಪಾತ್ರನಾಗಿ,[87] ಅರಮನೆಗೆ ಗುರುವಾಗಿ ಪುರುಷಸೂಕ್ತ ಟೀಕಾ ಬರೆಯುವ ಹೊತ್ತಿಗೆ ತನ್ನನ್ನು ಚೆನ್ನವೀರ ಮಾಹೇಶ್ವರನೆಂದು ಕರೆದುಕೊಂಡಿದ್ದಾನೆಂದು ಹೇಳಬಹುದು.[88] ಅಲ್ಲದೆ "ಕಾಶೀಕಾಂಡ ಚೆನ್ನವೀರಕವಿ" ಎಂದು ತನ್ನನ್ನು ವಿಶೇಷಿಸಿಕೊಂಡಿರುವುದರಿಂದ ಸ್ಕಾಂದ ಪುರಾಣಾಂತರ್ಗತವಾದ ಕಾಶೀಕಾಂಡವನ್ನು ಕನ್ನಡಕ್ಕೆ ಕೊಟ್ಟಿರಬೇಕು, ಕೆಳದಿಯ ಜನತೆ ಅಥವಾ ಪ್ರಭು ಅವನನ್ನು ಹಾಗೇ ಕರೆದಿರಬೇಕು. ಅದೇ ರೂಢಿಯಲ್ಲಿ "ಕಾಶೀಕಾಂಡ ಚೆನ್ನವೀರ ಕವಿ" ಎಂದು ಪ್ರಸಿದ್ಧಿಗೆ ಬಂದಿರಬೇಕು.

ಎರಡನೆಯದಾಗಿ ಚೆನ್ನವೀರ ಯಾರು? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಉತ್ತರ ಕೊಡುವುದು ಮತ್ತೂ ಕಷ್ಟ.

ಶಿವತತ್ತ್ವರತ್ನಾಕರದ ಆದಿಯಲ್ಲಿ ಒಂದು ಆಚಾರ್ಯ ಪರಂಪರೆಯ ಪಟ್ಟಿಯೂ,[89] ಕೆಳದಿ ಬನದ ಗದ್ದೆ ಮಠದ ಕಡತವೊಂದರಲ್ಲಿ ಮಠದ ರಾಜಗುರು ಪರಂಪರೆಯ ಪಟ್ಟಿಯೂ[90] ಸಿಗುತ್ತವೆ.

---

[87] ಬಹುಶಃ 1546 ರಿಂದ 1559 ರವರೆಗೆ ಆಳಿದ ದೊಡ್ಡ ಸಂಕಣ್ಣನಾಯಕನಿದ್ದಿರಬಹುದು.

[88] 'ಮಾಹೇಶ್ವರ' ಎಂದು ಕರೆದುಕೊಂಡಿರುವುದರಿಂದ ಪುರುಷಸೂಕ್ತದ ರಚನೆಯ ವೇಳೆಗೆ ಚೆನ್ನವೀರ ಮಠದ ಸ್ವಾಮಿಯಾಗಿದ್ದಿರಬೇಕು.

[89] ಜಾತಸ್ತತ್ಪುರುಷಾಹ್ವಯಾದ್ವದನತಃ ಯೋ ರೇವಣ ಸಿದ್ಧರಾಟ್ ।
ಕಿಂಚಾಘೋರ ಮುಖಾಚ್ಚಯೋ ಮರುಳುಸಿದ್ಧೇಶಃ ಪ್ರಸಿದ್ಧೋ ಭವತು ।
ಜಗ್ನೇಕಾಮದ ವಾಮದೇವ ವದನಾದ್ಯಃ ಪಂಡಿತಾಚಾರ್ಯಕಃ
ಸದ್ಯೋಜಾತ ಮುಖೋದಿತೋಪ್ಯವತುಮಾಂ ಯಶ್ಚೈಕ ರಾಮೋಗುರುಃ ॥
ಆಸೀದುಜ್ಜಯನೀ ಪತಿರ್ಮರುಲಸಿದ್ಧೇಶೋ ಗುರುಃ ಪ್ರಸ್ಸುರಾದೇಶೋ ।
ವಸಂತದೇವ ಮಹಿತ ಶ್ರೀ ಮಲ್ಲಿಕಾದ್ಯರ್ಜುನಾ ।
ವೀರಶ್ಚೆನ್ನಪರಃ ತತೋ ಗುರುಪದಸ್ವಾಮಿ ವಸಂತ ।
ಸ್ತ ತಸ್ತಸ್ಮಾದುನ್ನತ ಚೆನ್ನವೀರ ವಿಭುರಿತ್ಯಾಚಾರ್ಯ ಪಾರಂಪರೀ ॥

—ಶಿವತತ್ತ್ವ ರತ್ನಾಕರ I, I, 6-7;
(ಮದರಾಸ್ ಪ್ರಕಟಣೆ)

[90] ಇದು ಇತ್ತೀಚೆಗೆ ದೊರೆತ ಮಾಹಿತಿ. ಇದನ್ನು ಒದಗಿಸಿಕೊಟ್ಟ ಶ್ರೀ ಕುಪ್ಪೂರು ಗದ್ದಿಗೆ ಮಠದ ಷ॥ ಬ್ರ॥ ಶ್ರೀ ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರಿಗೆ ತುಂಬಾ ಕೃತಜ್ಞರಾಗಿದ್ದೇವೆ.

ಅವು ಹೀಗಿವೆ—

ಉಜ್ಜಯಿನಿ ಪೀಠದ
ಆಚಾರ್ಯ ಪರಂಪರೆ

ಶ್ರೀ ವಸಂತದೇವ
|
ಶ್ರೀ ಮಲ್ಲಿಕಾರ್ಜುನ
|
ಚೆನ್ನವೀರ (ವೀರೇಶ್ವಚನ್ನಪರ)
|
ಗುರುಪಾದಸ್ವಾಮಿ
|
ವಸಂತದೇವ
|
ಚೆನ್ನವೀರಸ್ವಾಮಿ

ಬನದಗದ್ದೆ ಮಠದ ರಾಜಗುರು ಪರಂಪರೆ

ಕೆಂಚವೀರವೊಡೆಯರು (ಸ್ಕಂದಗೋತ್ರ ಸಮುತ್ಪನ್ನರೂ, ಶಿವಸಿದ್ಧಾಂತ ಕೋವಿದರೂ ಆದವರು)
|
?
|
ಚನ್ನವೀರೇಶ
?
|
?
|
?
|
?
|
ಶಿವಲಿಂಗಸ್ವಾಮಿ
|
ಚೆನ್ನವೀರಸ್ವಾಮಿ (ರಾಜೋಟಿಸ್ವಾಮಿ)
|
ಸಿದ್ಧಲಿಂಗಸ್ವಾಮಿ
|
ಶಿವಲಿಂಗಸ್ವಾಮಿ
|
ಚನ್ನವೀರಸ್ವಾಮಿ
|
ರೇವಣಸಿದ್ಧಸ್ವಾಮಿ
|
ರೇವಣಸಿದ್ಧಸ್ವಾಮಿ
|
ರೇವಣಸಿದ್ಧ ಶಿವಾಚಾರ್ಯಸ್ವಾಮಿ

ಇಲ್ಲಿ ಐವರು ಚೆನ್ನವೀರರು ಬರುತ್ತಾರೆ. ಇವರಲ್ಲಿ ಯಾವನಾದರೊಬ್ಬ ಚೆನ್ನವೀರ ಹಿಂದೆ ತಿಳಿಸಿದ ಕನ್ನಡ ಟೀಕು, ವ್ಯಾಕರಣ ಹಾಗೂ ಕಾಶೀಕಾಂಡ ಕಾವ್ಯ- ಇವುಗಳ ರಚಕನಾಗಿರಬಹುದು. ಆಗಿದ್ದರೆ ಈ ಐವರಲ್ಲಿ ಯಾರು? ವಿಚಾರ ಮಾಡೋಣ. ಅದಕ್ಕೆ ಮುಂಚೆ ನಮ್ಮನ್ನು ಕಾಡುತ್ತಿರುವ ಒಂದೆರಡು ಪ್ರಾಥಮಿಕ ಪ್ರಶ್ನೆಗಳಿಗೆ ಉತ್ತರ ನೀಡುವುದು ಅತ್ಯಗತ್ಯ.

ಮೊದಲನೆಯದಾಗಿ, ಉಜ್ಜಯಿನಿಯ ಪೀಠದ ಆಚಾರ್ಯ ಪರಂಪರೆಗೂ, ಶಿವತತ್ತ್ವರತ್ನಾಕರ ಕೊಟ್ಟಿರುವ ಆಚಾರ್ಯ ಪರಂಪರೆಗೂ ಸಂಬಂಧ ಇದೆಯೇ? ಇಲ್ಲ. ಅನಾದಿ ಕಾಲದಿಂದಲೂ ಬೆಳೆದುಬಂದ ವೀರಶೈವ ಪಂಚಪೀಠಗಳಲ್ಲಿ ಒಂದಾದ ಉಜ್ಜಯನೀ ಸದ್ಧರ್ಮ ಪೀಠದ ಆಚಾರ್ಯ ಪರಂಪರೆಗೂ, ಶಿವತತ್ತ್ವರತ್ನಾಕರದ ಗುರು ಪರಂಪರೆಗೂ ಸಾಮ್ಯತೆ ಕಂಡು ಬರುವುದಿಲ್ಲ. ಅದೇ ಬೇರೆ ಇದೇ ಬೇರೆ ಎನ್ನಿಸುತ್ತದೆ. ಹಾಗಿದ್ದರೆ ಹಿರಿಯ ಬಸವಪ್ಪ ನಾಯಕನು ಶಿವತತ್ತ್ವರತ್ನಾಕರದಲ್ಲಿ ಈ ಆಚಾರ್ಯ ಪರಂಪರೆಯನ್ನೇಕೆ ಕೊಟ್ಟ? ಈ ಪ್ರಶ್ನೆಗೆ ಉತ್ತರ ಕೊಡಬೇಕಾದರೆ ನಾವು ಸಾಗರದ ಸುತ್ತಮುತ್ತಲಿನಲ್ಲಿ ಇಂದಿಗೂ ಜನಜನಿತವಾಗಿರುವ ಐತಿಹ್ಯಗಳಿಗೆ ಶರಣು ಹೋಗಬೇಕಾಗುತ್ತದೆ. ಆ ಪ್ರದೇಶದಲ್ಲಿ ಇಂದಿಗೂ ಕೆಳದಿ ರಾಜ್ಯ ಸ್ಥಾಪನೆಗೆ ಮೂಲ ಕಾರಣರಾದವರು ವೀರಶೈವಪಂಚಪೀಠಗಳಲ್ಲೊಂದಾದ ಉಜ್ಜಯಿನಿಯ ಪೀಠಾಧಿಪತಿಯಾದ ಓರ್ವ ಜಗದ್ಗುರು ಎಂದು ತಿಳಿಯುತ್ತದೆ. ಓರ್ವ ಜಂಗಮ ಜ್ಯೋತಿಯು ಮಲೆನಾಡಿನ ಮಡಿಲಲ್ಲಿ ತಪೋಮಗ್ನರಾಗಿದ್ದಾಗ ಚೌಡಪ್ಪನೆಂಬೊಪ್ಪ ಮಲವಗೌಡನು ಶ್ರೀ ಗುರುವಿನ ದರ್ಶನಾಶೀರ್ವಾದಗಳನ್ನು ಪಡೆದು, ಅವರ ಆದೇಶದಂತೆ ರಾಜ್ಯ ಸ್ಥಾಪನೆ ಮಾಡಿದ ಎಂದಿದೆ. ಆ ಜಂಗಮರೇ ಉಜ್ಜಯಿನಿ ಜಗದ್ಗುರು ಪೀಠಕ್ಕೆ ಸೇರಿದವರೆಂದು ಜನ ಹೇಳುತ್ತಾರೆ. ಈ ಐತಿಹ್ಯದಲ್ಲಿ ಸತ್ಯಾಂಶವಿರಬೇಕು. ಇಲ್ಲದಿದ್ದರೆ ಕೆಳದಿ ಪ್ರಭು ಬಸವರಾಜೇಂದ್ರನು ಎಲ್ಲಾ ಬಿಟ್ಟು ಉಜ್ಜಯಿನಿಯ ಆಚಾರ್ಯ ಪರಂಪರೆಯನ್ನು ತನ್ನ ಕೃತಿಯಲ್ಲಿ ಉಲ್ಲೇಖಿಸುವ ಅಗತ್ಯ ಇರುತ್ತಿರಲಿಲ್ಲ. ಆದರೆ ಈ ಪರಂಪರೆಯಲ್ಲಿ ಬರುವ ಗುರುಗಳು ಬಹುಶಃ ಮೂಲ ಉಜ್ಜಯಿನಿ ಜಗದ್ಗುರು ಸದ್ಧರ್ಮ ಪೀಠದ ಶಾಖಾನುವರ್ತಿಗಳಾಗಿದ್ದಿರಬೇಕು. ಮೂಲತಃ ಕೆಳದಿ ಮಠ ಪಟ್ಟದ ಮಠ; ಉಜ್ಜಯಿನೀ ಶಾಖಾಮಠ.

ಎರಡನೆಯದಾಗಿ ಮೇಲೆ ಕಾಣಿಸಿದ ಗುರು ಪರಂಪರೆಯ ಎರಡು ಪಟ್ಟಗಳಿಗೂ ಏನಾದರೂ ಸಂಬಂಧ ಇದೆಯೇ? ಬಹುಶಃ ಇದೆ. ಅಷ್ಟೇ ಅಲ್ಲ ಇವೆರಡೂ ಪಟ್ಟಗಳ ಒಬ್ಬಿಬ್ಬರು ಏಕವ್ಯಕ್ತಿಗಳಾಗಿರಲು ಸಾಧ್ಯ.[91] ಮುಖ್ಯವಾಗಿ ಆಚಾರ್ಯ ಪರಂಪರೆಯ

[91] ನಾಮಸಾದೃಶವೊಂದನ್ನು ಬಿಟ್ಟರೆ ಹೀಗೆ ಹೇಳಲು ಬೇರಾವ ಆಧಾರವೂ ಇಲ್ಲ.

ಕಡೆಯವನಾದ ಚೆನ್ನವೀರಸ್ವಾಮಿಯು ಶಿವತತ್ತ್ವರತ್ನಾಕರದ ಕರ್ತೃ, ಹಿರಿಯ ಬಸವಪ್ಪನಾಯಕನ ಗುರು. ಆದುದರಿಂದಲೇ ಆತ ತನ್ನ ವಂಶಕ್ಕೆ ಸಂಬಂಧಿಸಿದ ಗುರು ಪರಂಪರೆಯನ್ನು ಹೆಸರಿಸಿ, ತನ್ನ ಗುರುವಿನವರೆಗೆ ಆ ಪಟ್ಟಿಯನ್ನು ತಂದು ನಿಲ್ಲಿಸಿದ. ಈ ಚೆನ್ನವೀರನೂ, ಬನದಗದ್ದೆ ಮಠದ ರಾಜಗುರು ಪರಂಪರೆಯಲ್ಲಿ ಬರುವ ಶಿವಲಿಂಗ ಸ್ವಾಮಿಗಳ ಕರಸಂಜಾತನಾದ, ವಿದ್ವತ್ ಸಭಾ ಸರಸ್ವತಿ ಕೆಳದೀ ಗಂಗಾದೇವಿಯ ಪತಿಯಾದ ಚೆನ್ನವೀರಸ್ವಾಮಿಯೂ ಒಬ್ಬ ವ್ಯಕ್ತಿಯಾಗಿರಬಹುದು. ಅದೇ ರೀತಿ ಆಚಾರ್ಯ ಪರಂಪರೆಯಲ್ಲಿ ಮೂರನೆಯವನಾದ ಚೆನ್ನವೀರ (ವೀರೇಶ್ವನ್ನಪರೆ) ನು ಬನದ ಗದ್ದೆ ಮಠದ ರಾಜಗುರು ಪರಂಪರೆಯ ಮೂರನೆಯವನಾದ ಚೆನ್ನವೀರೇಶನೂ ಏಕವ್ಯಕ್ತಿಯಾಗಿರಬಹುದು. ಬಹುಶಃ ಈ ಚೆನ್ನವೀರನೇ ಕಾಶೀಕಾಂಡದ ಚೆನ್ನವೀರ ಮಾಹೇಶ್ವರನಾಗಿರಬಹುದು. ಹೇಗೆಂದರೆ " ವೀರಶೈವಾಚಾರ ಕೌಸ್ತುಭ " ಎಂಬ ಗ್ರಂಥವನ್ನು ರಚಿಸಿದ ಮೌನಪ್ಪ ಪಂಡಿತನ ದೀಕ್ಷಾಗುರುವೂ,[92] ಹಿರಿಯ ಬಸವಪ್ಪ ನಾಯಕನ ಶಿಕ್ಷಾಗುರು, ದೀಕ್ಷಾಗುರು, ಮೋಕ್ಷಗುರುವೂ ಆಗಿರುವ ಚೆನ್ನವೀರಸ್ವಾಮಿಯು ಯಾವ ಕೃತಿಗಳನ್ನೂ ರಚಿಸಿರುವುದಾಗಿ ಯಾವ ಗ್ರಂಥಗಳೂ ಉಲ್ಲೇಖಿಸುವುದಿಲ್ಲ. ಅಲ್ಲದೆ ಅವನ ಧರ್ಮಪತ್ನಿಯೆನಿಸಿದ, ಕೆಳದಿ ರಾಜಾಭ್ಯುದಯಮ್ ಕಾವ್ಯ ರಚಿಸಿದ ಗಂಗಾದೇವಿ ಯಾಗಲಿ, ಶಿವತತ್ತ್ವರತ್ನಾಕರ ಕರ್ತೃವಾದ ಬಸವಪ್ಪನಾಯಕನಾಗಲೀ ಚೆನ್ನವೀರ ಸ್ವಾಮಿ ಕೃತಿಕಾರನೆಂದು ಎಲ್ಲೂ ಹೇಳುವುದಿಲ್ಲ. ಕೆಳದಿ ರಾಜಾಭ್ಯುದಯಮ್ ಅಪೂರ್ಣ ಕೃತಿ. ಅದರ ಕಡೆಯ ಭಾಗದಲ್ಲಿ ಗಂಗಾದೇವಿ ತನ್ನ ಪತಿಯ ಬಗೆಗೆ ಏನಾದರೂ ಹೇಳಿರಬಹುದೆಂಬ ಸಂದೇಹ ಮೂಡಿದರೂ, ಉಪಲಬ್ಧವಿರುವ ಬಸವೇಂದ್ರನ ಶಿವತತ್ತ್ವರತ್ನಾಕರವೆಂಬ ವಿಶ್ವಕೋಶದಲ್ಲಿ ತನ್ನ ಗುರು, ಕವಿ, ಅಥವಾ ಭಾಷ್ಯಕಾರ ಅಥವಾ ವೈಯಾಕರಣಿ ಎಂದು ಎಲ್ಲೂ ಹೇಳದೇ ಇರುವುದರಿಂದ ಕಾಶೀಕಾಂಡ ಚೆನ್ನವೀರ ಬಸವರಾಜನ ಗುರು, ಗಂಗಾದೇವಿಯ ಪತಿ ಚೆನ್ನವೀರಸ್ವಾಮಿ ಅಲ್ಲ ಎಂಬುದು ಸ್ಪಷ್ಟ.

ಅದೇ ರೀತಿ ಬನದಗದ್ದೆ ಮಠದ ರಾಜಗುರು ಪರಂಪರೆಯಲ್ಲಿ ಕಡೆ ಕಡೆಯಲ್ಲಿ ಬರುವ ಮತ್ತೊಬ್ಬ ಚೆನ್ನವೀರಸ್ವಾಮಿಯೂ ಕಾಶೀಕಾಂಡ ಚೆನ್ನವೀರನಲ್ಲ. ಹೇಗೆಂದರೆ ಗಂಗಾದೇವಿಯ ಪತಿಯಾದ ಚೆನ್ನವೀರನೂ, ಅವನಾದಮೇಲೆ ಬರುವ ಇನ್ನೊಬ್ಬ ಚೆನ್ನವೀರನೂ ಕ್ರಮವಾಗಿ ಶಿವಲಿಂಗಸ್ವಾಮಿ ಮತ್ತು ಮತ್ತೊಬ್ಬ ಶಿವಲಿಂಗಸ್ವಾಮಿ ಎಂಬ ಗುರುಗಳ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು. ಆದರೆ ವೈಯಾಕರಣಿ, ಕಾಶೀ

[92] ಇತಿ ಶ್ರೀ ಮದನಾದಿ ಪ್ರಮಥ ಪರಂಪರಾಗತ ಷಟ್ಸ್ಥಲ ಜ್ಞಾನಬೋಧಕಾಚಾರ್ಯ ವರ್ಯವರ ಗುರುಬಸವಯತಿವರಲಬ್ಧ ಬುದ್ಧಿವಿಕಾಸೇನ ವೀರಶೈವ ದೀಕ್ಷಾಗುರು ಚೆಂನವೀರಸ್ವಾಮಿ ಕರಕಮಲ ಸಂಜಾತೇನ ಮೌನಪ್ಪ ವಿದುಷಾಕೃತೇ ವೀರಶೈವಾಚಾರ ಕೌಸ್ತುಭೆ ...." ವೀರಶೈವಾಚಾರ ಕೌಸ್ತುಭ, ಕಾಂಡಪಂತ್ಯ. ಕನ್ನಡ ಅಧ್ಯಯನ ಸಂಸ್ಥೆ, ಓಲೆ ಪ್ರತಿ ಕೆ. ಪಿ. 324.

ಕಾಂಡಕವಿ ಚೆನ್ನವೀರನ ತಂದೆ ಸಂಗನ ಗುರುಲಿಂಗ ಮತ್ತು ತಾಯಿ ಸಂದ್ಯಂಬ. ಆ ಕಾರಣ ಆಚಾರ್ಯ ಪರಂಪರೆ ಮತ್ತು ರಾಜಗುರು ಪರಂಪರೆ ಪಟ್ಟಿಗಳಲ್ಲಿ ಕಾಣ ಸಿಗುವ ಮೂರನೆಯ ಪಟ್ಟಾಧಿಕಾರಿ ವೀರೇಶ್ವರನ್ನಪರ ಅಥವಾ ಚೆನ್ನವೀರೇಶನೇ ಕಾಶೀ ಕಾಂಡ ಮೊದಲಾದ ಗ್ರಂಥಗಳ ಕರ್ತೃವಾಗಿದ್ದಿರಬೇಕು. ಶಿವತತ್ತ್ವ ರತ್ನಾಕರದ ಕಾಲವನ್ನು ಕೇಂದ್ರವಾಗಿಟ್ಟುಕೊಂಡು ಅಳೆಯ ಹೊರಟರೆ ಈ ಕಾಶೀಕಾಂಡ ಚೆನ್ನವೀರ ಸುಮಾರು ಕ್ರಿ. ಶ. ೧೫೪೬ ರಿಂದ ೧೫೭೦ ರವರೆಗೆ ಕೆಳದಿಯನ್ನಾಳಿದ ದೊಡ್ಡ ಸಂಕಣ್ಣನ ಕಾಲಕ್ಕೆ ಬರಬಹುದು. ಅಂದರೆ ಅವನ ಕಾಲವನ್ನು ಸುಮಾರು ಕ್ರಿ. ಶ. ೧೫೫೦ ಎಂದು ಹೇಳಬಹುದಾಗಿದೆ.

ಚೆನ್ನವೀರ ಮಾಹೇಶ್ವರನು ತಾನು ರಾಜಗುರುವಾದ್ದರಿಂದ ಎಲ್ಲೂ ರಾಜನನ್ನು ಹೊಗಳಿ ತನ್ನನ್ನು ಸಣ್ಣವನನ್ನಾಗಿ ಮಾಡಿಕೊಂಡಿಲ್ಲ. ಇದು ಸೂಕ್ತವೂ ಆಗಿದೆ. ಅಲ್ಲದೆ, ದೊಡ್ಡ ಸಂಕಣ್ಣನ ಆಳ್ವಿಕೆಯ ಕಾಲವೆಂದರೆ ಕೆಳದಿಯು ರಾಜಕೀಯವಾಗಿ ಸುಭದ್ರತೆಯನ್ನೂ ಆರ್ಥಿಕವಾಗಿ ಸಂತೃಪ್ತಿಯನ್ನೂ ಪಡೆದಿದ್ದ ಕಾಲ. ಆಗ ಧಾರ್ಮಿಕನೂ ಸ್ವಯಂಕಲಾವಿದನೂ, ವಿದ್ವಾಂಸನೂ ಆದ ದೊಡ್ಡ ಸಂಕಣ್ಣನು ಹಲವು ಕೃತಿಗಳನ್ನು ರಚಿಸಿದನೆಂದು ಮಾಹಿತಿ ಇದೆ.[93] ಆದರೆ ಅವನ ಕೃತಿಗಳು ಯಾವುವೆಂಬುದು ನಮಗೆ ಇಂದು ತಿಳಿಯುತ್ತಿಲ್ಲ. ಆದರೂ ಸ್ವಯಂ ಕವಿಯಾದ ರಾಜನು, ಕವಿಜನಾಶ್ರಯನೂ ಆಗಿರುವುದು ಸಹಜ. ಹಾಗೆ ನೋಡಿದರೆ ಚೆನ್ನವೀರ ಮಾಹೇಶ್ವರನು ದೊಡ ಸಂಕಣ್ಣನಿಗೆ ರಾಜಗುರುವಾಗಿದ್ದು, ಅವನ ಆಸ್ಥಾನವನ್ನು ಅಲಂಕರಿಸಿದ್ದಿರಬೇಕು. ನಾವು ಮೊದಲೇ ತಿಳಿಸಿದಂತೆ ಚೆನ್ನವೀರನು ಕೆಳದೀ ರಾಜಗುರುವಾಗುವ ಮುನ್ನ ಕುಂಟಿಕಾಪುರದಲ್ಲೀ ಇದ್ದುಕೊಂಡು ಶ್ರೀರುದ್ರ ಮತ್ತು ಸಾರಸ್ವತ ವ್ಯಾಕರಣಕ್ಕೆ "ಕನ್ನಡ ಟೀಕಾ" (ಶಬ್ದಮಣಿ) ಇವುಗಳನ್ನು ರಚಿಸಿದ್ದಿರಬೇಕು. ಏಕೆಂದರೆ ಸ್ವಾರಸ್ವತ ವ್ಯಾಕರಣದಲ್ಲಿ—

"ಇತಿಶ್ರೀಮದ್ಯಾಗಂಟಿ ಶರಭಾವತಾರಾತ್ರೇಯ ಮಂಚನ ಪಂಡಿತಾನ್ವಯ ಕುತಿಕುಂಟಿ (ಕೋಕಿಲಾಕುಂಡ) ಸಂಗನ ಗುರುಲಿಂಗ ಸಂದ್ಯಂಬಾ ಗರ್ಭವಾರಾಶಿಚಂದ್ರ ಚೆನ್ನವೀರ ಕವಿ ವಿರಚಿತ ಸಾರಸ್ವತ ಮುನಿ ವಿರಚಿತ ಕಳಸಾ ವ್ಯಾಕರಣ ಕರ್ಣಾಟಕ ಟೀಕಾಯಾಂ ಧಾತುಪಾಠಃ ಸಮಾಪ್ತಃ"[94] ಎಂದಿದ್ದಾನೆ. ಇಲ್ಲಿ ಕವಿ ತನ್ನನ್ನು

---

[93] 'In the state of Ikkeri we must mention Sankanna Nayaka who composed severai Literary works' - Heras, Aravidu. P. 523.

[94] ಶಬ್ದಮಣಿ (ಸಾರಸ್ವತ ವ್ಯಾಕರಣ ಕರ್ಣಾಟಕ ಟೀಕಾ) ಗ್ರಂ. 54.

ತಾನು ಹೆಚ್ಚು ವಿಶೇಷಿಸಿಕೊಂಡಿಲ್ಲ. (ಶ್ರೀರುದ್ರ ಕರ್ನಾಟಕದ ಸಟೀಕಾದಲ್ಲೂ ಹೆಚ್ಚು ವಿಶೇಷಿಸಿಕೊಂಡಿಲ್ಲ.) ಅಲ್ಲದೆ ಕಾಶೀಕಾಂಡವನ್ನು ರಚಿಸಿದಂತೆಯೂ ಇಲ್ಲ. ಆದರೆ ಕಾಶಕೃತ್ಸ್ನ ಶಬ್ದಕಲಾಪ ಧಾತುಪಾಠಕ್ಕೆ ಬರೆದ ಕನ್ನಡ ಟೀಕುವಿನಲ್ಲಿ—

"ಇತಿಶ್ರೀಯಾಗಂಟಿ ಶರಭಲಿಂಗಪ್ರಸಾದಿ
ನಸ್ತ್ರಿತ್ರಿರಯಜುಶ್ಶಾಖಾಧ್ಯಯನಸ್ಯ
ವಾಮದೇವಮುಖೋದ್ಭೂತಸ್ಯ ಗಜಕರ್ಣ
ಪುತ್ರಸ್ಯಾತ್ರಿಗೋತ್ರಸ್ಯ ವೀರಮಾಹೇಶ್ವರ
ತಂತ್ರಸೂತ್ರಸ್ಯ ಶಿವಲೆಂಕಮಂಚನ
ಪಂಡಿತಾರಾಧ್ಯಪ್ರವರಸ್ಯ ಕೋಕಿಲಾಕುಂಡಸ್ಯ
ಸಂಗನ ಗುರುಲಿಂಗನಂಬ್ಯಂಬಾ ಕುಮಾರಸ್ಯ
ಪಿತೃವ್ಯನಂಬ್ಯಣ ಗುರುಕರಜಾತಸ್ಯ ಸಹ್ಯಾದ್ರಿ
ಕಟಕಷಡ್ಡೇಶಸ್ಯ ಕುಂಟಿಕಾಪುರಸ್ಯ
ಕಾಶೀಕಾಂಡ ಚನ್ನವೀರಕವಿ ಕೃತೌ ಕಾಶಕೃತ್ಸ್ನ
ಧಾತು ಕರ್ಣಾಟ ಟೀಕಾಯಾಂ....
....ಲೇಖಕ ಪಾಠಕಶ್ರೋತೃಣಾಂ
ಸಂಸ್ಕೃತಾರ್ಥ ಪ್ರಕಾಶಿಕಾ ಭೂಯಾತ್"[95]

ಎಂದು ತನನ್ನು "ಕಾಶೀಕಾಂಡ ಚೆನ್ನವೀರ" ಎಂಬುದಾಗಿ ವಿಶೇಷಿಸಿಕೊಂಡಿದ್ದಾನೆ. ಆದರೆ ಪುರುಷ ಸೂಕ್ತದ ಕರ್ಣಾಟಕ ಟೀಕುವಿನಲ್ಲಿ — "ಇತಿ ಸಹ್ಯಾದ್ರಿ ಕೆಳದೀ ಷಡ್ಡೇಶಕುಂಟಿಕಾಪುರಸ್ಯ ಕಾಶೀಕಾಂಡ ಚನ್ನವೀರ ಮಾಹೇಶ್ವರೇಣ ಕೃತಾ ಪುರುಷ ಸೂಕ್ತಸ್ಯ ಟೀಕಾ ಸಮಾಪ್ತಾ" ಎಂದು ತಾನು ಮಾಹೇಶ್ವರನೆಂದು ಹೇಳಿಕೊಂಡಿದ್ದಾನೆ. ಇದರಿಂದ ಕವಿಯು ಕುಂಟಿಕಾಪುರದಿಂದ ಕೆಳದಿಯ ಆಸ್ಥಾನದವರೆಗೆ, ರಾಜಗೌರವವನ್ನು ಪಡೆವವರೆಗೆ ಹಂತ ಹಂತವಾಗಿ ತನ್ನ ಕಾವ್ಯಶ್ರೀಯೊಂದಿಗೆ ಬೆಳೆದಿದ್ದಾನೆ, ಬೆಳಗಿದ್ದಾನೆ ಎಂದು ಊಹಿಸಬಹುದಾಗಿದೆ.

---

[95] ಕಾಶಕೃತ್ಸ್ನ ಶಬ್ದಕಲಾಪ ಧಾತುಪಾಠ:, (ಸಂ.): ಎಂ. ಎಸ್. ನರಸಿಂಹಯ್ಯ; ಪ್ರತಿ ವಿಭಾಗದ ಕೊನೆಯಲ್ಲಿ ಬರುವ ಆನುಪೂರ್ವಿ ನೋಡಿ.

## (vi) ಗಂಗಾದೇವಿ

ಕ್ರಿ. ಶ. ೧೯೬೧ ರಲ್ಲಿ ನಾವು ನಡೆಸಿದ ಮಲೆನಾಡಿನ ಪ್ರವಾಸದಲ್ಲಿ ಕೆಳದಿಗೆ ಸಂಬಂಧಿಸಿದ ಕೆಲವು ಮಾಹಿತಿಗಳು, ಗ್ರಂಥಗಳು ಸಿಕ್ಕಿದುವು. ಅವುಗಳಲ್ಲಿ "ಕೆಳದಿ ರಾಜಾಭ್ಯುದಯಮ್" ಒಂದು. ಗ್ರಂಥ ಅಪೂರ್ಣವಾಗಿದ್ದು,[96] ಕಾಗದದ ಮೇಲೆ ಬರೆದ ಒಂದು ಹಸ್ತಪ್ರತಿಯಾಗಿದ್ದಿತು. ಅದರ ಆರಂಭದಲ್ಲಿ "ಕರ್ಣಾಟಕವಿಪರಮೇಶ್ವರಿ, ವಿದ್ವತ್ಸಭಾ ಸರಸ್ವತಿ, ಕೆಳದೀ ಗಂಗಾದೇವಿ ವಿರಚಿತಂ—ಕೆಳದಿ ರಾಜಾಭ್ಯುದಯಮ್" ಎಂತಲೂ, ಮೊದಲ ಸೋಪಾನದ ಅಂತ್ಯದಲ್ಲಿ "ಇದು ವೇದಾಗಮ ಸಾಧಿತ ಶ್ರೀಮದ್ವೀರಶೈವ ಷಟಸ್ಥಲೈಕಮೇವಾದ್ವಿತೀಯ ಪರಶಿವ ಬ್ರಹ್ಮಪಾದಾರವಿಂದ ಮಧುಕರಿ ಶ್ರೀಮತ್ ಕೆಳದೀರಾಯ ರಾಜಗುರು ಶ್ರೀ ಚೆನ್ನವೀರ ಶಿವಾಚಾರ್ಯ ಪುಣ್ಯಾವಲ್ಲಭೆ ಕವಿಪರಮೇಶ್ವರಿ ಗಂಗಾದೇವಿ ವಿರಚಿತಮಪ್ಪ ಕೆಳದೀ ರಾಜಾಭ್ಯುದಯ ಪ್ರಬಂಧದೊಳ್ ಇಷ್ಟದೇವತಾ ಸ್ತುತಿ, ಕವಿ ಪ್ರಸ್ತಾಪಮಪ್ಪ ಪ್ರಥಮಸೋಪಾನಮ್" ಎಂದಿತ್ತು. ಓದಿದಾಗ ಅದರಲ್ಲಿನ ವಿಷಯ ಹೀಗಿತ್ತು—

ಪ್ರಥಮ ಸೋಪಾನವು ಗ್ರಂಥದ ಉಪೋದ್ಘಾತವೆಂದು ತಿಳಿಯಿತು. ಅದರ ಪ್ರಕಾರ ಒಂದು ದಿನ ಬಸವರಾಜೇಂದ್ರನೂ ಅವನ ಪತ್ನಿ ಚೆನ್ನಮ್ಮಾಜಿಯೂ ತಮ್ಮ ಕುಲಗುರುಗಳಾದ ಬನದಗದ್ದೆ ಮಹಂತರ ಮಠಕ್ಕೆ ಬಂದು, ಗುರು ಹಾಗೂ ಗುರುಪತ್ನಿಯರನ್ನು ಸಂದರ್ಶಿಸಿ ಪ್ರತಿಭಾವಂತಳಾದಂತಹ ಗುರುಪತ್ನಿ ಗಂಗಾದೇವಿಯನ್ನು ಕುರಿತು ತಮ್ಮ ಕೆಳದೀ ಅರಸರ ವಂಶದ ಕಥೆಯನ್ನು ಬರೆಯುವಂತೆ ಪ್ರಾರ್ಥಿಸಿದರಂತೆ. ಅಂತೆಯೇ ಬಸವರಾಜನು ಕೃತಿಗೆ ಹಲವು ವಿಷಯಗಳನ್ನು ಒದಗಿಸಿಕೊಟ್ಟನಂತೆ. ರಾಜದಂಪತಿಗಳ ಪ್ರಾರ್ಥನೆ ಹಾಗೂ ತನ್ನ ಪತಿದೇವರ (ಚೆನ್ನವೀರಸ್ವಾಮಿಯವರ) ಆಜ್ಞೆ ಇವುಗಳನ್ನು ಮನ್ನಿಸಿ ಕವಿಪರಮೇಶ್ವರಿ ಗಂಗಾದೇವಿಯು "ಕೆಳದಿ ರಾಜಾಭ್ಯುದಯಮ್" ಎಂಬ ಕೃತಿಯನ್ನು ಬರೆಯಲು ಉದ್ಯುಕ್ತಳಾಗುತ್ತಾಳೆ. ದ್ವಿತೀಯ ಸೋಪಾನವು ಮಲ್ಲ ದೇಶದ ಬಸವಪ್ಪ-ಬಸವಾಂಬೆಯರ ದಾಂಪತ್ಯ ಜೀವನ, ಬಸವಪ್ಪನ ಮತ್ತು ಅವನ ಇಬ್ಬರು ಮಕ್ಕಳ ಮರಣ, ದುಃಖ, ಅದಕ್ಕೆ ಹೊರಗುಡಿಗೆಯ ಪಟ್ಟದ ರುದ್ರಮುನಿ ಸ್ವಾಮಿಗಳ ಸಮಾಧಾನ ಇತ್ಯಾದಿ ಕೆಳದಿ ರಾಜವಂಶಕ್ಕೆ ಸಂಬಂಧಿಸಿದ ವಿಷಯಗಳನ್ನೇ ಎತ್ತಿಕೊಂಡು ಅರ್ಧದಲ್ಲೇ ನಿಂತಿದೆ.[97]

---

[96] ಈ ಕೃತಿಯ ಹಸ್ತಪ್ರತಿಯನ್ನು ಕೊಟ್ಟವರು ಕೆಳದಿ ಮಠದ ಶ್ರೀ ರೇವಣಸಿದ್ಧ ಶಿವಾಚಾರ್ಯರು ; ಇದರ ಬಗೆಗೆ ವಿವರಣೆ ನೀಡಿದವರು ಫ. ಹ. ಶಿವಮೂರ್ತಿಯವರು; ಇದರ ಬಗೆಗೆ ಸಂದೇಹ ವ್ಯಕ್ತಪಡಿಸಿದವರು ಭುವನಗಿರಿ ಅಥವಾ ಕವಿಲೇದುರ್ಗದ ಸ್ವಾಮಿಗಳವರು. ಹಸ್ತಪ್ರತಿಯನ್ನು ಮಹಾಪ್ರಬಂಧಕ್ಕೆ ಅನುಕೂಲವಾಗಲೆಂದು ನಾವೇ ಅಚ್ಚು ಮಾಡಿಸಿದ್ದೇವೆ.

[97] ಒಂದೂವರೆ ಸೋಪಾನ ಮಾತ್ರ ಸಿಕ್ಕಿದೆ (ಅಪೂರ್ಣಗ್ರಂಥ)

ಇದರಿಂದ "ಕೆಳದಿ ರಾಜಾಭ್ಯುದಯಮ್" ಒಂದು ಐತಿಹಾಸಿಕ ಕಾವ್ಯ; ಕೆಳದಿ ಅರಸರ ಪೂರ್ವೋತ್ತರವನ್ನು ತಿಳಿಸುವ ಒಂದು ಕೃತಿ. ಇದನ್ನು ರಚಿಸಿದವಳು ಕೆಳದಿ ಅರಸರ ರಾಜಗುರು ಶ್ರೀ ಚೆನ್ನವೀರ ಶಿವಾಚಾರ್ಯರ ಧರ್ಮಪತ್ನಿ ಶ್ರೀಮತಿ ಗಂಗಾದೇವಿ. ಇವಳು ಕೆಳದಿಯನ್ನಾಳಿದ ಹಿರಿಯ ಬಸವಪ್ಪನಾಯಕನ ಕಾಲದಲ್ಲಿ ಅಂದರೆ ಕ್ರಿ. ಶ. ೧೬೯೮–೧೭೧೫ ರಲ್ಲಿ ಬಾಳಿ ಬದುಕಿದ ಕವಯಿತ್ರಿಯೆಂದೂ ತಿಳಿಯುತ್ತದೆ. ಆದರೆ ಈ ಅಪೂರ್ಣ ಗ್ರಂಥದ ಇತರ ಭಾಗಗಳನ್ನು ಹುಡುಕುತ್ತಿದ್ದಾಗ ಹಲವು ಸ್ಥಳೀಯ ವ್ಯಕ್ತಿಗಳು ಹಲವು ಸಂದೇಹಗಳನ್ನು ವ್ಯಕ್ತಪಡಿಸಿದರು. ಒಂದು ಮಾತ ಹೇಳಬೇಕೆಂದರೆ ಕೆಳದಿ ರಾಜಾಭ್ಯುದಯಂ ಇತ್ತೀಚಿನವರು ತಮ್ಮ ಅನುಕೂಲಕ್ಕಾಗಿ ಸೃಷ್ಟಿಸಿಕೊಂಡ ಕಾವ್ಯ. ಏಕೆಂದರೆ ಆಗ (ಕ್ರಿ. ಶ. ೧೯೬೧ ರಲ್ಲಿ) ಕೆಳದಿ ಮಠದ ವಿಷಯದಲ್ಲಿ ಕೋರ್ಟಿನಲ್ಲಿ ಮೊಕದ್ದಮೆ ಹೂಡಲಾಗಿತ್ತು. 'ಕೆಳದಿಮಠ' ಪುತ್ರವರ್ಗದ ಮಠವೇ ಅಥವಾ ಶಿಷ್ಯವರ್ಗದ ಮಠವೇ ಎಂದು. ಅದಕ್ಕೆ ಅನುಕೂಲವಾಗಲೆಂದು ಈ ಗ್ರಂಥವನ್ನು ಬರೆದಿದ್ದಾರೆ – ಎಂದು. ಇದಕ್ಕೆ ಪೋಷಕವಾಗಿ ಸಿಕ್ಕಿರುವ ಪ್ರತಿ ಓಲೆಯಲ್ಲ ಅಥವಾ ಹಿಂದಿನ ಕಾಲದ ಕರಡು ಕಾಗದದ ಪ್ರತಿಯೂ ಅಲ್ಲ. ಅದು ಈಗಿನ ಕಾಗದದ ಮೇಲೆ ಬರೆದದ್ದು. ಅದರ ಸ್ವರೂಪ ತುಂಬಾ ವಿಚಿತ್ರ. ಮೊದಲ ಸೋಪಾನ ಭಾಮಿನೀ ಷಟ್ಪದಿಯಲ್ಲಿದ್ದು, ದ್ವಿತೀಯ ಸೋಪಾನವು ಒಂದು ಕಂದ ಮತ್ತು ಸುದೀರ್ಘವಾದ ಗದ್ಯ ಇವುಗಳಿಂದ ಕೂಡಿದೆ. ಈ ರೀತಿಯ ರಚನೆ ಕನ್ನಡದಲ್ಲಿ ಅಪರೂಪ ಅಥವಾ ಇಲ್ಲವೇ ಇಲ್ಲ ಇತ್ಯಾದಿ ಜನಾಭಿಪ್ರಾಯಗಳು ಸಂದೇಹ ಹುಟ್ಟಿಸಿದುವು.

ಆದರೆ ಹೇಳಿಕೆ ಮಾತುಗಳಿಗಿಂತಲೂ ಗ್ರಾಂಥಿಕ ಅಥವಾ ಶಾಸನಾಧಾರಗಳು ಸಿಗುತ್ತವೆಯೋ ಎಂದು ನೋಡಿದಾಗ ಗ್ರಾಂಥಿಕ ಆಧಾರಗಳಾವುವೂ ದೊರೆಯಲಿಲ್ಲ. ಕೆಳದಿ ಗಂಗಾದೇವಿಯ ಬಗ್ಗೆ ಹಾಗೂ ಅವಳ ಕೃತಿಯ ಬಗ್ಗೆ ಬೇರೆ ಯಾವ ಕವಿಯೂ ಸ್ತುತಿಸಿರುವುದು ಕಂಡುಬರಲಿಲ್ಲ. ಅವಳೇ ರಚಿಸಿದಳೆಂದು ಹೇಳಲಾದ "ಕೆಳದಿ ರಾಜಾಭ್ಯುದಯ"ವೂ ಪೂರ್ಣವಾಗಿ ಸಿಗಲಿಲ್ಲ. ಆದರೆ ಕೆಲವು ಶಾಸನಗಳು ಅವಳ ಅಸ್ತಿತ್ವದ ಬಗ್ಗೆ, ಅವಳು 'ರಾಜಗುರು'ಗಳ ಪತ್ನಿಯಾಗಿದ್ದುದರ ಬಗ್ಗೆ ಸಾಕಷ್ಟು ಮಾಹಿತಿ ನೀಡುತ್ತವೆ.[98]

ಶ್ರೀ ಚೆನ್ನವೀರ ಶಿವಾಚಾರ್ಯರು ಕೆಳದಿ ಮಠದ ಗುರುಪರಂಪರೆಯಲ್ಲಿ ಬರುತ್ತಾರೆ. ಶಿವತತ್ತ್ವರತ್ನಾಕರವು ಆಚಾರ್ಯ ಪರಂಪರೆಯನ್ನು ತಿಳಿಸುತ್ತದೆ.

---

[98] ಅನುಬಂಧ ನೋಡಿ 3 — ಹುಲಿಕೆರೆ ಮಠದಲ್ಲಿರುವ ತಾಮ್ರಶಾಸನ — ಪದ್ಯ 4; ಅನುಬಂಧ-4—ಶಾಸನದ ಪದ್ಯ 6—ಆದರೆ ಎಂ. ಎ. ಆರ್. 1936 ನಂ. 66 ರಲ್ಲಿ ಕೆಳದಿ ಬಸವರಾಜೇಂದ್ರನು ಚೆನ್ನವೀರಸ್ವಾಮಿಗಳಿಗೆ ಕೊಟ್ಟ ಭೂದಾನದಲ್ಲಿ ಈಕೆಯ ಹೆಸರಾಗಲೀ ವಿಚಾರವಾಗಲೀ ಬಂದಿಲ್ಲ.

ಅದಕ್ಕನುಗುಣವಾಗಿ ಶಾಸನಗಳೂ ಕೆಳದಿ ಬನದಗದ್ದೆ ಮೂಲಪುರುಷರಾದ ಕೆಂಚವೀರ ಸ್ವಾಮಿಗಳಿಂದ ಆರಂಭವಾದ ಪುಣ್ಯ ಪರಂಪರೆಯಲ್ಲಿ ಚೆನ್ನವೀರಸ್ವಾಮಿಗಳ ಹೆಸರನ್ನೂ ಹೇಳುತ್ತವೆ. ಇವಿಷ್ಟನ್ನೂ ಹಿಂದೆ ಅವಲೋಕಿಸಿದ್ದೇವೆ. ಅಂತೆಯೇ ಈ ಮಠದ ಸ್ವಾಮಿಗಳಿಗೆ " ರಾಜಗುರು " ಎಂಬ ಬಿರುದು ಇದ್ದಂತೆ ತೋರುತ್ತದೆ. ಚೆನ್ನವೀರ ಸ್ವಾಮಿಯು ರಾಜಗುರುವಾಗಿದ್ದುದು ಹಿರಿಯ ಬಸವಪ್ಪನಾಯಕನಿಗೆ ಎಂಬುದು ಸ್ಪಷ್ಟ. ಹೇಗೆಂದರೆ, ಮೊದಲನೆಯದಾಗಿ ಶಿವತತ್ತ್ವರತ್ನಾಕರದಲ್ಲಿ ತನ್ನ ವಂಶವೃಕ್ಷವನ್ನು ಹೇಳುವ ಮುನ್ನ ತಮ್ಮ ಕುಲಗುರುಗಳ ಹೆಸರುಗಳನ್ನು ತಿಳಿಸುತ್ತಾ, ತನ್ನ ಕಾಲದ, ತನ್ನ ಗುರು ಶ್ರೀ ಚೆನ್ನವೀರಸ್ವಾಮಿಗಳೆಂದು ಹೇಳುತ್ತಾನೆ. ಎರಡನೆಯದಾಗಿ, ತಾನೇ ಹಾಕಿಕೊಟ್ಟ ಒಂದು ದಾನಶಾಸನವನ್ನು ತನ್ನ ತಾಯಿ ಚೆನ್ನಾಂಬೆ ಮತ್ತು ತಂದೆ ಸೋಮಶೇಖರ ಎಂದು ಸ್ಮರಿಸಿದ್ದಾನೆ. ಆದ್ದರಿಂದ ಅವರ ದತ್ತಕನಾದ ಬಸವರಾಜ ಹಿರಿಯ ಬಸವಪ್ಪನಾಯಕನೆಂಬುದರಲ್ಲಿ ಸಂದೇಹವಿಲ್ಲ. ಮೂರನೆಯದಾಗಿ, ಕೆಳದಿ ಗಂಗಾದೇವಿಯೂ ಸಹ ತನ್ನ ಕೃತಿಗೆ ಬೇಕಾದ ವಸ್ತುವನ್ನು ಬಸವರಾಜನೇ ಒದಗಿಸಿದ ನೆಂದು ಹೇಳುವುದರಿಂದ ಶಿವತತ್ತ್ವರತ್ನಾಕರದ ಕರ್ತೃವೇ ಎಂಬುದು ಸುಸ್ಪಷ್ಟ. ಈ ಎಲ್ಲ ಆಧಾರಗಳಿಂದ ಚೆನ್ನವೀರಸ್ವಾಮಿಗಳು ರಾಜಗುರುಗಳಾಗಿದ್ದುದು ಹಿರಿಯ ಬಸವಪ್ಪ ನಾಯಕನಿಗೆ. (ಕ್ರಿ. ಶ. ೧೬೯೮–೧೭೧೪) ಅವನ ಕಾಲ ಸುಮಾರು ೧೭೦೦ ಎಂದಿಟ್ಟುಕೊಳ್ಳಬಹುದು.

ಅವುಗಳ ಪ್ರಕಾರ – ಕೆಳದಿ ಅರಸುಮನೆತನದ " ರಾಜಗುರು "ಗಳಾಗಿ ಶ್ರೀ ಚೆನ್ನವೀರ ಶಿವಾಚಾರ್ಯರೂ, ಅವರ ಪತ್ನಿಯಾಗಿ ಗಂಗಾದೇವಿಯೂ ಇರುವರೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಆದರೆ ಗಂಗಾದೇವಿಯು ಕಾವ್ಯ ರಚಿಸಿದಳೇ ಎಂಬುದು ಸಂದೇಹ. ದೊರೆತ ಕೆಳದಿ ರಾಜಾಭ್ಯುದಯಮ್ ಎಂಬ ಅಪೂರ್ಣ ಕೃತಿಯನ್ನು ಬಿಟ್ಟರೆ ಬೇರೆ ಯಾವ ಆಧಾರವೂ ಇಲ್ಲ. ಇಷ್ಟರಿಂದಲೇ ಈ ಕೃತಿಯು ಗಂಗಾದೇವಿಯಿಂದ ರಚಿತವಾದುದಲ್ಲ ಎಂದು ಹೇಳಬರುವುದಿಲ್ಲ. ಒಟ್ಟಿನಲ್ಲಿ ಇಷ್ಟು ಹೇಳಬಹುದು :– ಕೆಳದಿ ಮಠಕ್ಕೆ ಚೆನ್ನಮ್ಮಾಜಿ ಹಾಗೂ ಅವಳ ದತ್ತಕ ಬಸವರಾಜೇಂದ್ರ ಇವರು ಹಾಕಿ ಕೊಟ್ಟಿರುವ ದಾನ ಶಾಸನಗಳು [99] ಸುಳ್ಳಾಗುವುದಾದರೆ ಗಂಗಾಂಬಿಕೆಯೆಂಬ ಐತಿಹಾಸಿಕ ವ್ಯಕ್ತಿಯೂ ಸುಳ್ಳು. ವ್ಯಕ್ತಿ ಸುಳ್ಳಾದರೆ ಕಾವ್ಯವೂ ಸುಳ್ಳು. ಆದರೆ ಅದು ಸುಳ್ಳೆಂದು ತೀರ್ಮಾನವಾಗುವವರೆಗೆ ಉಪಲಬ್ಧ ಹಸ್ತಪ್ರತಿ ಹಾಗೂ ಅಚ್ಚಾದ ಪುಸ್ತಿಕೆ ಇವಿಷ್ಟನ್ನೇ ಗ್ರಹಿಸಿ ಕೆಳದೀ ಗಂಗಾದೇವಿಯೆಂಬುವಳಿಂದ ರಚಿತವಾದ ಕೆಳದಿ ರಾಜಾಭ್ಯುದಯಮ್ ಎಂಬ ಗ್ರಂಥವನ್ನು ಕೆಳದಿ ಅರಸರ ಆಸ್ಥಾನ ಸಾಹಿತ್ಯದ ಮಾಲಿಕೆಯಲ್ಲಿ ಸೇರಿಸಿ ಕೊಳ್ಳಬಹುದಾಗಿದೆ.

---

[99] ಅನುಬಂಧ 3 ಮತ್ತು 4

## (vii) ಕಿರಿಯ ವೆಂಕಟಪ್ಪನಾಯಕ

ತ್ಯಾಗ-ಭೋಗಗಳ ಸಮನ್ವಯ ಸಾಧಕನಾದ ಕಿರಿಯ ವೆಂಕಟಪ್ಪ ನಾಯಕನು ಸ್ವಯಂ ಬರಹಗಾರನೂ ಆಗಿ 'ಪಾದಾಪೂಜಾ' ಎಂಬ ವೀರಶೈವರಿಗೆ ಉಪಯುಕ್ತವಾದ ಧಾರ್ಮಿಕ ಕ್ರಿಯಾವಿಧಾನದ ಕೃತಿಯನ್ನು ರಚಿಸಿದ್ದಾನೆಂದು ಹಲವರು ಹೇಳುತ್ತಾರೆ. ಆದರೆ 'ಪಾದಪೂಜಾ' ಗ್ರಂಥವಾಗಿರಲಾರದು. ಅದೊಂದು ವೀರಶೈವ ಧಾರ್ಮಿಕ ವಿಧಿವಿಧಾನ. ಕೃತಿಯನ್ನು ವೆಂಕಟಪ್ಪ ನಾಯಕನು ರಚಿಸಿದನೆಂದು ಹೇಳುವವರಿಗೆ ಇರುವ ಒಂದೇ ಒಂದು ಆಧಾರಗ್ರಂಥವೆಂದರೆ ಶಿವತತ್ತ್ವ ರತ್ನಾಕರ. ಅದರಲ್ಲಿ ಹೀಗಿದೆ—

"ಪಾದಪೂಜಾಹ್ವಯಂ ಧರ್ಮಂ ನೂತನಂ
ಪರ್ಯಕಲ್ಪಯತು ಚರಶಂಕರ ರೂಪಾಣಾಂ
ಪರಿತೋಷಾರ್ಥಮಾದರಾತ್"

—ಶಿವ. ರತ್ನಾಕರ viii, 1-11.

ಶಿವಜಂಗಮರ ತುಷ್ಟಿಗಾಗಿ ಪಾದಪೂಜಾ ಎಂಬ ನೂತನ ರೀತಿಯ ಧರ್ಮವೊಂದನ್ನು ಕಲ್ಪಿಸಿದನು ಎಂದಿದೆ. ಇಲ್ಲಿ 'ಪಾದಪೂಜಾ' ಎಂಬುದು ವೀರಶೈವರಲ್ಲಿ ಪ್ರಸಿದ್ಧವಿರುವ ಜಂಗಮಪಾದಪೂಜಾ ವಿಧಾನ. ಇದನ್ನು ನೂತನ ರೀತಿಯಲ್ಲಿ ನೆರವೇರಿಸಿದನೆಂದಷ್ಟೇ ಅರ್ಥವಾಗುತ್ತದೆ; ಕೃತಿ ಎಂದಲ್ಲ. ಆದ್ದರಿಂದ ಕಿರಿಯ ವೆಂಕಟಪ್ಪನಾಯಕನು ಕಲಾವಿದನಾಗಿ ಬೇರೆ ಏನೇ ರಚಿಸಿರಬಹುದು, ಆದರೆ 'ಪಾದ ಪೂಜಾ' ಎಂಬ ಗ್ರಂಥವನ್ನಲ್ಲ; ಅದು ಗ್ರಂಥವೂ ಅಲ್ಲ; ವೀರಶೈವ ಧಾರ್ಮಿಕಕ್ರಿಯೆ.

## (viii) ಕೆಳದಿಗೆ ಸಂಬಂಧಿಸಿದ ಕವಿಗಳು ಕೆಲವರು

ಕೆಳದಿ ಅರಸರ ಆಸ್ಥಾನದಲ್ಲಿದ್ದುಕೊಂಡು, ಅವರ ಪೋಷಣೆ ಪ್ರೋತ್ಸಾಹಗಳಿಂದ ಕಾವ್ಯಗಳನ್ನು ರಚಿಸಿದ ಹಲವು ಕವಿಗಳಿದ್ದರೆ, ಕೆಳದಿಯವರ ನೆರವಿಲ್ಲದಿದ್ದರೂ ಆವರ ಆಳ್ವಿಕೆಯ ವೇಳೆಯಲ್ಲಿ ಕೆಳದಿಗೆ ಬಂದು ಹೋದ ಹಾಗೂ ಒಂದೆರಡು ಕೃತಿಗಳನ್ನು ರಚಿಸಿದ ಕವಿಪುಂಗವರಿದ್ದಾರೆ. ಅದೇ ರೀತಿ ಕೆಳದಿಯ ಸಾಮ್ರಾಜ್ಯಕ್ಕೆ ಸೇರಿದ ಹಲವು ಭಾಗಗಳಲ್ಲಿ ಅದರ ಪತನಾನಂತರ ರಚನೆಯಾದ ಕೃತಿಗಳೂ ಇವೆ. ಕೆಲವು ಕೃತಿಗಳು ಕವಿ, ಕಾಲ, ರಾಜಾಶ್ರಯ, ಮೊದಲಾದವುಗಳ ಬಗ್ಗೆ ಸಂದೇಹವನ್ನು ಹುಟ್ಟಿಸುತ್ತವೆ ; ಮತ್ತು ಹಲವು ಕೆಳದಿಗೆ ಸಂಬಂಧಿಸಿದಂತೆ ಹೆಸರನ್ನೋ ಅಥವಾ ಯಾವುದಾದರೂ ಒಂದು ವಿಷಯವನ್ನೋ ನಿವೇದಿಸುತ್ತವೆ. ಅವುಗಳನ್ನಿಲ್ಲಿ ಅವಲೋಕಿಸುವುದು ಉಚಿತವೆನಿಸುತ್ತದೆ.

## ಅ) ರಾಮಚಂದ್ರ ಕವಿ:

" ಈತನು ಮಲ್ಲಿಕಾರ್ಜುನ ಶತಕವನ್ನು ಬರೆದಿದ್ದಾನೆ; ಪಾರ್ವತಿಯ ಸೋಬಾನೆಯನ್ನೂ ಬರೆದಿರುವಂತೆ ತೋರುತ್ತದೆ. ಅಲ್ಲದೆ ಇವನು ಮಾಡಿದ ವೀರಭದ್ರರಾಜ ಸ್ತುತಿರೂಪವಾದ ಕೆಲವು ಪದ್ಯಗಳೂ ದೊರೆಯುತ್ತವೆ. ಇವನು ಬ್ರಾಹ್ಮಣ ಕವಿ; ತಮ್ಮಯಾರ್ಯನ ಮಗನು. ಇವನ ಕಾಲವು ಕ್ರಿ. ಶ. ಸು. ೧೭೦೦ ಆಗಿರಬಹುದು." [100] ವೀರಭದ್ರರಾಜಸ್ತುತಿರೂಪದ ಪದ್ಯಗಳನ್ನು ಬರೆದಿದ್ದಾನೆ ಎನ್ನುವುದರಿಂದಲೂ, ಕೆಳದಿಯನ್ನಾಳಿದ ವೀರಭದ್ರನಾಯಕನ (ಕ್ರಿ. ಶ. ೧೬೩೦–೧೬೪೬) ಕಾಲದಲ್ಲಿ ಬದುಕು ಮಾಡಿದವರ ಪಟ್ಟಿಯಲ್ಲಿ ನಿಯೋಗಿ ರಾಮಚಂದ್ರಯ್ಯ ಎಂಬ ಹೆಸರು ಸಿಗುವುದರಿಂದಲೂ, [101] ಇವನು ವೀರಭದ್ರನ ಆಸ್ಥಾನ ಕವಿಯಾಗಿದ್ದಿರಬೇಕು ಎಂಬ ಊಹೆಗೆ ಅವಕಾಶ ಮಾಡಿಕೊಟ್ಟಿದೆ. ಕೃತಿ ಸಿಕ್ಕದಿರುವಾಗ ಅದರ ಬಗ್ಗೆ ಏನೂ ಹೇಳಬರುವುದಿಲ್ಲ.

## ಆ) ರಾಮಚಂದ್ರ ಗುರುಶಿಷ್ಯ:

ಒಬ್ಬಿಬ್ಬ ಕವಿಗಳು ಸಂದೇಹ ಹುಟ್ಟಿಸುತ್ತಾರೆ. ಅವರಲ್ಲಿ ಮುಖ್ಯವಾಗಿ ರಾಮಚಂದ್ರ ಗುರುಶಿಷ್ಯ. [102] ಇವನಿಗೆ 'ಕವಿರಾಜ ಕಂಠೀರವ' ಎಂಬ ಬಿರುದಿತ್ತೆಂದು ಇವನ ಕೃತಿ 'ಆದಿತ್ಯಪುರಾಣ'ದಿಂದ ತಿಳಿಯುತ್ತದೆ. [103] ಇವನ ಕಾಲ ಕ್ರಿ. ಶ. ಸು. ೧೫೫೦ ಎಂದು ಕವಿಚರಿತೆಕಾರರು ಹೇಳಿದ್ದಾರೆ. [104] ಕೆ. ವೆಂಕಟರಾಯಾಚಾರ್ಯರು ೧೨೬೫–೭೦ ಎಂದಿದ್ದಾರೆ. [105] ಕಾಲ ನಿರ್ಧಾರವಾಗಿಲ್ಲ. ಇವನಿಗೂ ಕೆಳದಿಗೂ ಯಾವ ಸಂಬಂಧವೂ ಇದ್ದಂತೆ ಕಂಡುಬರುವುದಿಲ್ಲ. ಆದರೂ ಬಿ. ಶಿವಮೂರ್ತಿಶಾಸ್ತ್ರಿಗಳವರು ಕೆ. ವೆಂಕಟರಾಯಾಚಾರ್ಯ ಸಂಪಾದಿತ ಆದಿತ್ಯಪುರಾಣದಲ್ಲಿ ಕವಿಕಾವ್ಯ ವಿಚಾರ ತಿಳಿಸುತ್ತಾ, "ಮಲೆನಾಡಿನಲ್ಲಿ ೧೫೦೫ ರಿಂದ ೧೭೬೩ ರವರೆಗೆ ಬಾಳಿದ ಕೆಳದಿಯ ರಾಜರ ಕಾಲದಲ್ಲಿ ಅಂದರೆ ಕವಿಚರಿತ್ರೆಕಾರರು ಊಹಿಸಿರುವಂತೆ ೧೫೫೦ ರ ಸುಮಾರಿನಲ್ಲಿ ಕೆಳದಿಯಲ್ಲಿ ಆ ರಾಜ್ಯವನ್ನು ದೊಡ್ಡ ಸಂಕಣ್ಣನಾಯಕನು ಆಳುತ್ತಿದ್ದನು. (ಕ್ರಿ. ಶ. ೧೫೪೬–೧೫೫೯) ಅದೇ ಕಾಲದಲ್ಲಿ ಈ ಕವಿ ಜೀವಿಸಿರಬೇಕೆಂದು

---

[100] ಕ. ಕ. ಚ. II, 556.

[101] ಕೆ. ನೃ. ವಿ. ಪು. 105 ಅಡಿಟಿಪ್ಪಣಿ

[102] op-cit., P. 260.

[103] (ಸಂ) ಕೆ. ವೆಂಕಟರಾಯಾಚಾರ್ಯ, ಸುರತ್ಕಲ್ಲು, ವಿಜಯ ಸಾಹಿತ್ಯ ಮಾಲೆ 1967.

[104] Loc-cit.

[105] ಆದಿತ್ಯಪುರಾಣ, ಕವಿಕಾವ್ಯ ಪರಿಚಯ; ಪು. 4.

ಸ್ಥೂಲವಾಗಿ ಊಹಿಸಬಹುದಾಗಿದೆ."[106] ಎಂದಿದ್ದಾರೆ. ಊಹೆ ತಪ್ಪಲ್ಲ. ಆದರೆ ಕೆಳದಿ ಆಸ್ಥಾನಕ್ಕೂ, ಆದಿತ್ಯಪುರಾಣದ ಕರ್ತೃವಿಗೂ ಯಾವ ಬಾಂಧವ್ಯವೂ ಇಲ್ಲ.[107]

## ಇ) ಆದಿಯಪ್ಪ

ಕೆಳದಿಗೆ ಬಂದುಹೋದ ಮೊದಲನೆಯ ಪ್ರವಾಸಿ ಕವಿಯೆಂದರೆ ಆದಿಯಪ್ಪ.[108] ಇವನು ಜೈನಕವಿ. ಗೇರಸೊಪ್ಪೆಯ ಭೈರವರಾಜನ ಆಸ್ಥಾನದಲ್ಲಿದ್ದಿರಬೇಕು. ಭೈರವನ ಗುರು ವೀರಸೇನನ ಆಜ್ಞೆಯಂತೆ "ಧನ್ಯಕುಮಾರಚರಿತ್ರೆ"ಯನ್ನು ಬರೆದುದಾಗಿ ತಿಳಿಸುತ್ತಾನೆ. ಇದಕ್ಕೆ ಮೂಡಬಿದರೆಯ ಹೊಸಬಸ್ತಿಯ ಒಂದು ಶಾಸನ ಆಧಾರವಾಗಿದೆ. ಅದರಲ್ಲಿ—

"ಧರೆಯೊಳಗಂ ಪ್ರಸಿದ್ಧಿವಡೆದೊಪ್ಪುವ ವೇಣುಪುರಾಂತರಾಳದೊಳ್
ಕರ ಚೆಲುವಾದ ಚಂದ್ರಜಿನಮಂದಿರದೊಳ್ ಪಿರಿದಪ್ಪ ಧರ್ಮವಂ ||
ವಿರಚಿಸಲುತ್ತರೋತ್ತರ ಸಮೃದ್ಧಿಗೆ ಕಾರಣವಪ್ಪುದೆಂದು ತಾಂ
ವರಗುರುವೀರಸೇನ ಮುನಿ ಪೇೞಲು ಕೇಳ್ದನು ಭೈರವೇಶ್ವರಂ ||[109]

—ಎಂದಿದೆ. ಆದ್ದರಿಂದ ಕವಿಚರಿತೆಕಾರರು ದ್ವಿತೀಯ ಸಂಪುಟದ ೪೧೪ ಪುಟದಲ್ಲಿ ಮೊದಲು ಇವನ ಕಾಲವನ್ನು ೧೬೫೦ ಎಂದು ಹೇಳಿದ್ದರೂ ತೃತೀಯ ಸಂಪುಟದಲ್ಲಿ ೧೬೫೦ ರಿಂದ ಹಿಂದಕ್ಕೆ ಅಂದರೆ ೧೪೬೫ಕ್ಕೆ ಕೊಂಡೊಯ್ದಿದ್ದಾರೆ. ಈ ಎರಡನೆಯ ಕಾಲ ಸರಿಯಾಗಿದ್ದರೆ ಆದಿಯಪ್ಪ "ಕೆಳದಿಯ ಸಾಮ್ರಾಜ್ಯ" ಸಾಮ್ರಾಜ್ಯ ಸ್ಥಾಪನೆಗೆ ಮುಂಚೆಯೇ ಬಂದು ಹೋಗಿದ್ದ ಎಂದು ಹೇಳಬೇಕಾಗುತ್ತದೆ. ಆದರೂ ಚಂದ್ರಜಿನ ಮಂದಿರವು ವೇಣುಪುರ (ಬಿದನೂರಿ)ದಲ್ಲಿದ್ದು, ಪಿರಿದಪ್ಪ ಧರ್ಮವಂ ವಿರಚಿಸುತ್ತಲಿದ್ದ ವಿಷಯ ಗಮನಾರ್ಹವಾದದ್ದು.

---

106 ಶರಣಸಾಹಿತ್ಯ ಗ್ರಂಥಮಾಲಾ 13; 1951 (ಶರಣಸಾಹಿತ್ಯ ಸಂಪುಟ 14, ಸಂಚಿಕೆ 6 ಮತ್ತು ಅದೇ ಸಂ. 12, ಸಂಚಿಕೆ 2 ನೋಡಿ.)

107. ಕವಿರಾಜ ಕಂಠೀರವನು ಶೃಂಗೇರಿಯ ರಾಮಚಂದ್ರ ಭಾರತೀ ಸ್ವಾಮಿಗಳ ಶಿಷ್ಯನೆಂದು.—A Descriptive Catalogue of Kanarese Manuscripts. O. R. I. Madras Vol. III, P. 340-342.

108. ಕ. ಕ. ಚ. II 414.

109 ಅದೇ. III. 496.

## ಈ) ಮೊದಿಯರುದ್ರ:

ಎರಡನೆಯ ಪ್ರವಾಸಿ ಕವಿಯೆಂದರೆ ಮೊದಿಯರುದ್ರ.[110] ಇವನ ಕಾಲ ಕ್ರಿ. ಶ. ೧೭೩೭. ಈತನು 'ವಿರಕ್ತರ ಕಾವ್ಯ' 'ಪಂಚವೋಚ್ಛ್ವವ ಕಾವ್ಯ' ಇವುಗಳನ್ನು ಬರೆದಿದ್ದಾನೆ. ಇವನು ವೀರಶೈವ ಕವಿ. ಕಾಮಾರಿ ಭಕ್ತರ ಚರಣಕಿಂಕರ, ಪಂಚಮ ಕುಲಜೋದ್ಭವ ನಿಜಹೃದಯ, ಸರಸ ಕವಿವರ ಎಂದು ತನ್ನನ್ನು ವಿಶೇಷಿಸಿ ಹೇಳಿ ಕೊಂಡಿದ್ದಾನೆ.[111]

ವಿರಕ್ತರ ಕಾವ್ಯ ೧೦೧ ವಿರಕ್ತರ ಚರಿತ್ರೆಯನ್ನು ಹೇಳುತ್ತದೆ. ವಾರ್ಧಕ ಮತ್ತು ಪರಿವರ್ಧಿನಿ ಷಟ್ಪದಿಗಳಲ್ಲಿ ಬರೆಯಲ್ಪಟ್ಟಿದೆ. ಇದನ್ನು ಶಕ ೧೬೫೮ ಪಿಂಗಳದಲ್ಲಿ ಎಂದರೆ ೧೭೩೭ ರಲ್ಲಿ ಬರೆದನಂತೆ. ಈ ಕಾವ್ಯಕ್ಕೆ ಸ್ಫೂರ್ತಿ ಕೆಳದಿ ಹಾಗೂ ಕೆಳದಿಯ ಶಿವಭಕ್ತ ಸಮ್ಮೇಳನದ ಶಿವಶರಣರು—

"ಆಗಮದ ಗ್ರಂಥದರ್ಥವನು ನೋಡಿ ಪಂಚವೋದ್ಭವ ಕಾವ್ಯವನು ವಿರಚಿಸಲು ಭಕ್ತಮಾಹೇಶ್ವರರು ಬರೆದೋದಿ ಚರಿಸುತಂ ಮಲೆದೇಶ ಬಿದರೂರ ಪಟ್ಟಣಕೆ ಬರಲು ಅಲ್ಲಿರ್ಪ ಪ್ರಮುಖ ಶಿವಭಕ್ತ ಸಮ್ಮೇಳನದ ಶಿವಶರಣರನು ನೋಡಲು ಓರ್ವ ಪಟ್ಟಣ್ಣೆಲ ಜ್ಞಾನಕೋವಿದ ಮಳಯಸ್ವಾಮಿಯೆಂಬ ಕೋವಿದನು ಗ್ರಂಥವನು ಕೇಳಿ ಆನಂದಿಸಿ ಕವಿಯನು ಕರೆದು ಈ ಕಾವ್ಯವ ರಚಿಸಿದಂತೆ ನೂರೊಂದು ವಿರಕ್ತ ಮಾಹೇಶ್ವರರ ಚರಿತ್ರವ ವಿರಚಿಸೆಂದು ನುಡಿಯಲ್ಕೆ ಅವರ ಬೆಸನಾಂತು ವಿರಚಿಸಿದೆನು."[112]

ಈತನ ಈ ಕಾವ್ಯದಿಂದ ಕೆಳದಿಯಲ್ಲಿ ಪ್ರಾಯಶಃ ಕಿರಿಯ ಸೋಮಶೇಖರನ ಆಳ್ವಿಕೆಯ ಕಾಲದಲ್ಲಿ ಒಂದು ವೀರಶೈವ ಮಹಾಸಮ್ಮೇಳನ ನಡೆದಿದ್ದಿರಬೇಕು. ಅಲ್ಲಿಗೆ ಅನೇಕ ಶರಣರು ಆಗಮಿಸಿ ಧರ್ಮದ ಬಗ್ಗೆ ಜಿಜ್ಞಾಸೆ ನಡೆಸಿರಬೇಕು ಎಂಬ ವಿಷಯ ತಿಳಿಯುತ್ತದೆ.

## ಉ) ವರಾಹ ತಿಮ್ಮಪ್ಪ:

ಪತನ ಪದವಿಯನ್ನು ಪಡೆದ ಕೆಳದಿಯ ದಾರುಣ ವಾರ್ತೆಯನ್ನು, ಮೊದಲು ಮುಟ್ಟಿಸುವ ಹರಿಕಾರನೆಂದರೆ ಕೀರ್ತನಕಾರ ವರಾಹ ತಿಮ್ಮಪ್ಪ. ಎರಡನೆಯವನು ಪರಮದೇವ.

---

110 ಕ. ಕ. ಚ. III, ಪು. 39

111 A Descriptive Catalogue of Kanarese Manuscripts, O. R. I. Madras, Vol. Vi, P. 1380 and 1383.

112 Op-Cit. P. 40.

ಇವರಲ್ಲಿ ಮೊದಲಿಗನಾದ, ತಿಮ್ಮಪ್ಪನು "ವರಾಹ ತಿಮ್ಮಪ್ಪ" ಎಂಬ ಅಂಕಿತದಲ್ಲಿ ಹಲವು ಕೀರ್ತನೆಗಳನ್ನು ಬರೆದಿರುವುದು ಕಂಡುಬರುತ್ತದೆ. [113] ಇವನು ಒಂದು ಕೀರ್ತನೆಯಲ್ಲಿ—ದೇಶವು ನವಾಬದೇವನ ಸ್ವಾಧೀನವಾಯಿತು. ಶಿವಭಕ್ತರು ವೇಣುಪುರದಿಂದ ಓಡಿದರು ಎಂದು ಹೇಳಿ ಪ್ರಮಾಥಿ ವರ್ಷವನ್ನು ಹೇಳಿರುವುದರಿಂದ ಈ ನವಾಬನು ಹೈದರನಾಗಿರಬೇಕು. ಪ್ರಮಾಥಿ ವರ್ಷವು ಕ್ರಿ. ಶ. ೧೭೭೯ ಆಗಿರಬೇಕು ಎಂದು ಕಿಟ್ಟಲ್ ಹೇಳುತ್ತಾರೆ. [114] ಆದ್ದರಿಂದ ಕೆಳದಿಯ ಪತನದ ವೇಳೆಯಲ್ಲಿದ್ದ ಕವಿಯೆಂದು ಹೇಳಿದರೆ ತಪ್ಪಾಗಲಾರದು.

## ಊ) ಪರಮದೇವ:

ಈ ಮಾಲಿಕೆಯಲ್ಲಿ ಎರಡನೆಯವನೆಂದರೆ ಕವಿ ಪರಮದೇವ. ತುರಂಗಭಾರತ, ತತ್ತ್ವಚೌಪದ, ನಾರಾಯಣಾಕ್ಷರ ಮಾಲಿಕಾ ಸ್ತೋತ್ರ ಇವುಗಳನ್ನು ಬರೆದಿದ್ದಾನೆ. ಇವನು ಹವ್ಯಕ ಬ್ರಾಹ್ಮಣನು; ಇವನ ತಂದೆ ಶಂಕರನಾರಾಯಣ. ಜನ್ಮಸ್ಥಳ ದಕ್ಷಿಣ ಕನ್ನಡ ಜಿಲ್ಲೆಯ ಹನ್ನೆರಡು ಮಾಗಣಿಯಲ್ಲಿರುವ ಸುಳಿಗೋಡು. ಇವನ ಮನೆತನದವರು ತೋಟಮನೆ ಬೇಸಾಯಗಾರರಾಗಿದ್ದರು. ಇವನು ಬಹಳ ಬಡವನು. ಸಾಲದಿಂದ ಸ್ವತ್ತೆಲ್ಲಾ ಹೋಗಿ ಹೆಂಡರು ಮಕ್ಕಳೊಡನೆ ಇಕ್ಕೇರಿ ಸಾಗರ ಪ್ರಾಂತ್ಯಕ್ಕೆ ಬಂದು ಇಕ್ಕೇರಿ ಅಘೋರೇಶ್ವರನ ಬಳಿ ಚಿಪ್ಪಳಿಯಲ್ಲಿ ಹುಡುಗರಿಗೆ ಓದುಬರಹ ಕಲಿಸುತ್ತಿದ್ದನು. ಕೇದಿಗೆಸರುಹು ಎಂಬ ಊರಿನಲ್ಲಿ ಹೊಸದಾಗಿ ಪ್ರತಿಷ್ಠೆ ಮಾಡಿದ ಗಣಪತಿಯ ಪೂಜೆಗೆ ಇವನನ್ನು ನೇಮಿಸಿದರು. ಇಲ್ಲಿಯೇ ಇವನ ಕವಿತೆ ಆರಂಭವಾಯಿತು. ಲಕ್ಷ್ಮೀನಾರಾಯಣ ಎಂಬುವನು ಇವನಿಗೆ ಪೋಷಕನಾಗಿದ್ದನು. ಸಾಗರದ ಜನರು ಇವನನ್ನು ಗೌರವದಿಂದ ಕಾಣುತ್ತಿದ್ದರು. ತನ್ನ ಮರಣ ದಿನವನ್ನು ಮುಂದಾಗಿ ಇಷ್ಟಮಿತ್ರರಿಗೆ ತಿಳಿಸಿ ಅವರೊಡನೆ ಮಾತನಾಡುತ್ತ ಸತ್ತನೆಂದು ಹೇಳುತ್ತಾರೆ. ತುರಂಗ ಭಾರತವನ್ನು ಶಕ ೧೭೦೦ ಹೇವಿಳಂಬಿಯಲ್ಲಿ—ಎಂದರೆ ೧೭೭೭ ರಲ್ಲಿ ಬರೆದಂತೆ ಹೇಳುತ್ತಾನೆ. ಈ ಗ್ರಂಥವನ್ನು ಕೋಣೆಲಕ್ಷ್ಮೀರಮಣ ದೇವರ ಅಂಕಿತದಲ್ಲಿ ಬರೆದಿದ್ದಾನೆ. [115] ಆದರೆ ತುರಂಗಭಾರತದ ಸಂಪಾದಕರಾದ ಕೆ. ವೆಂಕಟರಮಣಶಾಸ್ತ್ರಿ ಕಂಪೆನಿಯವರು ಇವನ ಕಾಲವನ್ನು ೧೭೦೦ ಎಂದು ತಿಳಿಸುತ್ತಾರೆ. [116] ಆಧಾರ ಸಾಲದು. ಮೇಲಾಗಿ ೧೭೦೦ ರಲ್ಲಿ ಇಕ್ಕೇರಿ ಸೀಮೆಗೆ ಪರಮದೇವ ಬಂದಿದ್ದರೆ, ಕೇದಗೆಸರುವಿನ ಸುಬ್ಬಣ್ಣ ಹೆಗ್ಗಡೆಯವರು ಕಟ್ಟಿಸಿದ ಗಣಪತಿಯನ್ನು ಪೂಜಿಸುವ ಪೂಜಾರಿಯಾಗಿ ಅಥವಾ ಅದೇ

---

113 ಕ. ಕ. ಚ. III, ಪು. 114; ಕಾಡದೇವರ ಮಠ, ನಿಬಂಧ. ಪು. 411

114 Nagavarma's prosedy, Introduction, P. 71.

115 ಕ. ಕ. ಚ. III ಪು. 140.

116 ವೆಂಕಟರಮಣಶಾಸ್ತ್ರಿ ಕಂಪೆನಿಯವರ ಪ್ರಕಟಣೆ; ತುರಂಗಭಾರತ, ಪರಮದೇವ ಚರಿತ್ರೆಯು ಪು. 4.

ಊರಿನ ಲಕ್ಷ್ಮೀನಾರಾಯಣನ ಆಶ್ರಯದಲ್ಲಿರಬೇಕಾಗುತ್ತಿರಲಿಲ್ಲ; ಧರ್ಮಪ್ರಭುಗಳಾದ ಕೆಳದಿ ಅರಸರ ಆಸ್ಥಾನ ದ್ವಾರವು ಇಂಥ ಕವಿ ಕಲಾವಿದರಿಗಾಗಿ ಸದಾ ತೆರೆದಿರುತ್ತಿತ್ತು. ಏನೇ ಇರಲಿ ಕವಿ ಪರಮದೇವ ಬಹುಶಃ ಕೆಳದಿ ಬದುಕಿದ ಕಾಲದಲ್ಲಿ ಬಂದಿದ್ದರೂ, ತುರಂಗಭಾರತವನ್ನು ರಚಿಸಿದ್ದು ಕೆಳದಿ ಹಾಳಾದ ಮೇಲೆ ಎಂದು ಹೇಳಬಹುದಾಗಿದೆ.

### ಖು) ಮೈಲಾರದ ಬಸವಲಿಂಗ:

ಮೂರನೆಯದಾಗಿ, ಕ್ರಿ. ಶ. ೧೬೮೦ ರಲ್ಲಿದ್ದು, ಗುರುಕರುಣ ತ್ರಿಪದಿ, ಷಟ್‌ಸ್ಥಲ ನಿರಾಭಾರಿ ವೀರಶೈವ ಸಿದ್ಧಾಂತ ಮೊದಲಾದ ಕೃತಿಗಳನ್ನು ರಚಿಸಿದ ಬಳ್ಳಾರಿಯ ಲಿಂಗನಾಯಕನ ಹಳ್ಳಿಯ ಚನ್ನವೀರಸ್ವಾಮಿಯ ಕರಸಂಜಾತನಾದ ಪ್ರಸಿದ್ಧ ವೀರಶೈವ ಕವಿ ಮೈಲಾರದ ಬಸವಪ್ಪ ಅಥವಾ ಮೈಲಾರದ ಬಸಲಿಂಗನು,[117] ಕೆಳದಿಯ ವೈಭವ ದಿನಗಳನ್ನು ನಮ್ಮ ಸ್ಮರಣೆಗೆ ತಂದು ಕೊಡುತ್ತಾನೆ ತನ್ನ ಗುರು ಕರುಣ ತ್ರಿಪದಿಯಲ್ಲಿ—

"ಇಕ್ಕೇರಿ ಚೌಕದಿಯೊಳಿಕ್ಕಿದ ಫಲಸರಕ ತಕ್ಕೊಂಡು ಮಾರಿ ಮಿಕ್ಕ ಲಾಭವದೆನಗೆ ಸಿಕ್ಕುದೈ ಗುರುವೆ ಕೃಪೆಯಾಗು"[118] ಎಂದು ಹೇಳಿದ್ದಾನೆ. ಇದರಿಂದ ಇಕ್ಕೇರಿ ವ್ಯಾಪಾರ ಕೇಂದ್ರವಾಗಿದ್ದುದು ತಿಳಿಯುತ್ತದೆ.

### ಖೂ) ಬೀಳಗಿ ಅರಸರ ವಂಶಾವಳಿ; ಷಡಕ್ಷರದೇವ ಮತ್ತು ಸರ್ವಜ್ಞ:

ಇದೇ ರೀತಿ ಗೊತ್ತಿರದ ಕೆಲವು ಗ್ರಂಥಗಳ ಪಟ್ಟಿಯಲ್ಲಿ ಬರುವ "ಬೀಳಗಿಯರಸರ ವಂಶಾವಳಿ"ಯಲ್ಲೂ,[119] ಷಡಕ್ಷರದೇವನ "ವೀರಭದ್ರೋದ್ಧಾರಣ ಗದ್ಯದಲ್ಲೂ",[120] ಸರ್ವಜ್ಞನ ವಚನಗಳಲ್ಲೂ,[121] ಕಾಲಜ್ಞಾನದ ಹೊತ್ತಿಗೆಯಲ್ಲೂ,[122] ಕೆಳದಿಯ ಉಲ್ಲೇಖವಿದೆ. ಇದು ಹೇಗೆ ಸೇರಿಕೊಂಡಿತೆಂದು ಹೇಳಬರುವುದಿಲ್ಲ. ಸರ್ವಜ್ಞನ ವಚನಗಳಿಗೂ, ಕಾಲಜ್ಞಾನಕ್ಕೂ ಅನಂತರ ಯಾರೋ ಪದ್ಯಗಳನ್ನು ಬರೆದು ಸೇರಿಸಿರಬಹುದು.

ಹೀಗೆ ಅನೇಕ ಕೃತಿಗಳೂ, ಕೃತಿಕಾರರೂ ಕೆಳದಿಗೆ ಸಂಬಂಧಿಸಿದ್ದಾರೆ. ಅವರನ್ನು ಕುರಿತ ಪಟ್ಟಿಯನ್ನು ಹೇಗೆ ಸಿದ್ಧಗೊಳಿಸಬಹುದು :—

---

117 ಕ. ಕ. ಚ. III, ಪು. 456.

118 ಗುರುಕರುಣತ್ರಿಪದಿ, ಪದ್ಯ 71.

119 ಬೀಳಗಿ ಅರಸರ ವಂಶಾವಳಿ, ಶಿವಾನುಭವದ ಪ್ರಕಟಣೆ 1933.

120 ಕ. ಕ. ಚ. III, 387 ; ದಾವಣಗೆರೆ ನಿಶಾನಿ ಮಠದ ಪ್ರಕಟಣೆ.

121 ಕ. ಕ. ಚ. II, 532-533.

122 ಕಾಲಜ್ಞಾನ ಸಂಗ್ರಹ,—ಶ್ರೀ ಶಿವಬಸವಸ್ವಾಮಿಗಳು, ಶಿವಶರಣ ವಾಙ್ಮಯ ಪ್ರಕಾಶ ಕಾರ್ಯಾಲಯ; ಮೈಸೂರು 1946, ಪು. 57, 72, 80.

# ಕೆಳದಿಗೆ ಸಂಬಂಧಿಸಿದ ಕವಿಗಳು ಕೆಲವರು

| ಕ್ರಮ ಸಂಖ್ಯೆ | ಕವಿ | ಕಾಲ | ಕೃತಿ | ಕೆಳದಿಯ ಅರಸು |
|---|---|---|---|---|
| ೧. | ರಾಮಚಂದ್ರ ಕವಿ | ಕ್ರಿ. ಶ. ೧೬೩೫ | ಅ) ಮಲ್ಲಿಕಾರ್ಜುನ ಶತಕ | ವೀರಭದ್ರನಾಯಕ |
| | | | ಆ) ಪಾರ್ವತಿಯ ಸೋಬಾನೆ | |
| | | | ಇ) ವೀರಭದ್ರರಾಜ ಸ್ತುತಿ ರೂಪದ ಕೆಲವು ಪದ್ಯಗಳು | |
| ೨. | ಆದಿಯಪ್ಪ | ಕ್ರಿ. ಶ. ೧೬೫೦ | ಧನ್ಯಕುಮಾರ ಚರಿತ್ರೆ | ಶಿವಪ್ಪನಾಯಕ |
| ೩. | ವೊದಿಯರುದ್ರ | ಕ್ರಿ. ಶ. ೧೭೩೭ | ಅ) ವಿರಕ್ತರ ಕಾವ್ಯ | (ಇಮ್ಮಡಿ) ಕಿರಿಯ ಸೋಮಶೇಖರ ನಾಯಕ |
| | | | ಆ) ಪಂಚವೋದ್ಭವ ಕಾವ್ಯ | |
| ೪. | ವರಾಹ ತಿಮ್ಮಪ್ಪ | ಕ್ರಿ. ಶ. ೧೭೫೯ | ಕೆಲವು ಕೀರ್ತನೆಗಳು | ಮುಮ್ಮಡಿ ಸೋಮಶೇಖರ ನಾಯಕ |
| ೫. | ಪರಮದೇವ | ಕ್ರಿ. ಶ. ೧೭೭೦ | ತುರಂಗಭಾರತ | — |
| ೬. | ಮೈಲಾರದ ಬಸವಲಿಂಗ | ಕ್ರಿ. ಶ. ೧೮೦೦ | ಅ) ಗುರುಕರುಣ ತ್ರಿಪದಿ | — |
| | | | ಆ) ಷಟ್ಸ್ಥಲ ನಿರಾಭಾರಿ ವೀರಶೈವ ಸಿದ್ಧಾಂತ | — |
| ೭. | ? | ? | ಬೀಳಗಿ ಅರಸರ ವಂಶಾವಳಿ | — |
| ೮. | ಷಡಕ್ಷರದೇವ | ಕ್ರಿ. ಶ. ೧೬೫೦ | ವೀರಭದ್ರೋದ್ಧಾರಣ ಗದ್ಯ | — |
| ೯. | ಸರ್ವಜ್ಞ | ಕ್ರಿ. ಶ. ೧೭೦೦ | ಸರ್ವಜ್ಞನ ವಚನಗಳು | — |
| ೧೦. | ? | ? | ಕಾಲಜ್ಞಾನದ ಹೊತ್ತಿಗೆ | — |

# ೫. ಕೆಳದಿಯ ಕನ್ನಡ ಕವಿಗಳು
# ಮತ್ತು
# ಅವರ ಕೃತಿಗಳು

## I ಚೆನ್ನವೀರ ಮಾಹೇಶ್ವರ (ಕ್ರಿ. ಶ. ೧೫೫೦)

ಕೆಳದಿಯ ಆಸ್ಥಾನವು ಕಂಡ ಆದಿಕವಿ ಹಾಗೂ ಏಕೈಕ ವೈಯಾಕರಣಿಯೆಂದರೆ ಚೆನ್ನವೀರ ಮಾಹೇಶ್ವರ. ಮಾತೃಭಾಷೆಯ ಮೂಲಕ, ಕನ್ನಡಿಗರಿಗೆ ಸಂಸ್ಕೃತ ವ್ಯಾಕರಣದ ಪರಿಚಯ ಮಾಡಿಕೊಡಲು ಯತ್ನಿಸಿ, ಯಶಸ್ವಿಯಾಗಿದ್ದಾನೆ. ಕಾವ್ಯ ರಚನೆ ಮಾಡಿದ ಕವಿಯೂ, ವೇದಾಗಮಗಳ ಆಲೋಢನ ಮಾಡಿದ ದಾರ್ಶನಿಕನೂ, ವ್ಯಾಕರಣಗಳಿಗೆ ಟೀಕು ಬರೆದ ವೈಯಾಕರಣಿಯೂ ಆಗಿದ್ದಾನೆ. ಇವನದೆಂದು ಹೇಳಲಾದ ಕೃತಿಗಳು ಸಂಖ್ಯೆಯಲ್ಲಿ ಆರು —

ಅ) ಶಬ್ದಮಣಿ ಅಥವಾ ಸಾರಸ್ವತ ವ್ಯಾಕರಣ ಕರ್ನಾಟಕ ಟೀಕಾ[1]

ಆ) ಕಾಶೀಕಾಂಡ ? (ಸ್ಕಾಂದಪುರಾಣದ ಕನ್ನಡ ಪದ್ಯಾನುವಾದ ಇರಬಹುದು)[2]

ಇ) ಕಾಶಕೃತ್ಸ್ನ ಶಬ್ದಕಲಾಪ ಧಾತುಪಾಠಃ ಅಥವಾ ಸಂಸ್ಕೃತಾರ್ಥ ಪ್ರಕಾಶಿಕಾ[3]

ಈ) ಪುರುಷಸೂಕ್ತ ಟೀಕಾ[4]

ಉ) ನಮಕ – ಚಮಕ ಅಥವಾ ಶ್ರೀರುದ್ರ ಕರ್ನಾಟಕದ ಸಟೀಕಾ[5]

ಊ) ವೀರಮಾಹೇಶ್ವರ ತಂತ್ರದ ಟೀಕೆ[6]

ಆದರೆ ಇವುಗಳಲ್ಲಿ ಎರಡು ಕೃತಿಗಳು – ಕಾಶೀಕಾಂಡ : ಮತ್ತು ವೀರಮಾಹೇಶ್ವರ ತಂತ್ರ ಟೀಕೆ–ನಮಗೆ ಸಿಕ್ಕಿಲ್ಲ. ಸಿಕ್ಕಿರುವ ಕೃತಿಗಳ ಮೇಲೆ ಒಂದು ದೃಷ್ಟಿ ಹಾಯಿಸಬಹುದು :

---

[1] ಅಪ್ರಕಟಿತ ಓಲೆ ಗ್ರಂಥ. O. R. I. / S. P. 5087.

[2] ಸಿಕ್ಕಿಲ್ಲ, ಧಾತು ಪಾಠದ ಪ್ರತಿ ಅಧ್ಯಾಯಾಂತ್ಯವನ್ನು ನೋಡಿ.

[3] ಪ್ರಕಟವಾಗಿದೆ. (ಸಂ) ಎ. ಎಸ್. ನರಸಿಂಹಯ್ಯ, ಡೆಕ್ಕನ್ ಕಾಲೇಜು, ಪುನಾ (1952)

[4] ಪ್ರಕಟವಾಗಿದೆ. ಸಂಪಾದಕರು : ಮೈಸೂರು ಹೊಸಮಠದ ಚರಮೂರ್ತಿ ಬಸವಲಿಂಗ ಸ್ವಾಮಿಗಳಿಂದ ಪರಿಷ್ಕೃತವಾಗಿ, ಕ್ರಾನ್ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು (1909)

[5] ಇದು ಪ್ರಕಟವಾಗಿಲ್ಲ. ನಮಗೆ ದೊರೆತದ್ದು ಒಂದು ಕರಡು ಕಾಗದದ ಮೇಲೆ ಬರೆದಿದ್ದ ಹಸ್ತಪ್ರತಿ. ಅಪೂರ್ಣ ಮತ್ತು ಜಿ. ಎಂ. ಉಮಾಪತಿ ಶಾಸ್ತ್ರಿಯವರ (ಬಾಗಲಕೋಟೆ) ಬಳಿಯಲ್ಲಿದ್ದ ಓಲೆಪ್ರತಿ. ಅದೂ ಅಪೂರ್ಣವೇ.

[6] ಉಪಲಬ್ಧವಿಲ್ಲ. ನೋಡಿ ಕ. ಕ. ಚ. II, ಪು. 570 ಮತ್ತು Indian Antiquary, V. 183.

## (ಅ) ಶಬ್ದಮಣಿ ಅಥವಾ ಸಾರಸ್ವತ ವ್ಯಾಕರಣ ಟೀಕು

ಇದು ಸಾರಸ್ವತ ಮುನಿಗಳಿಂದ ವಿರಚಿತವಾದ ಕಳಸೌವ್ಯಾಕರಣದ ಕನ್ನಡ ಟೀಕೆಯನ್ನುಳ್ಳ 'ಶಬ್ದಮಣಿ' ಎಂಬ ಹೆಸರಿನ ವ್ಯಾಕರಣ ಗ್ರಂಥ ಎಂದು ತಾನೇ ಗ್ರಂಥಾಂತ್ಯವಲ್ಲಿ ಹೇಳಿಕೊಂಡಿದ್ದಾನೆ. ಪ್ರತಿ ಪ್ರಕರಣಾಂತ್ಯದಲ್ಲೂ "ಇತಿ ಸಾರಸ್ವತ ಕೃತೌ ಶಬ್ದಮಣಾ ಕರ್ಣಾಟಕ ಟೀಕಾಯಾಂ....ಸಮಾಪ್ತ :" ಎಂದು ಹೇಳಿಕೊಂಡಿದ್ದಾನೆ.

ಗ್ರಂಥದ ಆದಿಯಲ್ಲಿ —

"ಶ್ರೀಗುರು ಬಸವಲಿಂಗಾಯ ನಮಃ
ಸಾರಸ್ವತ ವ್ಯಾಕರಣ ಬರೆವುದಕ್ಕೆ ಶುಭಮಸ್ತು" ಎಂದು ಹೇಳಿ-
ನಮೋ ಯಾಗಂಟಿ ವೀರಾಯ ಪಂಚಕೃತ್ಯ ವಿಭೂತಯೇ
ಚರಚರಾತ್ಮನೇ ಶಬ್ದಬ್ರಹ್ಮಣೇ ಪರಮಾತ್ಮನೇ ॥[7]

ಎಂದು ಯಾಗಂಟಿ ವೀರ ಶರಭಲಿಂಗನನ್ನು ಪ್ರಾರ್ಥಿಸಿ - ಸೂತ್ರಗಳನ್ನೂ ಅವುಗಳಿಗೆ ಟೀಕನ್ನೂ ಬರೆದುಕೊಂಡು ಹೋಗಿದ್ದಾನೆ.

ಉದಾಹರಣೆಗೆ :

ಸೂತ್ರಂ ॥ ಹ್ರಸ್ವ, ದೀರ್ಘ, ಪ್ಲುತಭೇದಾಃ ಸವರ್ಣಾಃ ॥

ಟೀಕು ॥ ಹ್ರಸ್ವ = ಏಕವೆಂಬ, ದೀರ್ಘ = ದ್ವಿಮಾತ್ರವೆಂಬ, ಪ್ಲುತ = ತ್ರಿಮಾತ್ರವೆಂಬ, ಭೇದಾಃ = ವಿಭಾಗೆಗಳುಳಿಯ್ಯೆದಕ್ಕರಂಗಳೆ ಸವರ್ಣಾಃ = ತಮ್ಮೊಳೆ ತಮಗೆ ಜೋಡುಗಳಕ್ಕುಂ

ಹೀಗೆ ಸಂಜ್ಞಾಪ್ರಕರಣ, ಸ್ವರಸಂಧಿ, - ವ್ಯಂಜನ ಸಂಧಿ, ವಿಸರ್ಗ ಸಂಧಿ, ಸ್ವರಾಂತ ಪ್ರಕೃತಿ ಸಂಧಿ ಪುಲ್ಲಿಂಗಗಳ್, ಸ್ವರಾಂತ ಸ್ತ್ರೀಲಿಂಗಗಳ್, ಸ್ವರಾಂತ ನಪುಂಸಕಲಿಂಗಗಳ್

ವ್ಯಂಜನಾಂತ ಪುಲ್ಲಿಂಗ ಪಾದಃ
ವ್ಯಂಜನಾಂತ ಸ್ತ್ರೀಲಿಂಗ ಪಾದಃ
ವ್ಯಂಜನಾಂತ ನಪುಂಸಕಲಿಂಗ ಪಾದಃ
೦ ೦ ೦ ೦ ೦
೦ ೦ ೦ ೦ ೦

---

[7] ಸಾರಸ್ವತ ವ್ಯಾಕರಣ ಟೀಕು. ಶ್ಲೋಕ ೧,

ಅವ್ಯಯ ಪಾದಃ

ಸಮಾಸ ಪಾದಃ

ತದ್ಧಿತಪಾದಃ

ತಿಙ್ಗಂತ (ಆಖ್ಯಾತ ಪ್ರತ್ಯಯುಗಳು)

ಅಬ್ವಿಕರಣ ಪಾದಃ

ವಿಭಕ್ತಿ ಚತುಷ್ಟಯ ವಿಧಿಃ

ಪರೋಕ್ಷ ವಿಭಕ್ತಿ ಪಾದಃ

ಕೃದಂತ ಪಾದಃ

೦ ೦ ೦ ೦ ೦

೦ ೦ ೦ ೦ ೦

— ಇತ್ಯಾದಿ ಸಂಸ್ಕೃತ ವ್ಯಾಕರಣ ಪುರುಷನ ವಿವಿಧ ಅಂಗಗಳನ್ನು ಪರಿಚಯಿಸಿ ಕೊಟ್ಟಿದ್ದಾನೆ. ಇದನ್ನೇ ವಂಶಪುರಿ ಅಥವಾ ಬಿದನೂರಿನ ಸುಬ್ಬಣ್ಣನೆಂಬುವನು ಪ್ರತಿ ಮಾಡಿದ್ದಾನೆ.

## (ಆ) ಸಂಸ್ಕೃತಾರ್ಥ ಅಥವಾ ಪ್ರಕಾಶಿಕಾ ಅಥವಾ ಕಾಶಕೃತ್ಸ್ನ ಶಬ್ದಕಲಾಪ ಧಾತು ಪಾಠದ ಕನ್ನಡ ಟೀಕು

ಇದರಿಂದ ಚೆನ್ನವೀರನಿಗೆ ವೈಯಾಕರಣಿಪಟ್ಟ ಭದ್ರವಾಗಿವೆ. ಕಾಶಕೃತ್ಸ್ನನು ಎಂಟು ಜನ ಆದಿ ಶಾಬ್ದಿಕರಲ್ಲಿ ಮೂರನೆಯವನು.[8] ಪಾಣಿನಿಗಿಂತ ಪ್ರಾಚೀನವೂ, ಪ್ರಧಾನ ವ್ಯಾಕರಣಗಳಲ್ಲಿ ಒಂದೆಂದೂ ಪರಿಗಣಿತವಾದ ಇವನ ಶಬ್ದಕಲಾಪ ಧಾತು — ಪಾಠದಲ್ಲಿ, ಪಾಣಿನಿಯ ಧಾತು ಪಾಠದಲ್ಲಿಲ್ಲದ ಅಪೂರ್ವವಾದ ಧಾತುಗಳೂ, ಕ್ರಮವೂ

---

[8] ಇನ್ದ್ರಃ ಚನ್ದ್ರಃ ಕಾಶಕೃತ್ಸ್ನಃ ಆಪಿಶಲಿ ಶಾಕಟಾಯನಃ ।
ಪಾಣಿನ್ಯಮರಜೈನೇನ್ದ್ರಾ ಜಯನ್ತ್ಯಷ್ಟಾದಿಶಾಬ್ದಿಕಾಃ ॥

—ಕವಿ ಕಲ್ಪದ್ರುಮ. (ಸಂ) ಎಂ. ಎನ್. ನರಸಿಂಹಯ್ಯ, ಕಾಶಕೃತ್ಸ್ನ ಶಬ್ದಕಲಾಪ ಧಾತುಪಾಠಃ – ಪೀಠಿಕೆ. ಪು. X.

ಇದೆಯೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.[9] ನಮ್ಮ ಕನ್ನಡ ಟೀಕಾಕಾರನಾದ ಚೆನ್ನವೀರ ಮಾಹೇಶ್ವರನು ತನ್ನ ಕಾರ್ಯಕ್ರಮದಲ್ಲಿ ತುಂಬಾ ಯಶಸ್ವಿಯಾಗಿದ್ದಾನೆ—

ಕನ್ನಡ ಟೀಕೆಯ ಆರಂಭದಲ್ಲಿ—

"ಪ್ರಕೃತಿ ಪ್ರತ್ಯಯಾಂಗಾಯ ಪರಸ್ಮಾಯಾತ್ಮನೇ ಪದೇ ।
ನಮೋ ಯಾಗಂಟಿ ಶರಭಲಿಂಗೇಶಾಯ ಚರಂತಿನೇ ॥
ಧಾತು ಪಾಠಃ ಕೃತೋಯೇನ ಬಾಲವ್ಯುತ್ಪತ್ತಿ ಸಿದ್ಧಯೇ ।
ನಮಸ್ತಸ್ಮೈಕಾಶಕೃತ್ಸ್ನಗುರುವೇ ಶಿವರೂಪಿಣೇ ॥

-ಎಂದು ತನ್ನ ಇಷ್ಟದೈವ ಯಾಂಗಟಿ ಶರಭಲಿಂಗನನ್ನೂ, ಪ್ರಾಚೀನ ಋಷಿವರೇಣ್ಯ ಕಾಶಕೃತ್ಸ್ನನನ್ನೂ ಅತ್ಯಂತ ಭಕ್ತಿಯಿಂದ ಪ್ರಾರ್ಥಿಸಿ, ನಮಿಸಿದ್ದಾನೆ. ಕಾಶಕೃತ್ಸ್ನನ ವ್ಯಾಕರಣದಲ್ಲಿ ಕೇವಲ ಧಾತುಪಾಠದ 135 ಸೂತ್ರಗಳಿಗೆ ಕನ್ನಡ ಟೀಕು ಬೇಕು ಬರೆದಿದ್ದಾನೆ, ಇದಕ್ಕೆ "ಸಂಸ್ಕೃತಾರ್ಥ ಪ್ರಕಾಶಿಕಾ" ಎಂದು ಹೆಸರಿಟ್ಟಿರುವುದು ಕಂಡುಬರುತ್ತದೆ.[10]

ಇದರಲ್ಲಿ—

೧) ಭ್ವಾದಿಃ –1. (ಪರಸ್ಮೈಪದಭಾಷಾ)
೨) ಭ್ವಾದಿಃ –2. (ಆತ್ಮನೇ ಪದಿನಃ)
೩) ಣಿಜನ್ತಾಶ್ಚ
೪) ಅದಾದಿಃ - (ಲುಗ್ವಿಕರಣಃ)
೫) ದಿವಾದಿಃ
೬) ಸ್ವಾದಿಃ
೭) ತುದಾದಿಃ
೮) ರುಧಾದಿಃ
೯) ತನಾದಿಃ
೧೦) ಕ್ರ್ಯಾದಿಃ
೧೧) ಚುರಾದಿಃ
೧೨) ಅಥಣಿಜನ್ತಾಃ – ಎಂಬ ಹನ್ನೆರಡು

[9] "ಕುಭ್ನಾದಿಕುಚ" — ಎಂದು ಪಾಣಿನಿಯು (ಅಷ್ಟಾಧ್ಯಾಯಿ, 8–4–39); ಹೇಳಿದ್ದರೆ, ಕಾಶಕೃತ್ಸ್ನನು — "ಕ್ಷಿಪ್ನಾದೀನಾಂನ ನೋಣಃ" ಹೇಳಿದ್ದಾನೆ. ಇವೆರಡು ಸೂತ್ರಗಳನ್ನೂ ತುಲನೆ ಮಾಡಿದರೆ ಕಾಶಕೃತ್ಸ್ನನು ಯಾವುದೋ "ಕ್ಷಿಪ್ನಾದಿಗಣ"ವನ್ನು ನಿಜಕ್ಕೂ ಓದಿದ್ದಾನೆಯೆಂಬುದು ತಿಳಿಯುತ್ತದೆ.

—ಸಂಸ್ಕೃತ ವ್ಯಾಕರಣ ಶಾಸ್ತ್ರದ ಇತಿಹಾಸ — ಭಾಗ 2 (ಹಿಂದಿ)

ಲೇಖಕರು : ಯುಧಿಷ್ಠಿರ ಮೀಮಾಂಸಕರು ; ಪ್ರಕಾಶಕರು: ಸಂಚಾಲಕ, ಭಾರತೀಯ ಪ್ರಾಚ್ಯವಿದ್ಯಾಪ್ರತಿಷ್ಠಾನ, 241212, ರಾಮಗಂಜ ಅಜ್ಮೀರ (ವಿಕ್ರಮಶಕ: 2026)

[10] ಧಾತುಪಾಠ : ಪ್ರತಿವಿಭಾಗಾಂತ್ಯದ ಗದ್ಯ.

ಪ್ರಕರಣಗಳಿವೆ.

ಪುರುಷಸೂಕ್ತ ಟೀಕುವಿನಲ್ಲಿ "ಪುರುಷ"ನಿಗೆ "ನಿರಂಜನ ಜಂಗಮ" ನೆಂದು ಅರ್ಥ ಹೇಳಿದಂತೆ ಇಲ್ಲಿ ಬರುವ "ಸ್ವಯಂಭೂ"ಎಂಬ ಪದಕ್ಕೆ "ನಿರಂಜನ" ಎಂದು ಅರ್ಥೈಸಿದ್ದಾನೆ.

## (ಇ) ಸಟೀಕ ಪುರುಷಸೂಕ್ತವ

ಗಾಯತ್ರಿ ಮಂತ್ರದಷ್ಟೇ ಪುರುಷಸೂಕ್ತವು ಪ್ರಾಮುಖ್ಯತೆ ಪಡೆದಿದೆ – ಋಗ್ವೇದದಲ್ಲಿ. ಇದು ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಕೃಷ್ಣ ಯಜುರ್ವೇದದ ತೈತ್ತಿರೀಯ ಅರಣ್ಯಕದಲ್ಲಿಯೂ,[11] ಶುಕ್ಲ ಯಜುರ್ವೇದದ ವಾಜಸನೇಯ ಸಂಹಿತೆಯಲ್ಲಿಯೂ[12] ಅಥರ್ವವೇದದಲ್ಲಿಯೂ[13] ಪಠಿತವಾಗಿದೆ. ಇದಲ್ಲದೆ ಈ ಸೂಕ್ತದ ಕೆಲವು ಭಾಗಗಳ ವಿವರಣೆಯು ಶತಪಥ ಬ್ರಾಹ್ಮಣ, ತೈತ್ತಿರೀಯ ಆರಣ್ಯಕ, ನಿರುಕ್ತ, ಶ್ವೇತಾಸ್ವತರೋಪನಿಷತ್ತು, ಬೃಹದಾರಾಣ್ಯಕೋಪನಿಷತ್ತು ಮೊದಲಾದ ಗ್ರಂಥಗಳಲ್ಲಿ ಕಂಡುಬರುವುದು.[14] ಇದರ ಮೇಲೆ ಸಾಯಣಾಚಾರ್ಯರಷ್ಟೇ ಅಲ್ಲದೆ ಭಟ್ಟ, ಭಾಸ್ಕರ, ಮಹೀಧರ ಮೊದಲಾದ ಪೂರ್ವಪಂಡಿತರ ವ್ಯಾಖ್ಯಾನಗಳಿವೆ.

ಈ ವೇದಾಂತರ್ಗತವಾದ ಪುರುಷಸೂಕ್ತವು ವೇದಗಳ ಸಾರಭೂತವಾದ ಭಾಗವೆಂದು ವೇದತತ್ತ್ವಜ್ಞರಿಂದ ಪರಿಗಣಿಸಲ್ಪಟ್ಟಿದೆ. ಇಂತಹ ಅಮೂಲ್ಯವಾದ ವೇದಸೂಕ್ತವನ್ನು ಟೀಕಾ ಸಹಿತ ಮೊದಲು ಕನ್ನಡಿಗರ ಕೈಗಿತ್ತವನು ಕೆಳದಿಗು ದೊಡ್ಡ ಸಂಕಣ್ಣನಾಯಕನ ಆಸ್ಥಾನದಲ್ಲಿದ್ದ ಚೆನ್ನವೀರಮಾಹೇಶ್ವರ.

ಚೆನ್ನವೀರಮಾಹೇಶ್ವರನ ಸಟೀಕ ಪುರುಷಸೂಕ್ತವು ಕೇವಲ ಇಪ್ಪತ್ತು ಪುಟಗಳನ್ನು ಪರಿಮಿತಿಯುಳ್ಳ ಪುಟ್ಟ ಪುಸ್ತಕ. ಋಗ್ವೇದದ ಹತ್ತನೆಯ ಮಂಡಲದ ಎಂಟನೆಯ ಪ್ರಪಾಠಕದಲ್ಲಿ ಬರುವ ಇಪ್ಪತ್ತೈದು ಸೂಕ್ತಗಳಿಗೆ ಪದಶಃ ಟೀಕು ಬರೆದಿದ್ದಾನೆ. ಈ ಟೀಕು ಅಲ್ಲಲ್ಲಿ ವ್ಯಾಖ್ಯಾನ ಅಥವಾ ಭಾಷ್ಯದ ರೂಪು ತಾಳಿದೆ. ಅದರಲ್ಲೂ "ನಿರಂಜನ ಜಂಗಮ ಭಾಷ್ಯ" ಎಂಬುದಾಗಿ ಕರೆಯಲಾಗಿದೆ. ಏಕೆಂದರೆ "ಪುರುಷ" ಎಂದರೆ ಪರವಸ್ತು, ಪರಬ್ರಹ್ಮ. ಅವನನ್ನೇ ಇಲ್ಲಿ ಭಾಷ್ಯಕಾರನು

---

[11] ತೈತ್ತಿರೀಯ ಆರಣ್ಯಕ 3-12 ; 13.

[12] ವಾಜಸನೇಯ ಸಂಹಿತೆ. 31 – 1 ರಿಂದ 16 ರವರೆಗೆ

[13] ಅಥರ್ವವೇದ, 19 – 6.

[14] ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ.

"ನಿರಂಜನ ಜಂಗಮ ಮೂರ್ತಿ" ಎಂದು ಕರೆದಿದ್ದಾನೆ. ಆದ್ಯಂತವೂ ಅದೇ ಅರ್ಥ ಬಳಸಲಾಗಿದೆ. ಆದ್ದರಿಂದ ಇದು ಪುರುಷಸೂಕ್ತದ "ನಿರಂಜನ ಜಂಗಮ ಭಾಷ್ಯ" ಅಥವಾ "ವೀರಶೈವ ಭಾಷ್ಯ" ಎಂದು ಕರೆದಿರುವುದು.

ಸಹಸ್ರ ಶೀರ್ಷಾ ಪುರುಷಃ
ಸಹಸ್ರಾಕ್ಷ ಸ್ಸಹಸ್ರಪಾತ್
ಸಭೂಮಿಂ ವಿಶ್ವತೋ ವೃತ್ವಾ
ಅತ್ಯತಿಷ್ಠದ್ದಶಾಂಗುಲವ್ - I - (ii)

—ಈ ಮೊದಲ ಸೂಕ್ತದ "ಪುರುಷ" ಎಂಬ ಪದಕ್ಕೆ ನಿರಂಜನಜಂಗಮವು ಎಂದು ಮಾಡಿದ್ದಾನೆ.[15] "ಅತ್ಯತಿಷ್ಠತೆ"ಗೆ ಅತಿಕ್ರಮಿಸಿರ್ಪಂ, ಎಂದು ಅರ್ಥೈಸಿ ಅನಂತರ ಬ್ರಹ್ಮಾಂಡದೊಳಗೆಯುಂ ಹೊರಗೆಯು ಅಷ್ಟಾವರಣ ರೂಪದಿಂದಾವರಿಸಿ ಬಿಂಬಪ್ರತಿಬಿಂಬ ನ್ಯಾಯದಿಂ ವಿಲಕ್ಷಣನಾಗಿರ್ದ - ಎಂದು "ಅಷ್ಟಾವರಣ"ವೆಂಬ ವೀರಶೈವ ಪಾರಿಭಾಷಿಕಪದವನ್ನು ಬಳಸಿದ್ದಾನಲ್ಲದೆ, ಶಿವಾದ್ವೈತ ರೀತಿಯಲ್ಲಿ ಪ್ರತಿಪಾದಿಸಿದ್ದಾನೆ.

ಅಂತೆಯೇ ತನ್ನ ಕೃತಿಯ ಕಡೆಯಲ್ಲಿ—

ಓಂ ಶಾಂತಿಶ್ಯಾಂತಿಸ್ಸರ್ವಶಾಂತಿರಸ್ತು

ಎಂಬುದಕ್ಕೆ ಹೀಗೆ ಭಾಷ್ಯ ಬರೆದಿದ್ದಾನೆ-

ಓಂಶಾಂತಿಃ = ನಿರಂಜನ ಜಂಗಮ ಕಾರುಣ್ಯವುಂ, ಅಸ್ತು =ಆಗಲಿ. ಶಾಂತಿಃ = ಸಾಕಾರ ಜಂಗಮದ ಕಾರುಣ್ಯವುಂ, ಅಸ್ತು = ಆಗಲಿ ಸರ್ವಶಾಂತಿಃ = ಸದಾಶಿವನ ಸದ್ಯೋಜಾತ ವಾಮದೇವಾಘೋರ ತತ್ಪುರುಷ ಮುಖಂಗಳ ಭೂತಿ ಭಸಿತ ಭಸ್ಮ ಕ್ಷಾರಂಗಗಳ ಹಸ್ಕಳಿಗಳಿಂ ಪುಟ್ಟಿದ ಘಂಟಾಕರ್ಣ, ಗಜಕರ್ಣ, ದಾರುಕ, ರೇಣುಕರ ಗೋತ್ರಂಗಳ ಋಗ್ಯಜುರಥರ್ವ

---

[15] ಮೊದಲನೆಯ ಪೀಠಿಕಾ ಸೂಕ್ತ ಪುರುಷಃ = ಇರುತ್ತಿರ್ದ ನಿರಂಜನ. ಜಂಗಮಂ ಪುರುಷನೆನಿಸಿಕೊಂಬವನೆ, ಶೈವರ್ಗೆ ಶಿವಂ, ಶಾಕ್ತೆಯರ್ಗೆ ಶಕ್ತಿ, ಕಪಾಲಕರ್ಗೆ ಕಪಾಲ್, ಗಾಣಪತ್ಯರ್ಗೆ ಗಣಪತಿ, ವೈಷ್ಣವರ್ಗೆ ವಿಷ್ಣು, ಸೌರರ್ಗೆ ಸೂರ್ಯ, ಸಾಂಖ್ಯರ್ಗೆ ಪಂಚ ವಿಂಶತಿ ತತ್ವಸಂಖ್ಯೆ, ಲಂಗಾಂಗಿ, ಮಹಾವ್ರತಿ, ಮಾಯಾವಾದಿ, ಕಾಳಮುಖಿ, ಭಾಗವತ, ಭೇದವಾದಿ, ಸತ್ಯಯೋಗಿ, ಕಲಾಂಗಿ, ಸಿದ್ಧಯೋಗಿ ಇವು ಮೊದಲಾದವುಗಳ ವೈದಿಕಾ ವೃದಿಕಾಂತರ ದರ್ಶನಸ್ಥರ್ಗೆ ತತ್ತ ದ್ರೂಪದೇವನಾಗಿರ್ಪಂ —ಎಂದು ವಿವರಿಸಿದ್ದಾನೆ. ಅದರೆ ನಿರಂಜನ ಜಂಗಮನೇ ಪುರುಷ ಎಂಬುದೇ ಅವನ ಮೂಲಾಭಿಪ್ರಾಯ.

ಸಾಮಶಾಖಾಧ್ಯಯನರ ವೀರಶೈವ ತಂತ್ರ ವೀರಮಾಹೇಶ್ವರ ತಂತ್ರ ಪರಮ ರಹಸ್ಯ ತಂತ್ರ ಶಿವರಹಸ್ಯತಂತ್ರ ಸೂತ್ರಂಗಳ ಏಕೋರಾಮ. ಪಂಡಿತ, ಮರುಳಸಿದ್ಧ, ರೇವಣಸಿದ್ಧ ಪ್ರವರಂಗಳ ವಿರಕ್ತಾರಾಧ್ಯಾತಿಥಿಘನಲಿಂಗರ ಕಾರುಣ್ಯಾವುಂ ಅಸ್ತು = ಆಗಲಿ"

—ಹೀಗೆ ಚೆನ್ನವೀರಮಾಹೇಶ್ವರನು ಪುರುಷಸೂಕ್ತಕ್ಕೆ "ನಿರಂಜನ ಜಂಗಮ" ಭಾಷ್ಯ ರಚಿಸಿ, ಅಂತ್ಯದಲ್ಲಿ —

"ಇತಿ ಸಹ್ಯಾದ್ರಿ ಕೆಳದೀ ಷಡ್ದೇಶಕುಂಟಿಕಾ
ಪುರಸ್ಯ ಕಾಶೀಕಾಂಡ
ಚನ್ನವೀರಮಾಹೇಶ್ವರೇಣ
ಕೃತಾಪುರುಷಸೂಕ್ತಸ್ಯ
ಟೀಕಾಸಮಾಪ್ತಾ – ಎಂದಿದ್ದಾನೆ.

### (ಈ) ನಮಕ-ಚಮಕ ಅಥವಾ ಶ್ರೀರುದ್ರ ಕರ್ನಾಟಕದ ಸಟೀಕಾ

ಇದು ಶ್ರೀ ರುದ್ರೋಪನಿಷತ್[16] ಎಂದು ಭರತಖಂಡದಲ್ಲಿ, ಅದರಲ್ಲೂ ದಕ್ಷಿಣ ಭಾರತದಲ್ಲಿ ದೈನಂದಿನ ಶಿವಾರಾಧನೆಯಲ್ಲಿ, ಪ್ರಯುಕ್ತವಾಗಿರುವ, ಪ್ರಸಿದ್ಧವಾದ ಶ್ರೀ ರುದ್ರಾಧ್ಯಾಯದ[17] ಕನ್ನಡ ಟೀಕಾ. ಯಜುರ್ವೇದದ ೪ನೆಯ ಕಾಂಡದ, ೫ನೆಯ ಪ್ರಪಾಠದಲ್ಲಿ ಬರುವ ಈ ಶ್ರೀರುದ್ರದಲ್ಲಿ ಇತರ ದೇವತಾ ಪ್ರಸ್ತಾಪವಿಲ್ಲದೆ ಅಖಂಡವಾಗಿ ಶಿವನನ್ನೇ ಸಕಲ ಜಗತ್ಕಾರಣನನ್ನಾಗಿಯೂ, ಸಕಲ ಭೂತಾಂತರ್ಯಾಮಿಯನ್ನಾಗಿಯೂ ಹೊಗಳಿ ಶಿವನು ಅಣುರೇಣುತೃಣಕಾಷ್ಠಗಳಲ್ಲೆಲ್ಲಾ ಪರಿಪೂರ್ಣನಾಗಿದ್ದನೆಂದು ಹೇಳಿದೆ. ಆದ್ದರಿಂದ ಈ ಶಿವಸ್ತುತಿ ರೂಪವಾದ ಈ ರುದ್ರವನ್ನು ಪಾರಾಯಣ ಮಾಡಿದ್ದಾರೆ. ಬ್ರಹ್ಮಹತ್ಯಾದಿ ಮಹಾಪಾತಕಗಳೆಲ್ಲಾ ಧ್ವಂಸವಾಗುವುದೆಂದು ಅನೇಕ ಸಹಸ್ರ ಶ್ರುತಿ, ಧರ್ಮ, ಶಾಸ್ತ್ರ, ವಚನಗಳಿವೆ.

ನಮಕ-ಚಮಕದಲ್ಲಿ[18] ಮೊದಲರ್ಧ ನಮಸ್ಕಾರ ರೂಪವಾದ ಹನ್ನೊಂದು

---

[16] ಇದನ್ನು ಶತರುದ್ರೀಯಂ ಎಂತಲೂ ಕರೆಯುವುದುಂಟು.

[17] ತೈತ್ತಿರೀಯ ಸಂಹಿತಾ (ಕೃಷ್ಣಯಜುರ್ವೇದ ಸಂಹಿತಾ) IV ಕಾಂಡ

[18] ಪ್ರತಿ ಮಂತ್ರದ ಅಂತ್ಯದಲ್ಲೂ "ನಮಃ ನಮಃ" ಎಂದು ಬರುವುದರಿಂದ ನಮುಕನೆಂತಲೂ, "ಚಮೇ ಚಮೇ" ಎಂದು ಬರುವುದರಿಂದ ಚಮಕವೆಂತಲೂ ಹೆಸರು ಬಂದಿದೆ.

ಅನುವಾಕಗಳನ್ನೂ,[19] ಇಷ್ಟಾರ್ಥ ಪ್ರಾರ್ಥನಾ ರೂಪವಾದ ಹನ್ನೊಂದು ಅನುವಾಕ ಗಳನ್ನೂ,[20] ಹೇಳಲಾಗಿದೆ. ನಮಕದ ಮೊದಲ ಅನುವಾಕದಲ್ಲಿ ವೇದಋಷಿಯು ಸರ್ವಶಕ್ತನಾದ ಶಿವನನ್ನು ಕುರಿತು ಪ್ರಾರ್ಥಿಸಿ ಪೂಜಿಸಿದ್ದರೆ, ಎರಡರಿಂದ ಎಂಟನೆಯ ಅನುವಾಕದವರೆಗೆಗಿನ ಮಂತ್ರಗಳಲ್ಲಿ ಸರ್ವಾಂತರ್ಯಾಮಿಯಾದ ಪರಶಿವನ ಬಹುರೂಪ ಗಳಿಗೆ ಮಣಿದಿದ್ದಾನೆ. ೯-೧೦ ಅನುವಾಕಗಳಲ್ಲಿ ಪರಶಿವನನ್ನೂ, ೧೧ ನೆಯ ಅನುವಾಕ ದಲ್ಲಿ ಅವನ ಅಂಶೀಭೂತರಾದ ರುದ್ರಗಣವನ್ನೂ ಕುರಿತು ಪ್ರಾರ್ಥನೆ ಸಲ್ಲಿಸಿದ್ದಾನೆ. ಇದರಲ್ಲಿ " ನಮಶ್ಶಿವಾಯ ಚ " ಎಂಬ ೮ ನೆಯ ಅನುವಾಕ ಮಂತ್ರವು ರುದ್ರೋಪ ನಿಷತ್ ಎಂಬ ಹಾರದ ಮಧ್ಯದಲ್ಲಿರುವ ನಾಯಕಮಣಿ ಎಂದು ಹೇಳುತ್ತಾರೆ.[21] ಶಿವಾರ್ಚಕರಿಗೆ ಪ್ರಾಣಸ್ವರೂಪವಾದ ಈ ರುದ್ರೋಪನಿಷತ್ ಉಪಾಸಕ ಹೃದಯಕ್ಕೆ ಅಮೃತಸೇಚನೆಯಂತಿದೆ.

ಚೆನ್ನವೀರನು ಶ್ರೀರುದ್ರಕ್ಕೆ ಟೀಕು ಬರೆಯುವ ಆರಂಭದಲ್ಲಿ—

ಶ್ರೀಗುರು ದಕ್ಷಿಣಾಮೂರ್ತಯೇ ನಮಃ ॥ ಶ್ರೀರುದ್ರ ಕರ್ನಾಟಕದ ಸಟೀಕಾ ಪ್ರಾರಂಭ ॥ ಶುಭಮಸ್ತು ॥ ಶ್ರೀಮದ್ಯಾಗಂಟಿ ಶರಭಂ ನತ್ವಾನಂ ಚೆಂಣದೇಶಿಕಂ ಸಂಗನಚ್ಚನ್ನವಿಭ್ಯ ಶ್ರೀ ರುದ್ರ ಸಟೀಕಾಂ ಕರೋಮ್ಯಹಂ ॥ ೧ ॥

ಎಂದು ಹೇಳಿ – ಮುಂದುವರಿದು,

ಅವತಾರಿಕೆ ॥

ಆದಿಯಲ್ಲಿ ವಿಷ್ಣು ಮಾಯೆಯಲ್ಲಿ ಶಿವ ತನ್ನ ಹಿರಣ್ಯೇಂಕಿತಮಂ ಬಿತ್ತಲದು ಹಿರಣ್ಯಾಂಡವಾಯ್ತುದರಲ್ಲಿ। ಪಂಚಮುಖಬ್ರಹ್ಮ ಪುಟ್ಟಿ ಸೃಷ್ಟಿಯಂ ಮಾಡುವಿಚ್ಛೆಯಿಂ

---

[19] ಪ್ರತಿಯೊಂದು ಅನುವಾಕದಲ್ಲೂ ಹಲವು ಮಂತ್ರಗಳಿವೆ. ಅವುಗಳ ವಿವರಹೀಗಿದೆ:

1 ಅನುವಾಕ 15 ಮಂತ್ರಗಳು    2 ಅನುವಾಕ 13 ಮಂತ್ರಗಳು

3 ಅನುವಾಕ 12 ಮಂತ್ರಗಳು    4 ಅನುವಾಕ 8 ಮಂತ್ರಗಳು

5 ಅನುವಾಕ 15 ಮಂತ್ರಗಳು    6 ಅನುವಾಕ 15 ಮಂತ್ರಗಳು

7 ಅನುವಾಕ 1 ಮಂತ್ರ (ಸಮುದಾಯ ರೂಪವಾದ ಒಂದೇ ಒಂದು ಮಂತ್ರ ಇದೆ)

8 ಅನುವಾಕ 11 ಮಂತ್ರಗಳು    9 ಅನುವಾಕ 2 ಮಂತ್ರಗಳು

10 ಅನುವಾಕ 12 ಮಂತ್ರಗಳು    11 ಅನುವಾಕ 11 ಮಂತ್ರಗಳು

[20] ಇಲ್ಲಿ ಮಂತ್ರಗಳ ಸಂಖ್ಯೆಯನ್ನು ಗುರುತಿಸುವುದು ಕಷ್ಟ.

[21] ಅಭಿನವ ಶಂಕರಾಚಾರ್ಯ, ಶ್ರೀ ರುದ್ರಭಾಷ್ಯ, ಪು. 126.
ವಿ. ವಿ. ಪ್ರೆಸ್ ; ಶ್ರೀರಂಗಂ. 1913.

ತಪವೆಸಗಳಾತಂಗೆ ಶಿವಂ ಮೆಚ್ಚಿ ತನ್ನ ವಾಮಭಾಗದ ಶಕ್ತ್ಯಂಶಮಂ ಪಾಲಿಸಲಡಂ। ನೆಲದ ಮೇಲೆ ಬರೆದು ಜೀವಮಂ ಕುಡಲದೆ ಸರಸ್ವತಿಯಾದಳವಳಂ ರಮಿಸುವೆನೆಂದು ಬಯಸೆ, ಅವಳ್ ಮೃಗಿಯಾಗಿ ತಂದೆಯಿಂ ರಮಿಸಿಕೊಳ್ಳಲೊಲ್ಲದೆಯೋಡುತ್ತಿರಲವಂ ಮೃಗವಾಗಿ ಬೆಂಬತ್ತೆ, ಮೃಗಿ ಶಿವನಂ ಸ್ತುತಿಸೆ, ಶಿವಂ ಕಿರಾತನಾಗಿ ಬಂದು, ಮೃಗನಂ ಚಕ್ರಬಾಣದಿಂ ಶಿರವಂ ಪರಿಹರಿಸೆಯಲಾ ಶಿರಂ ತಿರುಗುತ್ತೆ। ಶಿವನಂ, ಶಿವನ ಕೋಪಮಂ, ಶಿವನ ಆಯುಧಂಗಳಂ, ಶಿವನಲಿರ್ಪ ತಿಂಗಳಂ, ಶಿವನ ಗಣಂಗಳಂ ಪೊಗಳಿ ಪುನಃ। ಪಂಚಮುಖ ಬ್ರಹ್ಮತ್ವಮಂ ಪಡೆದು, ಸೃಷ್ಟಿಕರ್ತನಾದನೆಂದು ಲೈಂಗ್ಯದೊಳೆ ಎಳ್ದುದಾ ಪ್ರಸ್ತಾವದಲ್ಲಿ ಪುಟ್ಟಿದ ಶ್ರೀರುದ್ರಮಂ ಜಪಿಸಲ್ಭುಕ್ತಿ ಮುಕ್ತಿಯಹುದೊ ॥

ಎಂದು ಪ್ರಶಂಸಿಸಿ —

ಬ್ರಹ್ಮೋವಾಚ = ಬ್ರಹ್ಮ ನುಡಿದ —

ಮೂಲ ॥ ಓಂ ನಮಸ್ತೇ ರುದ್ರಮನ್ಯವೆ ಉತೋತ ಇಷವೇ ನಮಃ ।
ನಮಸ್ತೇ ಅಸ್ತು ಧನ್ವನೇ ಬಾಹುಭ್ಯಾಮುತ ತೇ ನಮಃ ॥

ಟೀ ॥ ಓಂ = ಮಂಗಲಸ್ವರೂಪನಾದ, ರುದ್ರ = ಯತಿಶಿವನ್, ತೇ = ನಿನ್ನ ಮನ್ಯವೆ = ಕೋಪಕ್ಕೆ, ನಮಃ = ಶರಣಾರ್ಥಿ, ಉತ = ಮತ್ತೆ, ತೇ = ನಿನ್ನ, ಇಷವೆ = ಅಂಬಿಗೆ, ನಮಃ = ಶರಣಾರ್ಥಿ, ಉತ = ಮತ್ತೆ, ತೇ = ನಿನ್ನ, ಧನ್ವನೆ = ಬಿಲ್ಲಿಗೆ, ನಮಃ = ಶರಣಾರ್ಥಿ, ಉತ, = ಮತ್ತೆ, ತೇ = ನಿನ್ನ, ಬಾಹುಭ್ಯಾಂ = ತೋಳ್ಗಳ್ಗೆ, ನಮಃ = ಶರಣಾರ್ಥಿ, ಅಸ್ತು = ಆಗಲಿ ॥ ೧ ॥

ಎಂದು ವ್ಯಾಖ್ಯಾನಿಸಿದ್ದಾನೆ. ಹೆಚ್ಚುಕಡಿಮೆ ಎಲ್ಲ ಅನುವಾಕದ ಎಲ್ಲ ಮಂತ್ರಗಳಿಗೂ ಇದೇ ರೀತಿಯಲ್ಲಿ ಟೀಕು ಬರೆದಿದ್ದಾನೆ.

ಚನ್ನವೀರನ ಶ್ರೀ ರುದ್ರ ಟೀಕು ಪೂರ್ಣ ಲಭಿಸಿಲ್ಲ.[22] ಉಪಲಬ್ಧವಿರುವ ಕೆಲವು ಅನುವಾಕಗಳ ಅನುವಾದದಲ್ಲಿ ಅನುವಾದಕನ ಭಾಷೆಯ ಮೇಲೆ ಕಾಲ, ದೇಶ, ಪರಿಸರಗಳ ಪ್ರಭಾವ ವಿಶೇಷವಾಗಿ ಆಗಿರುವುದು ಕಂಡುಬರುತ್ತದೆ. ಉದಾಹರಣೆಗೆ— ಅವ್ಯಾಧಿನೀಭ್ಯಃ = ಎಸ್ನುವುದಕ್ಕೆ 'ದಡಾರ ಸೀತಳ ಸಿಡುಬುಗಳನ್ನೈದಿಸುವ

---

[22] ನಮಗೆ ಸಿಕ್ಕದ್ದು ಕೆಲವೇ ಹಾಳೆಗಳು, ಪ್ರೊ॥ ಜಿ. ಎಂ. ಉಮಾಪತಿಶಾಸ್ತ್ರಿಗಳವರಿಗೆ ಕೆಲವು ಓಲೆಗರಿಗಳು ಸಿಕ್ಕಿವೆ. ಉಪಲಬ್ಧ ಉಭಯ ಕೃತಿಗಳೂ ಅಪೂರ್ಣ.

ಶಾಕಿನಿಯರಿರಾ'[23] ಎಂತಲೂ, ವೃತ್ತಿವರ್ಗ ರೂಪಿ ರುದ್ರನನ್ನು ಕುರಿತ ಪ್ರಾರ್ಥನೆಯಲ್ಲಿ - ಸೇನಾನಿಭ್ಯಃ = ದಳವಾಯಿಗಳಾದ ರುದ್ರರಿರಾ,[24] ರಥಕಾರೇಭ್ಯಃ = ವಡ್ಡರಾದ ರುದ್ರರಿರಾ,[25] ಪುಂಜಷ್ಟೇಭ್ಯಃ = ದೀವರರಾದ ರುದ್ರರಿರಾ,[26] ಧನ್ವಕೃದ್ಭ್ಯಃ = ಪಿರಂಗಿಹಾರರಾದ ರುದ್ರರಿರಾ,[27] ಎಂತಲೂ, ಮಾದಾರ, ಗಿಡ್ಡ, ಗುಜ್ಜಾರಿ, ಕರಾವಳಿ, ಯಡಕುರುವ, ಒಕ್ಕಲಗ, ಸಮಗಾರ, ಮಾಲೆಗಾರ, ಬೆಳೆದ ಹೊಲಗದ್ದೆ, ಜವಳಿ, ಸೊನ್ನೆಗಾರ (ಸುವರ್ಣಕಾರ), ಚಿಪ್ಪಿಗ, ಗೊಲ್ಲ, ಉಪ್ಪಾರ ನೀರಗಂಟೆ, ಗಾಜಗಾರ, ಜಾಡರವನು, ಲೋಚು ಮಂಡೆಯ ಪರಂಗಿ, ಮೇದಾರ, ಕಲ್ಲುಕುಟಿಗ, ಗಾಣಿಗ, ಚಿತ್ರಗ, ಮಡಿವಾಳ, ಕೊರಮ, ಎಲೆಗಾರ, ಅಡಕೆಯ ಅಟ್ಟಿಗ, ಕೊಲ್ಲಟಿಗ - ಮೊದಲಾದ ತದ್ಧಿತನಾಮಗಳನ್ನೂ, ಮಲೆನಾಡಿನ ಆಡುಭಾಷೆಯ ಪದಗಳನ್ನೂ ರುದ್ರನ ಪರ್ಯಾಯನಾಮಗಳಿಗೆ ಭಾಷಾಂತರವಾಗಿ ಬಳಸಿದ್ದಾನೆ. ಆದರೆ —

ನಿಷಂಗಿಣ ಇಷು ಧೀಮತೇ ತಸ್ಕರಾಣಾಂ ಪತಯೇ ನಮಃ !!

— ಎಂಬಲ್ಲಿ, "ತಸ್ಕರಾಣಾಂ" ಎಂಬುದಕ್ಕೆ ಗಂಟುಕಳ್ಳರ, ಪತಯೇ = ಕಾವಲ ರುದ್ರಂಗೆ, ನಮಃ = ಶರಣಾರ್ಥಿ" ಎಂದಿದ್ದಾನೆ. ತಸ್ಕರ ಎಂಬುದಕ್ಕೆ ಇಲ್ಲಿ ಕಳ್ಳ ಅಥವಾ ಚೋರ ಎಂದರ್ಥವಲ್ಲ. ಅದು ಕಳ್ ಅಂದರೆ ಹಾಲು, ಕಳ್ಳರು ಅಂದರೆ ಹಾಲು ಮಾಡುವವರು, ಕೃಷಿ ಮತ್ತು ಪಶುಪಾಲನೆಯಿಂದ ಜೀವನ ಸಾಗಿಸುವವರು, ಈ ಜನಾಂಗದ ಅಧಿದೇವತೆಯಾದ ರುದ್ರನನ್ನು ಕುರಿತದ್ದು. ಆ 'ಕಳ್ಳ'ರ ನಾಡು 'ಕನ್ನಡನಾಡು' ಎಂದಾಗಿದೆ. ಇದು ಜನಾಂಗಸೂಚಕ ಶಬ್ದ. ಅದೇ ರೀತಿ ಅದೇ ಅನುವಾಕದ ಐದನೆಯ ಮಂತ್ರದ ನೀಚೋರವೇ = ಕಣಿವೆಗಳ್ಳನಾದ ರುದ್ರಂಗೆ, ಪರಿಚರಾಯ = ಹಳ್ಳಗಳ್ಳನಾದ ರುದ್ರಂಗೆ (ಶರಣಾರ್ಥಿ) ಎಂಬ ಪದಗಳ ಅರ್ಥ ಕಣವೆಗಳ್ಳ, ಹಳ್ಳಗಳ್ಳನೆಂದಲ್ಲ, ಹಳ್ಳ ಅಥವಾ ಪಳ್ಳದಲ್ಲಿ ವಾಸಿಸುವರ ಅಂದರೆ ಪಳ್ಳದರ ಅಂದರೆ ಪಲ್ಲವರ (ದೈವ) ರುದ್ರ ಎಂದು. ರುದ್ರ ದ್ರಾವಿಡ ದೇವತೆ. ದ್ರಾವಿಡರು ಭರತಖಂಡದ ಮೂಲನಿವಾಸಿಗಳು. ಇಲ್ಲಿಗೆ ನೆಲಸಲು ಬಂದ ಆರ್ಯರು ಇಲ್ಲಿಯ ಆದಿವಾಸಿಗಳಾದ ದ್ರಾವಿಡರ ಅಧಿಷ್ಠಾದ್ರಿ ದೇವತೆಯನ್ನು ತಮ್ಮ

---

[23] ಅನುವಾಕ IV ಮಂತ್ರ—1

[24] ಅದೇ. ಮಂತ್ರ—10

[25] ಅದೇ. ಮಂತ್ರ—12

[26] ಅದೇ. ಮಂತ್ರ—14

[27] ಅದೇ. ಮಂತ್ರ—15

ವೇದದಲ್ಲಿ ಸೇರಿಸಿಕೊಂಡು, ಪ್ರಾರ್ಥಿಸುವುದರ ಮೂಲಕ ಸ್ಥಳೀಯವಾದ "ಕಳ್ಳ"ರನ್ನು ಅಥವಾ ಕನ್ನಡನಾಡವರನ್ನು ಒಲಿಸಿಕೊಳ್ಳಲು ಯತ್ನಿಸಿರಬಹುದು ಎಂಬ ಊಹೆ ಇದೆ.[28]

ಚೆನ್ನವೀರನು ತನ್ನ ಸಟೀಕಾದಲ್ಲಿ ಇಂತಹ ಯಾವುದೇ ಪ್ರೌಢ ಚರ್ಚೆಗೆ ಆಸ್ಪದ ಕೊಡದೆ, ತನಗೆ ತಿಳಿದಮಟ್ಟಿಗೆ ಸರಳ ರೀತಿಯಲ್ಲಿ ಅರ್ಥೈಸಿಕೊಂಡು ಹೋಗಿದ್ದಾನೆ.

## (ಉ-ಊ) ಕಾಶೀಕಾಂಡ ಮತ್ತು ವೀರಮಾಹೇಶ್ವರ ತಂತ್ರ

ಚೆನ್ನವೀರಮಾಹೇಶ್ವರನು ಕಾಶೀಕಾಂಡವೆಂಬ ಕಾವ್ಯವನ್ನು ರಚಿಸಿರಬಹುದು. ಕಾಶೀಕಾಂಡವು ಸ್ಕಾಂದಪುರಾಣಾಂತರ್ಗತವಾದ ಕಾಶೀಕಾಂಡದ ಕನ್ನಡಾನುವಾದವಿರಬಹುದು. ಇದೇ ರೀತಿ ಇವನು ವೀರಮಾಹೇಶ್ವರ ತಂತ್ರಕ್ಕೆ ಕನ್ನಡ ಟೀಕು ಬರೆದಿರುವುದಾಗಿ ತಿಳಿಯುತ್ತದೆ. ಇದು ವೀರಶೈವಾಚಾರಗಳಿಗೆ ಸಂಬಂಧಿಸಿದ ಆಗಮ ಅಥವಾ ತಾಂತ್ರಿಕ ವಿಧಿವಿಧಾನಗಳಿಂದ ಕೂಡಿದ ಧರ್ಮಗ್ರಂಥವಿರಬಹುದು.

ಹೀಗೆ ಕೆಳದಿಯ ಚೆನ್ನವೀರಮಾಹೇಶ್ವರನು, ಸಾರಸ್ವತ ರಚಿತ ಕಳಸೌವ್ಯಾಕರಣಕ್ಕೆ ಸಮಗ್ರವಾಗಿ ಕನ್ನಡ ಟೀಕೆಯನ್ನು (ಶಬ್ದಮಣಿ) ರಚಿಸಿದ್ದಾನೆ. ಕಾಶಕೃತ್ಸ್ನ ವ್ಯಾಕರಣದಲ್ಲಿ ಧಾತುಪಾಠಕ್ಕೆ ಮಾತ್ರ ಕರ್ಣಾಟಕ ಟೀಕೆಯನ್ನು ರಚಿಸಿದ್ದಾನೆ. ಇದರಿಂದ ಇವನು ಪ್ರಸಿದ್ಧ ವೈಯಾಕರಣಿಯೂ, ಶ್ರೀ ರುದ್ರ, ಪುರುಷಸೂಕ್ತ, ವೀರಮಾಹೇಶ್ವರ ತಂತ್ರಾದಿಗಳಿಗೆ ಭಾಷ್ಯವನ್ನು ಕನ್ನಡದಲ್ಲಿ ರಚಿಸಿರುವುದರಿಂದ ವೇದ ವಿಶಾರದನೂ, ಆಗಮಜ್ಞಾನ ಕೋವಿದನೂ, ಕಾಶೀಕಾಂಡ ಚೆನ್ನವೀರನೆಂದು ಪ್ರತೀತನಾಗಿರುವುದರಿಂದ ಉತ್ತಮ ಪುರಾಣಜ್ಞನೂ, ಉಭಯ ಭಾಷಾ ಪಂಡಿತನೂ ಆಗಿದ್ದನೆಂದು ಊಹಿಸಬಹುದಾಗಿದೆ.

---

[28] ವಿವರಣೆಗೆ—ಫಾದರ್ ಹೆರಾಸ್‌ರವರು ಮೊಹೆಂಜದಾರೋ ಉತ್ಖನನದಲ್ಲಿ ಸಿಕ್ಕ ಮುದ್ರೆಯೊಂದರ ಮೇಲಿನ ಚಿತ್ರಲಿಪಿಯನ್ನು ಅಭ್ಯಸಿಸಿ ಬರೆದ ಲೇಖನಗಳನ್ನು ನೋಡಬಹುದು.

## II. ತಿರುಮಲಭಟ್ಟ (ಕ್ರಿ. ಶ. ೧೬೦೦)

ಸುಮಾರು ಅರ್ಧ ಶತಮಾನದವರೆಗೆ ಅವಿಚ್ಛಿನ್ನವಾಗಿ ಅತ್ಯುನ್ನತ ರೀತಿಯಲ್ಲಿ ರಾಜ್ಯಭಾರ ನಡೆಸಿದ ಸ್ವತಂತ್ರ ಪ್ರಥಮಪ್ರಭು ಹಿರಿಯ ವೆಂಕಟಪ್ಪ ನಾಯಕನ ಆಸ್ಥಾನ ಕವಿ ಈತ. ಕೆಳದಿಯನ್ನಾಳಿದವರಲ್ಲಿ ಇಬ್ಬರು ವೆಂಕಟಪ್ಪನಾಯಕರಿದ್ದಾರೆ. ಇವರಲ್ಲಿ ತಿರುಮಲಭಟ್ಟನಿಗೆ ಆಶ್ರಯ ಕೊಟ್ಟದ್ದವನು ಹಿರಿಯ ವೆಂಕಟಪ್ಪನಾಯಕ. ಹೇಗೆಂದರೆ — ಮೊದಲನೆಯದಾಗಿ "ಶಿವಗೀತೆ"ಯಲ್ಲಿ ತಿರುಮಲಭಟ್ಟ ಕೆಳದಿಯ ಸಂಕ್ಷಿಪ್ತ ವಂಶವೃಕ್ಷವನ್ನು ಕೊಟ್ಟಿದ್ದಾನೆ. ಅದರ ಪ್ರಕಾರ ಸದಾಶಿವ, ಅವನ ಮಗ ಸಂಕಭೂಪಾಲ (ದೊಡ್ಡ ಸಂಕಣ್ಣ ನಾಯಕ) ಅವನ "ಭೂಪ್ರದಕ್ಷಿಣದ ಪುಣ್ಯ ಫಲವೇ ಮೂರ್ತಿಯಾದಂತೆ ಜನಿಸಿದವನು ವೆಂಕಟಾದ್ರಿ.[29] ಅಂದಮೇಲೆ ಹಿರಿಯ ವೆಂಕಟಪ್ಪನೆನ್ನುವುದು ನಿಸ್ಸಂದೇಹ. ಎರಡನೆಯದಾಗಿ, ಶಿವತತ್ತ್ವರತ್ನಾಕರವೂ, ಕೆಳದಿ ನೃಪವಿಜಯವೂ ವೆಂಕಟಾದ್ರಿಗೆ ಭದ್ರಪ್ಪನೆಂಬ ಮಗನಿದ್ದನೆಂದು ಹೇಳುತ್ತವೆ[30] ಮೂರನೆಯದಾಗಿ "೧೬೩೧ ರಲ್ಲಿ ಹುಟ್ಟಿದ ಸಾಗರದ ೪೧ ನೆಯ ಶಾಸನದಲ್ಲಿ ವೆಂಕಟಪ್ಪನಾಯಕನ ಮೊಮ್ಮಗನಾದ ವೀರಭದ್ರನಾಯಕನು ತಿರುಮಲಭಟ್ಟನ ಮಗನಾದ ಶಂಭುಲಿಂಗಭಟ್ಟನಿಗೆ ಭೂದಾನ ಮಾಡಿದಂತೆ ಹೇಳಿದೆ. ಈ ತಿರುಮಲಭಟ್ಟನು ಶಿವಗೀತಾ ಕರ್ತೃವಾಗಿರಬಹುದು."[31] ನಾಲ್ಕನೆಯದಾಗಿ, ಹಿರಿಯ ವೆಂಕಟಪ್ಪ ನಾಯಕನು ತಿರುಮಲಭಟ್ಟನಿಂದ ಶಿವಗೀತೆಯನ್ನು ಲೋಕೋಪಕಾರಾರ್ಥವಾಗಿ ಬರೆಸಿದ ನೆಂದು ಕವಿ ಲಿಂಗಣ್ಣನು ಸ್ಪಷ್ಟವಾಗಿ ತಿಳಿಸಿದ್ದಾನೆ.[32] ಈ ಎಲ್ಲ ಆಧಾರಗಳಿಂದ ತಿರುಮಲಭಟ್ಟನು ಹಿರಿಯ ವೆಂಕಟಪ್ಪನ ಆಸ್ಥಾನದಲ್ಲಿದ್ದವನು ಎಂದು ನಿರ್ಧರಿಸಿ ಹೇಳಬಹುದು. ಇವನ ಕಾಲ ಕ್ರಿ. ಶ. ಸುಮಾರು ೧೬೦೦ ಆಗಬಹುದು. ಇವನು ಬ್ರಾಹ್ಮಣ ಕವಿ. 'ಉಭಯ ಸತ್ಕವಿ ಶಿರೋಮಣಿಯೆನಿಪ ವಿಷ್ಣುಸೂರಿವರ

---

[29] ಶಿವಗೀತೆ, ಪೀಠಿಕಾ ಸಂಧಿ ಪದ್ಯ 9-13.

[30] ಶಿವ-ರತ್ನಾಕರ VI, XIII, 131 ;

ಕೆ. ನೃ. ವಿ. ಪು. 70.

[31] ಕ. ಕ. ಚ. II, ಪು. 318 (ಅಡಿಟಿಪ್ಪಣಿ)

[32] ಕೆ. ನೃ. ವಿ. ಪು. 88

ಸುಕುಮಾರ ಸುಕವಿ"ಯಂತೆ ಈ ತಿರುಮಲಭಟ್ಟ.[33] ತಿರುಮಲ ಭಟ್ಟನ ಕೃತಿಗಳು ಮೂರು :—

1) ಗೀತಗೌರೀವರ

2) ಶಿವಾಷ್ಟಪದಿ

3) ಕರ್ಣಾಟಕ ಶಿವಗೀತೆ

ಇವುಗಳಲ್ಲಿ ಕರ್ಣಾಟಕ ಶಿವಗೀತೆಯೊಂದನ್ನು ಬಿಟ್ಟರೆ ಮಿಕ್ಕ ಎರಡು ಗ್ರಂಥಗಳು ಸಿಕ್ಕಿಲ್ಲ.[34] 'ಪದ್ಮಪುರಾಣದುತ್ತರ ಖಂಡದೊಳೆ ಶ್ರೀಮತ್ಪರಮೇಶ್ವರಂ ರಾಮಭದ್ರಂಗುಪದೇಶಂಗೈದ ಪದಿನೆಂಟಧ್ಯಾಯಗಳುಳ್ಳ ಶಿವಗೀತೆಯಂ ಲೋಕೋಪಕಾರಾರ್ಥವಾಗಿ

---

[33] ಉಭಯಸತ್ಕವಿ ಶಿರೋಮಣಿ ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಎಂದು ರಾ. ನರಸಿಂಹಾಚಾರ್ಯರು (ಕ. ಕ. ಚ. II, ಪು. 317—18ರಲ್ಲಿ) ತಿಳಿಸುತ್ತಾರೆ. ಕರ್ಣಾಟಕ ಶಿವಗೀತೆಗೆ ಉಪೋದ್ಘಾತ ಬರೆದ ಎಂ. ಲಕ್ಷ್ಮೀನಾರಾಣಪ್ಪನವರೂ ಸಹ ಇದೇ ಅಭಿಪ್ರಾಯವುಳ್ಳವರಾಗಿದ್ದಾರೆ (ಶಿವಗೀತೆ ಉಪೋದ್ಘಾತVI) ಆದರೆ ಈ ಈ ವಿಶೇಷವು ತಿರುಮಲಭಟ್ಟನಿಗಿಲ್ಲ; ಅವನ ತಂದೆ ವಿಷ್ಣು ಸೂರಿಗೆ. ಹೇಗೆಂದರೆ ಉಭಯ ಸತ್ಕವಿ ಶಿರೋಮಣಿ ವಿಷ್ಣು ಸೂರಿ, ಅವನ ಸುಕುಮಾರ ಸತ್ಕವಿ ತಿರುಮಲ ಭಟ್ಟ.-ಒಂದು ವೇಳೆ ಈ ವಿಶೇಷವು ತನಗೇ ಅನ್ವಯಿಸುವುದಾಗಿದ್ದರೆ ಉದ್ದಾಮಕವಿ ತಿರುಮಲಭಟ್ಟ ಮೇಲೆ "ಸತ್ಕವಿ" ಎಂದು ಹೇಳಿ ಕೆಳಗೆ ಸುಕವಿ ಎಂದು ವಿಶೇಷಗಳ ದ್ವಿರುಕ್ತಿ ದೋಷಕ್ಕೆ ಕೈ ಹಾಕುತ್ತಿರಲಿಲ್ಲ. ಆದ್ದರಿಂದ ಸತ್ಕವಿ ಶಿರೋಮಣಿ ಎನ್ನುವುದು ತಿರುಮಲಭಟ್ಟನ ತಂದೆ ವಿಷ್ಣು ಸೂರಿಗೆ ಅನ್ವಯಿಸುವ ವಿಶೇಷಣ.

ಆದರೂ ತಿರುಮಲಭಟ್ಟನು ಕಾರ್ಯತಃ ಉಭಯ ಸತ್ಕವಿ ಶಿರೋಮಣಿಯಾಗಿದ್ದಾನೆ. ಅವನು ರಚಿಸಿದನೆಂದು ಹೇಳಲಾದ ಕನ್ನಡ ಮತ್ತು ಸಂಸ್ಕೃತ ಕೃತಿಗಳ ಹೆಸರುಗಳನ್ನೂ ಮಿಗಿಲಾಗಿ ಅವನ ಶಿವಗೀತಾ ಭಾಷಾಂತರವನ್ನೂ ನೋಡಿದರೆ ಸಾಕು ಅವನು ಉಭಯ ಸತ್ಕವಿ ಶಿರೋಮಣಿ ಎನ್ನುವುದು ಸ್ಪಷ್ಟವಾಗುತ್ತದೆ.

[34] ಶಿವಾಷ್ಟಪದಿಯನ್ನು ತಾನು ಬರೆದುದಾಗಿ ಕವಿ ಹೇಳಿಕೊಂಡಿಲ್ಲ. ಅವನು ಹೇಳಿರುವುದು ಕರ್ಣಾಟಕದ ಶಿವಗೀತೆ ಮತ್ತು ಗೀತಗೌರೀವರ ಗ್ರಂಥಗಳನ್ನು (ನೋಡಿ ಶಿವಗೀತೆ. ಪೀ. ಸಂ. ಪು. 3 ಪದ್ಯ 11) ಆದರೆ ಕೆಳದಿ ನೃಪ ವಿಜಯವು ಗೀತಗೌರೀವರನ್ನು ಕೈಬಿಟ್ಟು ಶಿವಾಷ್ಟಪದಿಯನ್ನು ಹೇಳಿದೆ. ಇದರಿಂದ ಶಿವಾಷ್ಟಪದಿ ಮತ್ತು ಗೀತಗೌರೀವರ–ಎರಡೂ ಒಂದೇ ಕೃತಿಯೇ ಎಂಬ ಸಂದೇಹ ಬರುವುದು ಸಹಜ. ಆದರೆ ಇವು ಬೇರೆ ಬೇರೆ ಕೃತಿಗಳೆಂದು ನಮ್ಮ ಭಾವನೆ. ಏಕೆಂದರೆ ಶಿವಾಷ್ಟಪದಿ ಕೇವಲ ಎಂಟು ಪದ್ಯಗಳ ಪರಿಮಿತಿ ಉಳ್ಳದ್ದು. ಗೀತಗೌರೀವರ ಗೀತಗೋವಿಂದದಂತೆ ಹತ್ತಾರು ಮಧುರ ಗೀತೆಗಳ ಸಂಕಲನ ಇದ್ದಿರಬೇಕು. ಆದ್ದರಿಂದ ಕವಿ ತಿರುಮಲಭಟ್ಟನು ಕರ್ಣಾಟಕ ಶಿವಗೀತೆಯೊಂದಿಗೆ, ಗೀತಗೌರೀವರ ಮತ್ತು ಶಿವಾಷ್ಟಪದಿ ಎಂಬ ಕೃತಿಗಳನ್ನೂ ರಚಿಸಿದ್ದಾನೆ ಎಂದು ಹೇಳಬಹುದು.

ಕವಿ ತಿರುಮಲಭಟ್ಟರಿಂ ವಾರ್ಧಿಕ ಷಟ್ಪದಿಯೊಳ್ ಕರ್ಣಾಟಕ ಕಾವ್ಯಮನಾಗಿಸಿ, ಮತ್ತಮಲ್ಲದಾ ಕವಿ ತಿರುಮಲಭಟ್ಟರಿಂ ಗೀರ್ವಾಣದೊಳ್ ಶಿವಾಷ್ಟಪದಿಯಂ ರಚನೆಗೈಸಿ" ಎಂದು ಕವಿ ಲಿಂಗಣ್ಣನು ಹೇಳಿರುವುದರಿಂದ[35] 'ಶಿವಾಷ್ಟಪದಿ' ಸ್ಪಷ್ಟವಾಗಿ ಸಂಸ್ಕೃತ ಗ್ರಂಥ; ಕರ್ಣಾಟಕ ಶಿವಗೀತೆ ಕನ್ನಡ ಗ್ರಂಥ ಎಂಬುದು ನಿರ್ವಿವಾದ. ಆದರೆ "ಗೀತಗೌರೀವರ"ವು ಉಪಲಬ್ಧವಿಲ್ಲದ್ದರಿಂದ ಅದು ಯಾವ ಭಾಷಾ ಕೃತಿಯೋ ಹೇಳುವುದಕ್ಕಾಗುವುದಿಲ್ಲ. 'ಕರ್ಣಾಟಕ ಶಿವಗೀತೆ'ಯಲ್ಲಿ ಕವಿಯ ಬಾಯಿಂದಲೇ ಬಂದಿರುವುದರಿಂದ[36] ಬಹುಶಃ ಇದು ಕನ್ನಡ ಕೃತಿಯಿರಬಹುದು ಎಂದನ್ನಿಸುತ್ತದೆ. ಆದರೆ, "ವೆಂಕಟಾದ್ರಿ ಭೂಪನು, ಇಂದುವರಮಿದಕೆ ಸರಿಯಿಲ್ಲೆನಿಪ ಗೀತಗೋವಿಂದದಿಂ ಮೃದು ಪದಪ್ರಾಸರಸ ಚಿತ್ರಾರ್ಥದಿಂದ ನಾಲ್ಮಡಿಯೆನಿಪ ಗೀತಗೌರೀವರವನೆಂನಿಂದ ಪೇಳಿಸಿದನೂ"[37] ಎಂದು ಹೇಳಿಕೊಂಡಿರುವುದರಿಂದ ಅದು ಸಂಸ್ಕೃತದ್ದಿರಬೇಕು ಅನ್ನಿಸುತ್ತದೆ. ಏಕೆಂದರೆ, "ಮೃದು ಪದ ಪ್ರಾಸರಸ ಚಿತ್ರಾರ್ಥ" ದಲ್ಲಿರುವುದು ನಿಜಕ್ಕೂ ಜಯದೇವನ ಸಂಸ್ಕೃತ ಗೀತಗೋವಿಂದ. ಅದಕ್ಕೆ ನಾಲ್ಕುಮಡಿ ಹೆಚ್ಚಾದ ಗುಣಗಳನ್ನುಳ್ಳದ್ದಾಗಿರಬೇಕಾದರೆ ಅದು ಸಂಸ್ಕೃತದ್ದೇ ಇರಬೇಕು. ಏನೇ ಇರಲಿ, ಗ್ರಂಥ ಉಪಲಬ್ಧವಿಲ್ಲದ್ದರಿಂದ ಅದರ ಬಗ್ಗೆ ಯಾವುದನ್ನೂ ನಿರ್ಧರಿಸಿ ಹೇಳುವಂತಿಲ್ಲ.

## (ಅ) ಕರ್ಣಾಟಕ ಶಿವಗೀತೆ

ವ್ಯಾಸ ಪ್ರಣೀತವೆಂದು ಪ್ರಸಿದ್ಧವಾಗಿರುವ 'ಪದ್ಮ ಪುರಾಣ'ದ ಒಂದು ಅಂಗ ಶಿವಗೀತೆ. ಭಗವದ್ಗೀತೆಯಂತೆ ಇದೂ ಸಹ ಒಂದು ಮೋಕ್ಷಸಾಧಕವಾದ ಕೃತಿ. "ಇದರಲ್ಲಿ ಅನೇಕ ಉಪನಿಷತ್ತುಗಳ ವಾಕ್ಯಗಳೂ, ಮಂತ್ರ ಶ್ರುತಿಗಳೂ, ಶ್ಲೋಕ ರೂಪಗಳಾಗಿ ಕಂಡು ಬರುತ್ತಿವೆ. ಇಂತಹ ವಿಶ್ವವಿಖ್ಯಾತವಾದ ದೇವಭಾಷಾ ಕೃತಿಯು ಅನೇಕ ಭಾರತೀಯ ಭಾಷೆಗಳಿಗೆ ಅನುವಾದವಾಗಿರಬಹುದು. ಕನ್ನಡದಲ್ಲಿ ಹಲವು

---

[35] ಕೆ.ನೃ.ವಿ.ಪು.88.

[35] ಶಿವಗೀತೆ. ಪೀ.ಸಂ. ಪದ್ಯ 11

[37] ಅದೇ.

ಅನುವಾದಗಳೂ,[38] ಇದನ್ನು ಕುರಿತ ವಿಚಾರವಾಹಿನಿಗಳೂ[39] ಸಿಗುತ್ತವೆ. ಇವುಗಳಲ್ಲಿ ತಿರುಮಲಭಟ್ಟನ ಕೃತಿ ಅತ್ಯುತ್ತಮ ಸರಳ ಅನುವಾದ ಗ್ರಂಥ.

ಶಿವಗೀತೆಯು "...........ಮುಖ್ಯವಾಗಿ ಸೀತಾಪಹಾರಾನಂತರದಲ್ಲಿ ಶ್ರೀರಾಮ ಲಕ್ಷ್ಮಣರು ಪರಿತಾಪಯುಕ್ತರಾಗಿ ದಂಡಕಾರಣ್ಯದಲ್ಲಿ ಸಂಚರಿಸುತ್ತಿರುವಾಗ, ಅಗಸ್ತ್ಯ ಮಹರ್ಷಿಯು ಬಂದು ಶ್ರೀರಾಮನಿಗೆ ಉಪದೇಶಿಸಿದ ಶಿವದೀಕ್ಷಾವಿಧಿಯೂ, ಪರಶಿವನು ಪ್ರತ್ಯಕ್ಷನಾಗಿ ಶ್ರೀರಾಮನಿಗೆ ಪಾಶುಪತಾಸ್ತ್ರವನ್ನಿತ್ತ ಕಥೆಯೂ, ಮುಮುಕ್ಷುಗಳಾದವರ ಉಪಕಾರಾರ್ಥವಾಗಿ ಪರಶಿವನು ಶ್ರೀರಾಮನಿಗೆ ಕರುಣಿಸಿ ತಿಳಿಸಿದ ಪಾರಮೇಶ್ವರ ವಿರಾಟ್ಸ್ವರೂಪ, ಜಗದ್ರಕ್ಷಣ ವ್ಯಾಪಾರ ಕ್ರಮ, ದೇಹೋತ್ಪತ್ತಿ ಜೀವೋತ್ಪತ್ತಿ ಕ್ರಮ, ಶಿವೋಪಾಸನ ವಿಧಾನ, ಮೋಕ್ಷಾಧಿಕಾರ ಲಕ್ಷಣ ಮೊದಲಾದ ಶಿವರಾಜ

---

[39] 1) ಕರ್ಣಾಟಕ ಶಿವಗೀತೆ—ತಿರುಮಲಭಟ್ಟ—ಸಂ. ಶ್ರೀ ಬಸವಾರಾಧ್ಯ, ಪ್ರಕಾಶನ ಅಂಬಿಕಾಮಾಲೆ, 18 ಜುಲೈ 1913.

2) ಶಿವಗೀತೆ—ಶ್ರೀ ಹೆಚ್. ಗಂಗಾಧರಶಾಸ್ತ್ರಿಗಳು ಪ್ರಕಾಶನ. ಶ್ರೀ ಜಯಚಾಮ ರಾಜೇಂದ್ರ ಗೀತಾರತ್ನಮಾಲಾ, ಸಂಖ್ಯೆ 2, ಮೈಸೂರು (1950)

3) 'ಪದ್ಮ ಪುರಾಣಾಂತರ್ಗತವಾದ ಶಿವಗೀತೆಯು'–ಮೋಕ್ಷಾರ್ಥಿಗಳಿಗತ್ಯಂತೋಪ ಯೋಗವಾಗಿ, ಮಾಗಡಿ ಎಸ್. ವೀರಪ್ಪ ಶಾಸ್ತ್ರಿಗಳಿಂದ ಕನ್ನಡ ವಚನ ರೂಪವಾಗಿ ರಚಿಸಲ್ಪಟ್ಟು, ಬೆಂಗಳೂರು ಟವನ್ ಮುದ್ರಾಕ್ಷರಶಾಲಾಧಿಕಾರಿ ಗಳಿಂದ ಹರಿರಾಮ ಮಿಶ್ರರವರಲ್ಲಿ ಮುದ್ರಿಸಲ್ಪಟ್ಟಿತು. 1905.

4) 'ಶ್ರೀ ಶಿವಗೀತೆ — ಸಂಗ್ರಾಹಕ, ವೇ.ನಾ.ಬ್ರ.ಪಂ. ಮಹಾದೇವಯ್ಯ ಶ್ರೀ ಕಾಶೀನಾಥ ಗ್ರಂಥಮಾಲಾ — 62. (1967)

5) ಶಿವಗೀತೆ (ನಂಜರಾಜವಾಣೀವಿಳಾಸ) — ಕಳಲೆನಂಜರಾಜ (ಭಾಮಿನಿಷಟ್ಪದಿ ರಚನೆ) ಕ.ಕ.ಚ. III, ಪು. 46. and A Descriptive catalogue of the Kanarese Manuscripts, Madras, Vol. II, pt. I, P. 393.

6) ಶಿವಗೀತ, ಶಿವಗೀತೆ (ಪದ್ಯ)
A Descriptive Catalogue of the Kanarese Manuscripts, Madras, Vol. II, Pt. I, P. 488, No. 307;
ಆದರೆ ಬರೆದವನ ಹೆಸರು ಗೊತ್ತಿಲ್ಲ.

[39] ಶಿವಗೀತಾಮಹತ್ವ–ವಿದ್ವಾನ್ ಡಾ॥ ಟಿ. ಜಿ. ಸಿದ್ದಪ್ಪಾರಾಧ್ಯರು. ಪ್ರಕಾಶಕರು : ಬ್ರಂ. ಶ್ರೀ. ಶಿವಲಿಂಗಾರಾಧ್ಯರು, ತಿಪಟೂರು. 1965.

ಯೋಗದ ಲಕ್ಷಣಗಳೆಲ್ಲವೂ ಅಡಗಿರುವುವು". [40] ಈ ಉಪದೇಶಕ್ರಮವು ಪ್ರತಿಯೊಬ್ಬ ನಾಸ್ತಿಕನಿಗೂ ಬೋಧಪ್ರದವಾದ ಪಾಠದಂತಿರುವುದು. ಸಗುಣೋಪಾಸನೆಯು ನಿರ್ಗುಣೋಪಾಸನೆಗೆ ಎಷ್ಟರಮಟ್ಟಿಗೆ ಸಹಕಾರಿಯಾಗುವುದೆಂಬುದನ್ನು ಇಲ್ಲಿ ನಾವು ದೃಷ್ಟಾಂತ ಪೂರ್ವಕವಾಗಿ ತಿಳಿದುಕೊಳ್ಳಬಹುದು. ಶಮದಮಾದಿಗಳಿಂದ ಚಿತ್ತ ಶುದ್ಧಿಯನ್ನು ಪಡೆದು ಅನಂತರ ಸದ್ಗುರೂಪದೇಶದಿಂದ ಬ್ರಹ್ಮಜ್ಞಾನವನ್ನಾರ್ಜಿಸಿ, ಪರಬ್ರಹ್ಮಸಾಕ್ಷಾತ್ಕಾರವನ್ನು. ಪಡೆಯುವುದೇ ಜೀವನ್ಮುಕ್ತಿಯ ಕ್ರಮವೆಂದು ಬೋಧಿಸಿ ಈ ಜೀವನ್ಮುಕ್ತಿಯನ್ನು ಸಾಧಿಸಲು ಸುಲಭವಾದ ಭಕ್ತಿಯೋಗವನ್ನು ನಿರೂಪಿಸುವನು." [41]

ಹೀಗೆ ಅಧ್ಯಾತ್ಮ ಭೂಯಿಷ್ಠವೂ, ನೀತಿಬೋಧಕವೂ, ಧರ್ಮಸ್ವರೂಪವೂ, ಇಹಪರ ಸಾಧಕವೂ, ಪರಮೇಶ್ವರ ಪ್ರೋಕ್ತವೂ ಆಗಿ ಮೆರೆಯುತ್ತಿರುವ ಶಿವಗೀತೆ ನಿಜಕ್ಕೂ ಸಾರಸ್ವತ ಕ್ಷೇತ್ರಕ್ಕೆ ಒಂದು ಅಮೂಲ್ಯವಾದ ಕೊಡುಗೆ. ಇಂತಹ ಶ್ರೇಷ್ಠ ತತ್ತ್ವಗ್ರಂಥವನ್ನು ಸುಂದರವಾಗಿ ಕನ್ನಡಿಸಿಕೊಟ್ಟವನು ಕೆಳದಿ ವೆಂಕಟಪ್ಪನಾಯಕನ ಆಸ್ಥಾನ ಕವಿ ತಿರುಮಲಭಟ್ಟ.

ತಿರುಮಲಭಟ್ಟನ ಕರ್ಣಾಟಕ ಶಿವಗೀತೆಯು ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿದೆ.[43] ೧೬ ಸಂಧಿಗಳಿಂದ ಕೂಡಿ ೩೬೭ ಪದ್ಯಗಳನ್ನುಳ್ಳದ್ದಾಗಿದೆ. ಇದು ಕಾವ್ಯ ರಚನೆಯ ಸಂಪ್ರದಾಯದಂತೆ 'ಶ್ರೀ'ಕಾರದಿಂದ ಆರಂಭವಾಗಿಲ್ಲ; ಆದರೆ ಶ್ರೀಪತಿಯ ಪ್ರಾರ್ಥನೆ ಇದೆ. ಮುಂದಿನ ಪದ್ಯಗಳಲ್ಲಿ ಆದ್ರಿತನಯಾಮನೋವಲ್ಲಭನನ್ನೂ, ಶಾರದೆಯನ್ನೂ, 'ಸುಗುಣ ಸತ್ವಾವಲಂಬನೆನಿಸಿ ದೇವರಕ್ಷಣ' ಕೃತ ನಿಜಾವತಾರಂ ಧರೆಯೊಳಾ ವೆಂಕಟಾದ್ರಿನಾಯಕನಲ್ಲದಿಷ್ಟಗಳನೆಮಗೀವ ದೇವನಾವಂ" ಎಂದು ತನ್ನೊಡೆಯನನ್ನೂ, ಇಕ್ಕೇರಿ ನಗರದ ವರ್ಣನೆಯನ್ನೂ ಮಾಡಿ ಅನಂತರ ಇಕ್ಕೇರಿ ಅರಸರ ವಂಶಚರಿತೆಯನ್ನು ಸದಾಶಿವನಿಂದ ವೆಂಕಟನೃಪಾಲನವರೆಗೆ ಸಂಗ್ರಹಿಸಿ ಹೇಳಿ, ಆ ವೆಂಕಟಾದ್ರಿಯನ್ನೂ ಪ್ರಶಂಸಿಸಿ, ತನ್ನಿಂದ 'ಆತ' 'ಗೀತಗೌರೀವರವನ್ನು'

---

[40] ಎಂ ಲಕ್ಷ್ಮೀನಾರಣಪ್ಪ, ಶಿವಗೀತೆ, ಉಪೋ. ಪು. (1)

[41] ಶಿಲ್ಪಸಿದ್ಧಾಂತಿ ಸಿದ್ಧಲಿಂಗಸ್ವಾಮಿಗಳು, ಶ್ರೀ ಶಿವಗೀತಾ ಪ್ರಸ್ತಾವನೆ. ಪು (ii)

[42] ಕವಿ ಲಿಂಗಣ್ಣನು ಕೆಳದಿ ನೃಪವಿಜಯದಲ್ಲಿ ಹೇಳಿರುವುದೂ (ಪು.89) ತಿರುಮಲ ಭಟ್ಟನು ಶಿವಗೀತೆಯಲ್ಲಿ ಬಳಸಿಕೊಂಡಿರುವುದೂ ವಾರ್ಧಕ ಷಟ್ಪದಿಯೇ. ಆದರೆ ಪೀಠಿಕಾ ಸಂಧಿಯ 14ನೆಯ ಪದ್ಯದಲ್ಲಿ ಕೆಳದಿ ವೆಂಕಟನೃಪನು "ಶಿವಗೀತೆಯರ್ಥಮಂ ಕನ್ನಡಿಸ ಬೇಕೆಂದು ನೇಮಿಸಿದನುದ್ದಂಡ ಷಟ್ಪದಿಗಳಿಂ" ಎಂದಿದ್ದಾನೆ. ಆದರೆ ಇಲ್ಲಿ ಬರುವ 'ಉದ್ದಂಡ ಷಟ್ಪದಿ' ಎಂಬ ಪದವು ಷಟ್ಪದಿಯ ಒಂದು ರೂಪ ಸೂಚಕವಲ್ಲ; ದೀರ್ಘವಾದ, ಉನ್ನತವಾದ ಎಂಬ ಅರ್ಥವುಳ್ಳದ್ದು.

ಹೇಳಿಸಿದನೆಂದು ಹೇಳಿಕೊಂಡಿದ್ದಾನೆ. ತನ್ನ ಕೃತಿಯನ್ನು ಯಾರು ಮೆಚ್ಚಿ ಆಗ ಬೇಕಾದ್ದೇನು? ತನ್ನ ಸ್ವಾಮಿ—"ಸರ್ವಜ್ಞ ಶಿವನು, ನವಭೋಜ ಪ್ರಚಂಡ ಬುಧಸಖ ವೆಂಕಟೇಂದ್ರನುಂ ಕೇಳಿ ಕೈಕೊಂಡರೀಕೃತಿಯ ಸಫಲಂ" ಎಂದೂ ಮುಂದಿನ ಪದ್ಯದಲ್ಲಿ ತನ್ನ ಕಿರುಪರಿಚಯ ಮಾಡಿಕೊಟ್ಟು, 'ಭರತಖಂಡದೊಳೆಸೆವ ಸಕಲ ವಿದ್ವತ್ತಿಲಕ ಹರಿಹರಾಧ್ಯವರ ವಾಜಪೇಯಾಂಧ್ರಕೃತ ಸರಸ ಶಿವಗೀತಾನುರಂಜಕವೆನಿಪ್ಪ ಟೀಕೆಗಳ ನೆರೆ ನೋಡಿ ಪೇಳ್ದ"[43] ನಂತೆ.

ಈ ಕೃತಿಗೆ ಪ್ರೇರಕಶಕ್ತಿಯೆಂದರೆ ತನ್ನ ಸ್ವಾಮಿ. "ನಳ, ಹರಿಶ್ಚಂದ್ರ, ಹೈಹಯ, ಧರ್ಮಸುತ ಸದೃಶನಿಳೆಗೆ ಸುರಭೂಜನಭಿನವಭೋಜನೆಂದೆನಿಪ ಕೆಳದಿ ವೆಂಕಟನೃಪಂ ಕುರಿತು ಪೇಳಿಸಿದನಾ ಮೇಲೆ ಪಾದ್ಮಂಪುರಾಣಂ."

ಅಂತೆಯೇ —

"ಬಳಿಕ ತ್ರೈವಂ ಸಕಲವೇದಾಂತ ಶಾಸ್ತ್ರದೊ
ಬ್ಬುಳಿ ಭಕ್ತಿಯಿಂ ಕೇಳ್ದವಂ ರಾಮನಂದೊಲಿದು
ತಿಳಿಪಿದಂ ಸಕಲ ವಿದ್ಯಾಧಿನಾಯಕನೆಂದರೀ ಕೃತಿಗೆ ಮೆಚ್ಚನಾವಂ" ||

ಎಂಬ ಆತ್ಮವಿಶ್ವಾಸವೂ ಅವನಲ್ಲಿದೆ. –ಇದಿಷ್ಟೂ ಪೀಠಿಕಾ ಸಂಧಿ. ಮುಂದಿನ ಹದಿನಾರು ಸಂಧಿಗಳಲ್ಲಿ ಕವಿ ತಿರುಮಲಭಟ್ಟನು ಪದ್ಮಪುರಾಣಾಂತರ್ಗತವಾದ ಹದಿನಾರು ಅಧ್ಯಾಯಗಳಲ್ಲಿ ಹೇಳಿರುವ 'ಶಿವಗೀತೆ'ಯನ್ನು ಬಹು ಸುಂದರವಾಗಿ ಕನ್ನಡಿಸಿದ್ದಾನೆ.

ಶಿವನು ಸ್ಕಂದನಿಗೂ, ಸ್ಕಂದನು ಸನತ್ಕುಮಾರನಿಗೂ, ಸನತ್ಕುಮಾರನು ವೇದವ್ಯಾಸನಿಗೂ, ವೇದವ್ಯಾಸನು ನೈಮಿಶಾರಣ್ಯವಾಸಿಯಾದ ಸೂತಮಹರ್ಷಿಗೂ, ಸೂತನು ಶೌನಕಾದಿ ಮಹರ್ಷಿಗಳಿಗೂ-ಹೀಗೆ ಈ ಶಿವಗೀತೆಯ ಉಪದೇಶವು ಪರಂಪರಾಗತವಾಗಿ ಬಂದಿದೆ ಎಂಬುದಾಗಿ ತಿಳಿಸುತ್ತಾನೆ. ವೇದವ್ಯಾಸ – ಸೂತ ಮತ್ತು ಸೂತ–ಶೌನಕಾದಿ ಮುನಿಗಳು-ಇವರಿಗೆ ನಡೆಯುವ ಸಂಭಾಷಣೆಗಳು ತುಂಬಾ ಸ್ವಾರಸ್ಯವಾಗಿವೆ.

[43] ಹರಿಹರಾರಾಧ್ಯ ವಾಜಪೇಯಿ ಕೃತ ತೆಲುಗು ಶಿವಗೀತೆ ಸಿಕ್ಕಿಲ್ಲ. ಸಿಕ್ಕಿರುವುದು ಗೋದಾವರಿ ಜಿಲ್ಲಾ ಎಲ್ಲೂರು ಜಮೀನ್‌ದಾರ ರಾಜಾಮಂತ್ರಿ ಪ್ರೆಗಡ ಭುಜಂಗರಾವ್ ಬಹದೂರ್‌ರವರು ಸಂಸ್ಕೃತದಿಂದ ಆಂಧ್ರ ಭಾಷೆಗೆ ಪರಿವರ್ತಿಸಿರುವ ಒಂದು ಕೃತಿ. ಆದರೆ ತಿರುಮಲಭಟ್ಟನ ಹೇಳಿಕೆಯಂತೆ ತೆಲುಗಿನಲ್ಲಿ ಹರಿಹರಾರಾಧ್ಯನ ಶಿವಗೀತೆಯೂ ಒಂದಿದೆ ಎಂಬ ವಿಷಯವು ತಿಳಿಯುವುದರಿಂದ ತೆಲುಗು ಸಾಹಿತ್ಯ ಸಂಶೋಧಕರಿಗೆ ಒಂದು ಉಪಕಾರವಾಗಿದೆ.

ಸಾಧಾರಣನಿಗೂ ಸಾಧ್ಯವಾಗುವ ಸುಲಭವಾದ ಮುಕ್ತಿಮಾರ್ಗವೆಂದರೆ ಭಕ್ತಿ ಮಾರ್ಗ. "ಯಾರಿಗೆ ಜ್ಞಾನಯೋಗವು ಸಾಧ್ಯವಾಗುವುದಿಲ್ಲವೋ, ಯಾರಿಗೆ ಶಿವಾನುಭವವನ್ನು ಹಠಯೋಗದಿಂದ ಸಾಧಿಸಲಿಕ್ಕಾಗುವುದಿಲ್ಲವೋ, ಯಾರಿಗೆ ಸದ್ಗುರುವಿನ ಕೃಪೆಯಿಂದ ಶಿವಾನುಭವದ ದಿವ್ಯೋಪದೇಶವು ದೊರೆಯಲಾರದೋ ಅಂತಹವರು ಭಕ್ತಿಯೋಗದಿಂದಲೇ ಪರಶಿವನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು. ಇದನ್ನು ತಿಳಿಸುವುದೇ ಶಿವಗೀತೆಯ ಮುಖ್ಯಾಭಿಪ್ರಾಯವಾಗಿದೆ."[44] ನಿರ್ಮಲವಾದ ಮನಸ್ಸಿನಲ್ಲಿ ಶಿವನ ಬಗೆಗೆ ನಿಷ್ಠೆ ಬಲಿದು, ಸಮಸ್ತವನ್ನೂ ಈಶ್ವರಾರ್ಪಣ ಮಾಡಿ ತುಷ್ಟರಾಗುವುದು. ಇಂತಹ ವಿಮಲ ಭಕ್ತಿಗೆ ಜಾತಿ ಮತಗಳ ಕಟ್ಟಿಲ್ಲ, ಕಾಲ ದೇಶ ವಿಧಾನಗಳ ಕಟ್ಟಳೆಯಿಲ್ಲ. 'ಶಿವೋಹಮಸ್ಮಿ' ಎಂದರೆ ಸಾಕು ಸಾಯುಜ್ಯ ಪದವಿ ದೊರೆಯುತ್ತದೆ. ಪುರುಷಾರ್ಥ ಸಾಧನೆಯಂತೂ ಆಗಿಯೇ ಆಗುತ್ತದೆ. ಆದ್ದರಿಂದ 'ಶಿವನಡಿಯ ನೆನೆದು ವಿರಜಾದೀಕ್ಷೆ'ಯನು[45] ಸ್ವೀಕರಿಸಿ, ಶಿವಸಾಹಸ್ರವನ್ನು ಜಪಿಸಿದರೆ ರಿಗೂ ಮುಕ್ತಿಯ ಮಹಾಫಲ ಪ್ರಾಪ್ತವಾಗುತ್ತದೆ ಎಂಬುದಾಗಿ ಸೂತಮುನಿಯು ಶೌನಕಾದಿಗಳಿಗೆ ಉಪದೇಶಿಸುತ್ತಾನೆ.

ಕಾವ್ಯದ ಆರಂಭದಲ್ಲೇ ಓದುಗನಲ್ಲಿ ಭಕ್ತಿ, ಶ್ರದ್ಧೆಗಳನ್ನು ಮೂಡಿಸುವ ಯತ್ನದಲ್ಲಿ ತೊಡಗಿ ಕವಿ ಸಾಕಷ್ಟು ಯಶಸ್ವಿಯಾಗಿದ್ದಾನೆ.

ಎರಡನೆಯ ಸಂಧಿಯಲ್ಲಿ, ಶ್ರೀರಾಮಚಂದ್ರನಿಗೆ ಅಗಸ್ತ್ಯನು ಉಪದೇಶಿಸಿದ ಪಾರಮ್ಯವನ್ನು ವಿವರಿಸಿದ್ದಾನೆ.

---

[44] ಟಿ. ಜಿ. ಸಿದ್ದಪ್ಪಾರಾಧ್ಯ, ಶಿವಗೀತಾಮಹತ್ತ್ವ. ಪು. 3.

[45] ಶುಕ್ಲಪಕ್ಷದ ಚತುರ್ದಶೀ ಅಷ್ಟಮಿ, ಏಕಾದಶೀ ಈ ತಿಥಿಗಳಲ್ಲೂ, ಸೋಮವಾರದಲ್ಲೂ ಆರಿದ್ರಾ ನಕ್ಷತ್ರದಲ್ಲೂ ಸಾಧಕನು ವಿರಜಾದೀಕ್ಷೆಯನ್ನು ಸ್ವೀಕರಿಸಬೇಕು. ಜನಕನಾದ ಪರಶಿವನನ್ನು ಮನದಲ್ಲಿ ಧ್ಯಾನಿಸಿ ಸಾಧಕನು ತನ್ನನ್ನು ಸ್ಥೂಲ ಸೂಕ್ಷ್ಮ ದೇಹಗಳಿಂದ ಪ್ರತ್ಯೇಕಿಸಿದಂತೆ ಭಾವಿಸಿ ಸ್ಥಿರಭಾವದಲ್ಲಿ ವಿರಜಾ ಮಂತ್ರವನ್ನು ಉಚ್ಚರಿಸಬೇಕು.

"ನಮ್ಮ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನವೆಂಬ ಐದು ವಾಯುಗಳು ಶುದ್ಧವಾಗಲಿ, ನಾನು ನಿರ್ಮಲನೂ, ಪಾಪರಹಿತನೂ, ಆದ ಪರಂಜ್ಯೋತಿ ಇರುವೆನು" ಎಂಬ ಮಂತ್ರದ ಅರ್ಥವನ್ನು ಮನದಲ್ಲಿ ನೆನೆಯುತ್ತ ಹೃದಯದೊಳಗೆ ಪರಮಾತ್ಮನನ್ನು ಧ್ಯಾನಿಸಬೇಕು.

"ಅಗ್ನಿರಿತಿ ಭಸ್ಮ" ಎಂಬ ಮಂತ್ರವನ್ನು ಉಚ್ಚರಿಸುತ್ತ ಭಸ್ಮವನ್ನು ದೇಹದ ಎಲ್ಲಾ ಭಾಗಗಳಲ್ಲೂ ಧರಿಸಬೇಕು. ಈ ರೀತಿ ಭಸ್ಮವನ್ನು ಧರಿಸಿದವನು ಸಮಸ್ತ ಪಾಪಗಳಿಂದಲೂ ಬಿಡುಗಡೆ ಹೊಂದುವನು. ಹೀಗೆ ಭಸ್ಮಸ್ನಾನ, ಭಸ್ಮಶಯನ ಇವನ್ನು ನಡೆಯಿಸಿ ಜಿತೇಂದ್ರಿಯನಾಗಿ ಶಿವನನ್ನು ಧ್ಯಾನಿಸುವವನು ನಿರ್ಮಲನಾಗುವನು. ಭಸ್ಮವನ್ನು ಧರಿಸಿದ ಮೇಲೆ ಶಿವಸಹಸ್ರನಾಮಗಳನ್ನು ಭಕ್ತಿಯಿಂದ ಪಠಿಸಬೇಕು. ಇದೇ ವಿರಜಾದೀಕ್ಷೆ ಮತ್ತು ಪಾಶುಪತವ್ರತ,"

ಸೀತಾಮಾತೆಯನ್ನು ರಾವಣನು ಅಪಹರಿಸಲು ದುಃಖಾಕ್ರಾಂತನಾದ ಶ್ರೀರಾಮನು ಲಕ್ಷ್ಮಣನೊಡನೆ ದೇಹತ್ಯಾಗ ಮಾಡಲು ನಿಶ್ಚಯಿಸಿದನಂತೆ. ಇದನ್ನು ತಿಳಿದ ಅಗಸ್ತ್ಯರು ತತ್‍ಕ್ಷಣ ಬಂದು, 'ಇನಿಯಳನ್ನು ಕಳೆದುಕೊಂಡ ದುಃಖವು ಪಾಂಚಭೌತಿಕವಾದ, ಜಡವೆನಿಸಿದ, ನಶ್ವರವಾದ ಶರೀರಕ್ಕೋ ಅಥವಾ ಅವಿನಾಶಿಯಾದ ಪರಂಜ್ಯೋತಿ ಸ್ವರೂಪನಾದ ಆತ್ಮಕ್ಕೋ? ಎರಡಕ್ಕೂ ಅಲ್ಲ. ಅಂದಮೇಲೆ ರಾಮಾ, 'ಬಯಲ ಶೋಕವ ಬಿಸುಡು ಬಲ್ಲವರ್ ನಗದಂತೆ ನಿನ್ನ ಸ್ವರೂಪಮಂ ನೀಂ ತಿಳಿದು ಪರಮ ಸುಖಿಯಾಗು' ಎಂದು ಬೋಧಿಸುತ್ತಾರೆ. ಅದಕ್ಕೆ ಶ್ರೀರಾಮನು— "ಮುನಿವರ್ಯ, ತನುವಿಗೂ, ಆತ್ಮಕ್ಕೂ ದುಃಖವಿಲ್ಲ ಎಂದು ಹೇಳುವುದಾದರೆ ಸೀತಾ ವಿಯೋಗಾಗ್ನಿ ನನ್ನನ್ನೇಕೆ ದಹಿಸುತ್ತಿದೆ? ನೀನು ಸುಮ್ಮನೆ ಸರ್ವವೂ ಶೂನ್ಯ, ಮಾಯೆ ಬಯಲು ಎಂದರೆ ನಂಬಲಾಗುವುದೇ ?" ಎಂದು ವಾಸ್ತವವಾಗಿ ಪ್ರಶ್ನಿಸುತ್ತಾನೆ. ಅದಕ್ಕೆ ಅಗಸ್ತ್ಯರು—'ನಿರ್ಲೇಪನಾದ ಆತ್ಮನು ಜಾಗೃತ, ಸ್ವಪ್ನ, ಸುಷುಪ್ತಿಗಳಲ್ಲೂ ತಾನೊಂದೇ ರೂಪಿಯಾಗಿರುತ್ತಾನೆ. ಆದರೆ ಮೋಹ ಮದಮತ್ಸರಾದಿ ಅರಿಷಡ್ವರ್ಗಗಳಿಂದ ಜೀವಿಯು ಹಾಳಾಗುತ್ತಾನೆ. ಇದನ್ನರಿದು, ಮೋಹವನ್ನು ನೀಗು, ಮಾಯೆಯನ್ನು ಅರಿ" ಎನ್ನುತ್ತಾರೆ.

ಶ್ರೀರಾಮನು ಇನ್ನೂ ಪ್ರಭಾವಿತನಾಗದೆ ಸೀತೆಯನ್ನು ತರುವ ಉಪಾಯವನ್ನು ಕೇಳಿದಾಗ ಅಗಸ್ತ್ಯರು – "ದೇವಾನುದೇವತೆಗಳೆಲ್ಲರೂ ದಾಸಾನುದಾಸರಾಗಿದ್ದಾರೆ ರಾವಣನಿಗೆ. ಆ ರಾವಣನು ಸೀತೆಯನ್ನು ಜಲಧಿಮಧ್ಯದಲ್ಲಿರಿಸಿಕೊಂಡಿದ್ದಾನೆ. ಸಾಧಾರಣನಾದ ನಿನ್ನಿಂದ ಆ ಕುಂಭಕರ್ಣಾದಿ ಸೋದರರಿಂದ ಕೂಡಿದ ರಾವಣನನ್ನು ಜಯಿಸಲಾಗುವುದೇ?" ಎಂದು ಬೆದರಿಸುತ್ತಾರೆ. ದುಃಖತಪ್ತನಾದ ಶ್ರೀರಾಮನು ನೀಡುವ ಉತ್ತರ ಮಾನವಸಹಜವೂ, ಮನೋಹರವೂ ಆಗಿದೆ—

"ಮುನಿತಿಲಕ ಮೂರ್ಖನಿವನೆನ್ನದಿರು ನೀನೆಂದ ಘನತತ್ತ್ವ ಬೋಧೆಯಿಂದೆನಗೀಗ ಫಲವಿಲ್ಲ ತನುವ ಸುಡುತಿದೆ ಕಾಮಕೋಟಿಗಳಹಂಕಾರ, ಜೀವನವನುಳಿಯಗೊಡದೂ || ಇನಿಯಳಂ ಪರರು ಪಿಡಿದೊಯ್ಯಲವಮಾನಭಾಜನನಾದ ವೇಳೆಯೊಳು ತತ್ತ್ವ ಬೋಧೆಯ ಕೇಳ್ವೆನೆನುತಲುದ್ಯೋಗಿಸುವ ಮಾನವನೆ ಸಕಲ ಪುರುಷಾಧಮಂ ಲೋಕದೊಳಗೆ ||"

"ಅದು ಕಾರಣಂ ಶರಧಿಯಂ ದಾಂಟಿ ರಾವಣನ ಕದನದೊಳ್ ಕೊಂದು ಬರುವುದೊಂದುಪಾಯವಬೆಸಸಿ ಬದುಕಿಸೈ ನೀನಲ್ಲದೆನಗಾಪ್ತ ಗುರುವಿಲ್ಲೆಂದು" ಬೇಡುತ್ತಾನೆ. ಅದಕ್ಕೆ ಮುನಿವರನು, "ರಾಮ, ಮರೆಯಾಗು ಮಹಾದೇವನಂ. ಮೃದು ಹೃದಯನೀಶಂ ಪ್ರಸನ್ನನಾದರೆ ಬೇಡಿದಿಷ್ಟಾರ್ಥಮಂ ಕೊಡುವನು"

ಎನ್ನುತ್ತಾನೆ. ಹರ್ಷಚಿತ್ತನಾದ ಶ್ರೀರಾಮನು, ವಿರಜಾದೀಕ್ಷೆಯನ್ನು ಮಹಾ ಮುನಿಯಿಂದ ಪಡೆದು ರಾಮಗಿರಿಯ ಪುಣ್ಯ ಗೋದಾವರಿಯ ತಟದಲ್ಲಿ "ಫಾಲಲೋಚನ ಲಿಂಗ"ವನ್ನು ಪ್ರತಿಷ್ಠಿಸಿ, ವಿಧಿಯ್ಕುಂತೆ ದೀಕ್ಷೆಯಂ ತಾಳಿ, ರುದ್ರಾಕ್ಷದೋಳಿ-ಯಾಭರಣವಂ ಧರಿಸಿ ನಿರ್ಮಲ ಭಸಿತಧೂಳಿತ ಶರೀರನಾಗಿ, ಅನುದಿನವೂ ಗೋದಾವರಿಯ ಪುಣ್ಯ ಸಲಿಲದಿಂದ ಮನಸಿಜಾರಿಗೆ ಮಜ್ಜನವ ಮಾಡಿಸಿ, ಪೂಜಿಸುತ್ತಾನೆ.

ಅವನ ಉಗ್ರತಪಸ್ಸಿಗೆ ಮೆಚ್ಚಿ, ಒಂದು ದಿನ ಶಿವನು ಪ್ರತ್ಯಕ್ಷನಾಗುತ್ತಾನೆ. ಆ ತೇಜೋರಾಶಿಯನ್ನು ಕಂಡು ರಾಮನು "ಇಂದು ತನ್ನಂ ಕೊಲಲ್ಬಂದ ರಾಕ್ಷಸ ಮಾಯೆಯೆಂದು ತಿಳಿದತಿವೇಗದಿಂದ ಧನುವಿಗೆ ಹೆದೆಯನೊಂದಿಸಿ, ಮಹಾ ಧೈರ್ಯದಿಂದ ದಿವ್ಯ ಮಹಾಸ್ತ್ರವೃಂದಮಂ ಸುರಿವುತಿರ್ದಂ." ಆಗ ಹಿಡಿದ ಬಿಲ್ಲು ಜಾರಿ, ಬತ್ತಳಿಕೆ ಬೆಂದು, ಅಂಗುಲಿಯೂ ಉರಿಯಿತು ; ಲಕ್ಷ್ಮಣ ಮೂರ್ಛೆಹೋದ. ರಾಮ ಮನದಲ್ಲೇ ಶಿವನ ಮರೆಹೊಕ್ಕ. ತತ್‌ಕ್ಷಣವೆ ಶಿವ ಸಾಕ್ಷಾತ್ಕಾರವಾಯಿತು ; ಚಂದ್ರಚೂಡನು, ಶ್ರೀರಾಮನಿಗೆ "ದುರ್ಧರ ಮಹಾಪಾಶುಪತವೆಂಬ ದಿವ್ಯಾಸ್ತ್ರಮಂ ಕರುಣದಿಂದಿತ್ತು, ರಾವಣನನ್ನು ಸಂಹರಿಸಿ, ಸೀತೆಯನ್ನು ಕರೆದು ತರುವಂತೆ ಆಶೀರ್ವದಿಸುತ್ತಾನೆ."

ಮುಂದಿನ ಹನ್ನೊಂದು ಸಂಧಿಗಳಲ್ಲಿ 'ಕೆಳದಿ ರಾಮೇಶ್ವರ'ನು ಶ್ರೀರಾಮಚಂದ್ರನಿಗೆ 'ನಿಜ ವಿಭೂತಿ'ಯನ್ನು ಬಿತ್ತರಿಸಿ, ವಿಶ್ವರೂಪದರ್ಶನ ಮಾಡಿಸಿ ಪಿಂಡೋತ್ಪತ್ತಿ ವಿಧಾನ, ದೇಹಸ್ವರೂಪ, ಜೀವನಸ್ವರೂಪ, ಪುಣ್ಯಪಾಪಗಳ ಫಲ, ಉಪಾಸನಾ ವಿಧಾನ, ಮುಕ್ತಿಯ ಲಕ್ಷಣ, ಪಂಚಕೋಶಕಗಳ ವಿಚಾರ, ಭಕ್ತಿಯೋಗ, ಮೋಕ್ಷಾಧಿಕಾರ ಮೊದಲಾದ ಆತ್ಮಸಾಕ್ಷಾತ್ಕಾರಕ್ಕೆ ಅನುವಾಗುವ ಹಲವು ಅಂಶಗಳನ್ನು ಉಪದೇಶಿಸುತ್ತಾನೆ.

"ಶಿವಗೀತೆಯಲ್ಲಿ" ನಿರೂಪಿತವಾಗಿರುವ ತಾತ್ತ್ವಿಕಾಂಶಗಳು ಶ್ರೀ ವ್ಯಾಸರಿಗೆ ಸೇರಿದವುಗಳು. ಆದರೆ ಅವುಗಳನ್ನು ಸರಳ ಸುಂದರವಾದ ರೀತಿಯಲ್ಲಿ ಕನ್ನಡಿಸಿದ ಕೀರ್ತಿ

ಸಮರ್ಥ ಕವಿ ತಿರುಮಲಭಟ್ಟನಿಗೆ ಸಲ್ಲುತ್ತದೆ. ಪುರಾಣದ ವಸ್ತು ಇಲ್ಲಿ ಕಾವ್ಯವಾಗಿದೆ. ತತ್ತ್ವ, ತರ್ಕಗಳು ಕವಿವಾಣಿಯಲ್ಲಿ ಕಾವ್ಯರೂಪಿಯಾಗಿ ಗೋಚರಿಸಿವೆ.[46]

ಆತ್ಮನೋನ ವಿಕಾರಿತ್ವಂ ಘಟಸ್ಥ ನಭಸೋ ಯಥಾ ।
ಏನಮಾತ್ಮಾವಪುಸ್ತಸ್ಮಾದಿತಿ ಸಂಚಿಂತಯೇದ್ಬುಧಃ ॥

(ಶ್ರೀ ಶಿವಗೀತಾ-ಅ. ೧೪, ಶ್ಲೋಕ ೧೦, ಪು. ೧೯೭)

ಎಂಬ ಶ್ಲೋಕವು—

ಘಟಮನೆಲ್ಲಲ್ಲಿಗಂ ಕೊಂಡೊಯ್ಯಲದರಲ್ಲಿ
ಘಟಿಸಿದಾಕಾಶಮಾವಗಮಿರ್ಪ ಕಾರಣದೆ
ನಿಘಟದೊಡನೆ ಪೂರ್ವ ಪ್ರದೇಶದಾಕಾಶಮೇಪೋಯ್ತೆಂದು ತಿಳಿವ ತೆರದಿಂ ।
ಪಟುಕರ್ಮವಶದಿನೀ ಲಿಂಗದೇಹಂ ಮಹೋ
ತ್ಕಟದೇಹಮಂ ಬಿಟ್ಟು ಲೋಕಾಂತರಕೆ ಪೋಗ
ಲಟನವಿಲ್ಲದ ಪೂರ್ಣನಾದಾತ್ಮನುಂಪೋದನೆಂಬುದು ಪ್ರಚಾರ ಮಾತ್ರಂ ॥

(ಕರ್ನಾಟಕ ಶಿವಗೀತೆ ಸಂಧಿ ೧೦. ಪ. ೧೭)

---

[46] ಯಸ್ತುರುದ್ರಂ ಜಪೇನ್ನಿತ್ಯಂ ಧ್ಯಾಯಮಾನೋ ಮಮಾಕೃತಿಂ ।
ಷಡಕ್ಷರಂ ವಾಪ್ರಣವಂ ನಿಷ್ಕಾಮೋ ವಿಜಿತೇಂದ್ರಿಯಃ ॥
ಅಥಾರ್ಥರ್ವಶಿರೋಮಂತ್ರಂ ಕೈವಲ್ಯಂ ಸಾರಭೂತ್ತಮ
ಸ ತೇನೈವ ಚ ದೇಹೇನ ಶಿವಃ ಸಂಜಾಯತೇ ಸ್ವಯಂ ॥

—ಶ್ರೀ ಶಿವಗೀತಾ, ಅಧ್ಯಾಯ 16 ; ಶ್ಲೋಕ 59-60.

—ಈ ಶ್ಲೋಕಗಳು ತಿರುಮಲಭಟ್ಟನಲ್ಲಿ—

ರುದ್ರಮಂ ಪ್ರಣವಮಂ ಮೇಣ್ ಷಡಕ್ಷರವನ
ಕ್ಷುದ್ರ ಕೈವಲ್ಯವನಥರ್ವ ಶಿರಮಂ ಮೇಣ್
ನಿದ್ರಭಾವದೊಳಿಂದ್ರಿಯಂಗಳಂ ಗೆಲ್ದು ಕಾಮಕ್ರೋಧರಹಿತನಾಗಿ ।
ಮುದ್ರಚಿರ ಮೂರ್ತಿಯಂ ಜಾನಿಸುತೆ ಜಪಿಸುವಂ
ಭದ್ರಮತಿಯುವನೀ ಶರೀರದೊಳ್ ಪ್ರತ್ಯಕ್ಷ
ರುದ್ರನಹನಿದಕೆ ಸಂಶಯಮಿಲ್ಲ ಮೇಣ್ ರಾಮಚಂದ್ರ ನೀನಿದ ನಂಬಿರ್ಪೈ ॥

—ಸಂಧಿ 16, ಪದ್ಯ 23.

ಎಂಬುದಾಗಿ ಕನ್ನಡಕ್ಕೆ ಭಟ್ಟ ಇಳಿದಿದೆ.

ಎಂದಾಗಿದೆ. ಇಲ್ಲಿ ಕವಿ ಮೂಲವನ್ನು ವಿಸ್ತರಿಸಿ ಬರೆದಿದ್ದಾನೆ. 'ಲಿಂಗದೇಹ'ವೆಂಬ ಪದವನ್ನು ಹೊಸದಾಗಿ ಬಳಸಿದ್ದಾನೆ. ಇಂತಹ ಬೋಧಪ್ರದವಾದ ಉತ್ತಮ ಕಲಾ ಕೃತಿಯನ್ನಿತ್ತ ಮಹರ್ಷಿಗೆ ಮಣಿದಂತೆ, ಅಂತಹ ವಿಶಿಷ್ಟ ತತ್ತ್ವಗಳನ್ನು ಕನ್ನಡಿಸಿ ಕೊಟ್ಟ ಕವಿ ತಿರುಮಲಭಟ್ಟನಿಗೂ ತಲೆ ಬಾಗಬೇಕಾಗುತ್ತದೆ. ಏಕೆಂದರೆ ತಾನು ತೆಗೆದುಕೊಂಡಿರುವುದು ಪುರಾಣದ ಒಂದು ಭಾಗ; ಅಥವಾ ತುಣುಕು. ತಾನು ಖಂಡ ಕಾವ್ಯವೊಂದನ್ನು ರಚಿಸುತ್ತಿದ್ದೇನೆ ಎಂಬ ಭಾವನೆ ಕವಿಗಿದ್ದಂತೆ ಕಾಣುವುದಿಲ್ಲ. ತಾನು ನಿಜಕ್ಕೂ 'ಮಹಾಕಾವ್ಯ'ವೊಂದನ್ನು ಬರೆಯುತ್ತಿದ್ದೇನೆಂಬ ಕಲ್ಪನೆಯಿಂದ ತನ್ನ ಯತ್ನದಲ್ಲಿ ಕೃತಾರ್ಥನಾಗುವೆನೆಂಬ ಆತ್ಮವಿಶ್ವಾಸದಿಂದ ಕವಿ ಮುಂದುವರಿದಿರುವಂತೆ ತೋರುತ್ತದೆ. ಆರಂಭದಲ್ಲಿ ಶ್ರೀಕಾರವಿಲ್ಲ. ಪೀಠಿಕಾ ಸಂಧಿಯಲ್ಲಿ ತನ್ನ ಆಶ್ರಯದಾತ ಹಾಗೂ ತನ್ನ ವಿಷಯಗಳನ್ನು ನಿವೇದಿಸಿಕೊಂಡು, ಮಿಕ್ಕ ಹದಿನೈದು ಸಂಧಿಗಳಲ್ಲಿ ತಾನು ಆಯ್ದ ವಸ್ತುವಿನ ವಿವಿಧ ಮುಖಗಳನ್ನು ಪುರಾಣ ಮಾರ್ಗಾನುಸಾರಿಯಾಗಿ ಚಿತ್ರಿಸಿಕೊಂಡು ಹೋಗಿದ್ದಾನೆ. ಎಲ್ಲೂ ಅತಿ ಸ್ವಾತಂತ್ರ್ಯ ವಹಿಸದೆ, ಮೂಲಕ್ಕೆ ಚ್ಯುತಿತಾರದೆ, ಬಹು ಸರಳವಾಗಿ ಕಾವ್ಯನಿರೂಪಣೆ ಮಾಡಿದ್ದಾನೆ.

ಕವಿ ತಿರುಮಲಭಟ್ಟನಲ್ಲಿ ಪ್ರತಿಭೆಗಿಂತ ಪಾಂಡಿತ್ಯವೂ,[47] ಪಾಂಡಿತ್ಯಕ್ಕಿಂತ ಪ್ರಾಸಪ್ರಿಯತೆಯೂ[48] ವಿಶೇಷವಾಗಿ ಕಂಡುಬರುತ್ತದೆ.

---

[47] ಅಕ್ಷಯ ಕೃಪಾನಿಲಯ ರಕ್ಷಿಸೈ ಪ್ರಣವಲಯ
ಭಕ್ತಿ ತಾಂಬುಧಿಗರಳ ಶಿಕ್ಷಿತಾಂಧಕ ಸರಳ
ಯಕ್ಷಪತಿಸಖ ದುರಿತ ಕಕ್ಷ ಪಾಪಕ ಚರಿತ ಲಕ್ಷಣ ಗುಣೈಕ ಭರಿತಾ ॥
ಕುಕ್ಷಿ ವಿನಿಹಿತ ಭುವನ ಲಕ್ಷಮುನಿ ಹೃದ್ಭವನ
ದಕ್ಷಮುಖ ಸಂಹರಣ ಲಕ್ಷಿತ ನಿಜಾಚರಣ
ಪಕ್ಷಿಪತಿ ಸಂಚರಣ ನಕ್ಷಿಪೂಜಿತ ಚರಣ ಸುಕ್ಷಮ ಜನೈಕ ಶರಣ ॥

ಅದೇ. ಪೀಠಿಕಾ. ಸಂಧಿ. ಪದ್ಯ 4.

[48] ನಿಟ್ಟೆಲುಗಳಟ್ಟೆಗಳ ಥಟ್ಟಣೆಗೆ ಹಿಟ್ಟಾಗಿ
ಪೊಟ್ಟೆಯೊಳವಟ್ಟೆಯುಂ ಬಿಟ್ಟು ಪೊರಮಟ್ಟು ನು
ಣ್ಬಿಟ್ಟನೆಣನಾತೆರದೆ ದಿಟ್ಟೆಯುಂ ಕಟ್ಟಿ ಮುಸುಕಿಟ್ಟರು ಜರಾಯುವಿಂದಂ ॥
ಕಟ್ಟುಗ್ರಶೋಕವಳವಟ್ಟು ಕಂಗೆಟ್ಟು ಮತಿ
ಗೆಟ್ಟಧೋಮುಖನಾಗಿ ನೆಟ್ಟನೆ ನೆಲಕೆ ಬೀಳ್ವ
ಕಟ್ಟಳೆಯನೇನೆಂಬೆನಟ್ಟ ಸುಜ್ಞಾನದಿಂ ಪುಟ್ಟನಳಿವವನೆ ಚತುರಂ ॥

—ಸಂಧಿ 8. ಪದ್ಯ 17.

ಆದರೂ ಶಾರದೆಯನ್ನು ಕುರಿತ—

ಫುಲ್ಲಶರ ಬಾಗಿಸುವ ಸವಿಪಿಲ್ಲ ತನಿರಸವೊ ।
ಪಲ್ಲವಾಧರೆ ಮಿಡಿವ ಪಲ್ಲಕಿಯ ಸುಣ್ಣರವೊ
ಘಲ್ಲು ಘಲ್ಲನೆ ಗೆಜ್ಜೆ ಮೆಲ್ಲು ಮೆಲ್ಲನೆ ಸೆಜ್ಜೆ ಗುಲ್ಲಾಸದಿಂದ ಬರುವಾ ॥
ವಲ್ಲಭೆಯ ನೂಪುರದ ಸಲ್ಲಲಿತ ಕಳರವವೊ ।
ಸಲ್ಲಟದ ರತಿಗ್ರೈವ ನಲ್ಲಳೆಳೆನುಣ್ಗೊರಳ
ಮೆಲ್ಲುಲಿಯೊ ಎನೆ ಮೆರೆವ ಸೊಲ್ಲುಗಳನೊಲಿದೀಯಬಲ್ಲ ಶಾರದೆಗೆರಗುವೆಂ ॥

(ಅದೇ. ಪೀಠಿಕಾ. ಪದ್ಯ ೫)

ಎಂಬಲ್ಲಿ ಇವನ ರಸಿಕತೆ ಕಾವ್ಯಶಕ್ತಿ, ಕಲಾಪ್ರತಿಭೆಗಳು ಮಿಂಚಿವೆ.

ತಿರುಮಲಭಟ್ಟನಲ್ಲಿರುವ ಸಂಗ್ರಹಶೀಲತೆ ತುಂಬಾ ಪ್ರಶಂಸನೀಯವಾದುದು. ಸಾಧಾರಣವಾಗಿ ಮೂಲದ ಎರಡೆರಡು ಶ್ಲೋಕಗಳಿಗೆ ತನ್ನ ಒಂದೊಂದು ವಾರ್ಧಕ ಪದ್ಯವನ್ನು ವಿನ್ಯಾಸಲಿರಿಸಿದ್ದಾನೆ. ಆದರೆ ಕೆಲವೆಡೆಗಳಲ್ಲಿ ಮೂರು ಮೂರು ಶ್ಲೋಕಗಳ ಸಾರವನ್ನೂ ಒಂದೇ ಒಂದು ಪದ್ಯದಲ್ಲಿ ಭಟ್ಟ ಇಳಿಸಿರುವುದೂ ಕಂಡುಬರುತ್ತದೆ. ಅಂತೆಯೇ ಮೂಲಕ್ಕೆ ಕಿಂಚಿತ್ತೂ ಧಕ್ಕೆ ತರದಂತೆ ಉತ್ತಮ ಅನುವಾದವನ್ನಿತ್ತು ಅನುವಾದಕರಿಗೆ ಆದರ್ಶನಾಗಿದ್ದಾನೆ.

ಉದಾಹರಣೆಗೆ—

ಶ್ರೀ ಶಿವಗೀತೆಯ ಎರಡನೆಯ ಅಧ್ಯಾಯದ-

ಪೀನೋತ್ತುಂಗಸ್ತನಾಭೋಗ ಭುಗ್ನ ಸೂಕ್ಷ್ಮವಲಗ್ನಕಾ ।
ಬೃಹನ್ನಿತಂಬಜಘನಾ ರಕ್ತಪಾದ ಸರೋರುಹಾ ॥ ॥ ೧೧ ॥

ರಾಕಾಚಂದ್ರಮುಖೀ ಬಿಂಬಪ್ರತಿಬಿಂಬರದಚ್ಛದಾ ।
ನೀಲೇಂದೀವರನೀಕಾಶನಯನದ್ವಯ ಶೋಭಿತಾ ॥ ॥ ೧೨ ॥

ಮತ್ತ ಕೋಕಿಲ ಸಂಲಾಪಾ ಮತ್ತದ್ವಿರದಗಾಮಿನೀ ।
ಕಟಾಕ್ಷೈರನುಗೃಹಾಣತಿ ಮಾಂ ಪಂಚೇಷುಶರೋತ್ತಮೈಃ ॥ ॥ ೧೩ ॥

—ಈ ಮೂರು ಶ್ಲೋಕಗಳನ್ನು ತಿರುಮಲಭಟ್ಟನು—

ಕನಕಲತಿಕಾಗಾತ್ರೆ, ಕಂಜದಳನಿಭನೇತ್ರೆ
ಮನಸಿಜನ ಮದದಾನೆ ಮತ್ತಕೋಕಿಲಗಾನೆ

ಘನತುಂಗ ಕುಚಭರಕೆ ಗದಗದಿಸುವಂಬರಕೆ ಸರಿಯೆನಿಪ ನಡುವಿನಬಲೀ ||
ಮನುಜಲೋಕಕೆ ರಂಭೆ ಮಧುಸವಾಧರಬಿಂಬೆ
ವಿನಯಾದಿಗುಣಸದನೆ ವಿಧುಬಿಂಬಸಮವದನೆ
ನನೆಗೋಲನಧಿದೇವಿ ನವಯುವ್ವನಂತೀ ವಿದಿವಳಿಗೆಯಪೆಣ್ಗಳುಂಟೀ ||

(ಕರ್ನಾಟಕ ಶಿವಗೀತೆ ಸಂಧಿ ೨. ಪ. ೫)

ಎಂಬ ಒಂದೇ ಒಂದು ವಾರ್ಧಕದಲ್ಲಿ ಸ್ವಾರಸ್ಯ ಕೆಡದಂತೆ ಹಿಡಿದಿಟ್ಟಿದ್ದಾನೆ.

ತಿರುಮಲಭಟ್ಟನ ವರ್ಣನಾವೈಖರಿ ತುಂಬಾ ಮೆಚ್ಚುವಂಥದು—

ಕಪ್ಪೆಯಂಗತನೆ ಬಿದ್ದಿರಲದರ ಹೊಟ್ಟೆಯಂ
ಚಪ್ಪಗೊಂಡಲಿಯಲಿ ಸೀಳಲ್ಕೊಳಿತು ಕಡುನಾರು
ತಿಪ್ಪತೆರದಿಂದಿಪ್ಪ ಮಾನಿನಿಯ ಯೋನಿಯೊಳ್ ನಿತ್ಯಂ ಆಸಕ್ತರಾಗಿ ||

(ಅದೇ. ಸಂಧಿ ೮. ಪ. ೫)

—ಎಂಬೆಡೆಯಲ್ಲಿ ಬಳಸಿರುವ ಉಪಮೆ ಎಷ್ಟು ಪರಿಣಾಮಕಾರಿಯಾದುದು ಎಂಬುದು ತಿಳಿಯುತ್ತದೆ.

ಇದೇ ರೀತಿ ಹಲವು ಶಬ್ದಾಲಂಕಾರಗಳ ಹಾವಳಿಯನ್ನೂ ಇವನ ಕಾವ್ಯದಲ್ಲಿ ಅನುಭವಿಸುತ್ತೇವೆ. ಆದರೂ—

ಸಾವು ಹುಟ್ಟಿನ ಬೀಜ ಹುಟ್ಟು ಸಾವಿನ ಬೀಜ
ಮಾವಸುಧೆಯೊಳ್ ದೇಹಿ ಹುಟ್ಟು ಸಾವುಗಳಿಂದೆ
ಬಾವಿಯುುದಕವನೆತ್ತುತಿರ್ಪ ರಾಟಳದಂತಿರಾವಗಂ ತಿರುಗುತಿಹನೂ ||

(ಅದೇ. ಪದ್ಯ ೩೩.)

—ಎಂಬಲ್ಲಿ ಮಾತು ಸರಳ, ಶೈಲಿ ಸುಭಗ, ಆದರೂ ಪ್ರಭಾವ ಬೀರುವ ಉತ್ತಮ ಭಾವಗೀತೆ.

## III. ಚರಮೂರ್ತಿ ಬಸವಲಿಂಗದೇವರು (ಕ್ರಿ. ಶ. ೧೬೫೦)

"ಇತಿ ಶ್ರೀಮದ್ವೇದವೇದಾನ್ತ ಸಿದ್ಧಾನ್ತೇತಿಹಾಸ ಪುರಾಣ ಪ್ರವೀಣ ಸನಾತನ ಪುರಾತನ ವಚನಾನುಭವೋದ್ಭವ ಜ್ಞಾನವೈರಾಗ್ಯ ವಿಜಿತ ಕುಸುಮಬಾಣ ಚಿರಕಾಲಧರ ನಿರಂತರಾರ್ಚಿತ ಸ್ವೇಷಲಿಂಗಾಂತ ರಂಗ ಪರಮತಖಂಡ ಶೈವ ಸಭಾಮಂಡನ ಪ್ರಸಂಗ ಗುರುಲಿಂಗಜಂಗಮ ಪದಾಯತ್ತ ಚಿತ್ತ ಪರಮಯೋಗೀಶ್ವರಾರ್ಚಿತ ಕೀರ್ತಿವಿತ್ತ ಭಸ್ಮರುದ್ರಾಕ್ಷಾದಿ ವಿಭೂಷ ವಿಸ್ಮಯಾವಹ ತತ್ತ್ವಭೂಷ ಶಿವಜ್ಞಾನ ಶಿವಧ್ಯಾನ ಶಿವಪೂಜಾ ನಿರತ ಶಿವಭೂಪಾಲ ವಿಜ್ಞಾಪಿತ ಷಟ್ಸ್ಥಲಾಚಾರ ಚಕ್ರವರ್ತಿ ಚರಮೂರ್ತಿ ಬಸವಲಿಂಗದೇವ ವಿರಚಿತಾಯಾಂ ವೀರಮಾಹೇಶ್ವರಾಚಾರ ಸುಧಾವಾರ್ಧಿ ಟೀಕಾಯಾಂ.... ಸ್ಥಲ ಸಂಪೂರ್ಣಮ್"[49] ಇದಿಷ್ಟರಿಂದಲೇ ಚರಮೂರ್ತಿ ಬಸವಲಿಂಗದೇವನ ವಿಚಾರವನ್ನು ತಿಳಿಯಬೇಕಾಗಿದೆ. ಬೇರೆಲ್ಲೂ ಇವನ ವಿಚಾರ ತಿಳಿದುಬರುವುದಿಲ್ಲ. ಇದರ ಓಲೆಯ ಮೊದಲ ಗರಿ ಕಳೆದುಹೋಗಿದೆಯಾದ್ದರಿಂದ ಕೃತಿಕಾರನ ಬಗ್ಗೆ ಹೆಚ್ಚು ಮಾಹಿತಿ ದೊರೆಯುವುದಿಲ್ಲ. ಈ ಮೇಲಿನ ಪ್ರವರದಿಂದ ಈತನು ವೇದ ವೇದಾಂತಾದಿಗಳಲ್ಲಿ ನಿಷ್ಣಾತನೂ ಪರಮಯೋಗೀಶ್ವರಾರ್ಚಿತನೂ ಷಟ್ಸ್ಥಲಾಚಾರ ಚಕ್ರವರ್ತಿಯೂ ಚರಮೂರ್ತಿ ಅಂದರೆ ಒಂದು ಪಟ್ಟದ ಮಠದ ಸ್ವಾಮಿಯೂ ಆಗಿದ್ದನೆಂದು ತಿಳಿಯುತ್ತದೆ. ಆದರೆ, ಅಧಿಕಾರ ವಹಿಸಿಕೊಂಡ ಮಠವಾಗಲೀ, ಈತನ ಪೂರ್ವಾಶ್ರಮದ ಇತಿಹಾಸವಾಗಲೀ, ಗುರುಪರಂಪರೆಯಾಗಲೀ ಯಾವುದೂ ತಿಳಿಯುವುದಿಲ್ಲ. ಈತನು ಶಿವಪ್ಪನಾಯಕನ ಪ್ರಾರ್ಥನೆಯ ಮೇರೆಗೆ ವೀರಮಾಹೇಶ್ವರಾಚಾರ ಸುಧಾವಾರ್ಧಿಗೆ ಟೀಕು ಬರೆದುದಾಗಿ ತಿಳಿಸುವುದರಿಂದ ಶಿವಪ್ಪನಾಯಕನ ಆಳಿಕೆಯ ಕಾಲದಲ್ಲಿ ಅಂದರೆ ಕ್ರಿ. ಶ. ೧೬೫೦ ರಲ್ಲಿದ್ದಿರಬಹುದು. ಈತನು ವೆಂಕಟಾದ್ರಿ ಭೂವಲ್ಲಭನಿಂದ ಅಂದರೆ ಕೆಳದಿಯನ್ನಾಳಿದ ಹಿರಿಯ ವೆಂಕಟಪ್ಪ ನಾಯಕನಿಂದ ವಿರಚಿತವಾದ 'ವೀರಮಾಹೇಶ್ವರಾಚಾರ ಸುಧಾವಾರ್ಧಿಃ' ಎಂಬ ಸಂಸ್ಕೃತ ಗ್ರಂಥಕ್ಕೆ ಕನ್ನಡ ಟೀಕು ಬರೆದಿದ್ದಾನೆ.[50] ಶಿವ ವೆಂಕಟಾದ್ರಿ ಭೂವಲ್ಲಭನು "ಹಿಮಕರ ಸಮಶಾಂತ ಸಕಲ ಭೂತದಯಾಶಾಂತ ವಸನ್ತದೇವ ಕರಕಮಲೋತ್ಪನ್ನ ಶಿವಾಚಾರ ಸಂಪನ್ನ ಗುರುಪಾದ ದೇವ ದೇಶಿಕ ಕರಕಮಲ ಸಂಜಾತ ಶ್ರೀಮತ್ಕೆಳದೀ ವೀರಭದ್ರಕೃಪಾಕಟಾಕ್ಷ ವೀಕ್ಷಣ ಪ್ರಸಾದಲಬ್ಧ ಸಾಮ್ರಾಜ್ಯ ಸಂಪೂಜ್ಯ ಸತತ ಷೋಡಶ ಮಹಾದಾನಾದಿ"ಗಳಿಂದ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರಿಗೆ

---

[49] ಶ್ರೀ ವೀರಮಾಹೇಶ್ವರಾಚಾರ ಸುಧಾವಾರ್ಧಿ ಟೀಕುವಿನ ಅಧ್ಯಾಯದ ಅಂತ್ಯದಲ್ಲಿ— (O.R.I. Mysore, K.P. 1071)

[50] ಕನ್ನಡ ಅಧ್ಯಯನ ಸಂಸ್ಥೆ; ಮೈಸೂರು. ಕೆ ಎ. 322; ಹಸ್ತಪ್ರತಿಯ ಮೊದಲ ಪುಟ.

ದಾಸೋಹ ನಡೆಸಿ ವಿಖ್ಯಾತನಾದವನು.... ಸಂತತೋದಗ್ರ ಸಕಲಾರಾತಿ ಮಹೋಗ್ರ ಪ್ರತಾಪ ಪದಪದ್ಮಸೇವಕಾಶೇಷ ದಿಗ್ಭೂಪ ಕುಂದ ಮಂದಾರ ಚಂದನ ಚಂದ್ರಕೀರ್ತನ ಸೌಂದರ್ಯ ಜಿತಮನ್ಮಥ ದಿವ್ಯಮೂರ್ತಿ ಸಕಲ ಕಲಾಪ ಪ್ರವೀಣ ಶ್ರೀಮತ್ಕೆಳದಿ ಪುರಾಧಿನಾಯಕ ಧೀಮತ್ಕಾಮಿತ ಫಲಪ್ರದಾಯಕನು." [51]

"ವೀರಮಾಹೇಶ್ವರಾಚಾರ ಸುಧಾವಾರ್ಧಿ"ಯು ಹದಿಮೂರು ಸ್ಥಲಗಳಿಂದ ಕೂಡಿದ ಉದ್ಗ್ರಂಥ. ಇದರ ಸ್ಥೂಲ ವಿಭಜನೆ ಹೀಗಿದೆ :—

೧) ಶಿವಮಹತ್ವ ಸ್ಥಲಂ
೨) ಗುರುಮಹತ್ವ ಸ್ಥಲಂ
೩) ಲಿಂಗಮಹತ್ವ ಸ್ಥಲಂ
೪) ಜಂಗಮಮಹತ್ವ ಸ್ಥಲಂ
೫) ಪಾದೋದಕ ಮಹತ್ವ ಸ್ಥಲಂ
೬) ಪ್ರಸಾದ
೭) ವಿಭೂತಿ
೮) ರುದ್ರಾಕ್ಷಿಮಹತ್ವ ಸ್ಥಲಂ
೯) ಪಂಚಾಕ್ಷರೀ ಮಹತ್ವ ಸ್ಥಲಂ
೧೦) ದೀಕ್ಷಾಮಹತ್ವ ಸ್ಥಲಂ
೧೧) ಭಕ್ತ ಮಹತ್ತ್ವ ಸ್ಥಲಂ
೧೨) ಶಿವಪೂಜಾಸ್ಥಲ ಮಹತ್ವಂ
೧೩) ಷಟ್ಸ್ಥಲ ಮಹತ್ವಂ

ಈ ಹದಿಮೂರು ಸ್ಥಲಗಳು ಸಂಪೂರ್ಣವಾಗಿ ಸಿಗುತ್ತವೆ. ಆದರೆ ಹದಿಮೂರನೆಯ ಸ್ಥಲದಲ್ಲಿ ಕೇವಲ ೪೬ ಶ್ಲೋಕಗಳಿಗೆ ಟೀಕು ರಚನೆಯಾಗಿದ್ದು, ಕೃತಿ ಅಪೂರ್ಣ ವೆನಿಸಿದೆ. ಹೀಗೆ ಮೊದಲ ಒಂದು ಗರಿ ಕಡೆಯ ಅದೆಷ್ಟು ಗರಿಗಳೋ ಇಲ್ಲವಾಗಿವೆ. ಸಿಕ್ಕಿರುವ ಕೃತಿಯಲ್ಲಿ ವೀರಶೈವಾಚಾರ ಯೋಗ್ಯವಾದ ಹಲವು ಸಂವಿಧಾನಗಳನ್ನೂ ಅವುಗಳ ಮಹತ್ವವನ್ನೂ ನಿರೂಪಿಸಲಾಗಿದೆ.

ಪೀಠಿಕಾರೂಪವಾಗಿ ವೀರಮಾಹೇಶ್ವರಾಚಾರ ಸುಧಾವಾರ್ಧಿಯನ್ನು ರಚಿಸು ವುದಾಗಿ ಹೇಳಿರುವ ಶ್ಲೋಕಕ್ಕೆ,[52] ಟೀಕು ಬರೆದು,[53] ಅನಂತರ "ಯಜುರ್ವೇದ

---

[51] ಅದೇ.

[52] ವೀರಶೈವ ಮತಾಧೀಶಂ ಶಿವಂ ನತ್ವಾ ಶಿವಾಧವಮ್,
ವೀರಮಾಹೇಶ್ವರಾಚಾರ ಸುಧಾವಾರ್ಧಿಂ ಪ್ರಕುರ್ಮಹೇ ॥

[53] ಟೀಕಾ : ವೀರಶೈವ ಮತಾಧೀಶಂ = (ವೀರಶೈವ) ವೀರಶೈವ ಜೀವೈಕ ಸುಧೆಯಲ್ಲಿ ರಮಿಸುತ್ತಿರ್ದ ಶೈವ = ಶಿವಭಕ್ತರ ಮತ = ಸಮಯಕ್ಕೆ ಅಧೀಶಂ = ಒಡೆಯ ನಾದಂತಹ, ಶಿವಾಧವಂ = ಪಾರ್ವತಿಗೆ ಗಂಡನಾದಂತಹ, ಶಿವಂ = ಪರಶಿವನನ್ನು, ನತ್ವಾ = ನಮಸ್ಕರಿಸಿ, ವೀರಮಾಹೇಶ್ವರಾಚಾರ ಸುಧಾವಾರ್ಧಿಂ = ವೀರಮಾಹೇಶ್ವರಾಚಾರ ಸುಧಾವಾರ್ಧಿಯೆಂಬ ಸಂಗ್ರಹವನ್ನು ಪ್ರಕುರ್ಮಹೇ = ನಾವು ಚೆನ್ನಾಗಿ ಮಾಡುತ್ತಿರ್ದೆವು ॥೦॥

ಪುರುಷಸೂಕ್ತ"ದಲ್ಲಿ "ಸಹಸ್ರ ಶೀರ್ಷಾಪುರುಷಃ" ಎಂಬುದಕ್ಕೆ ಶಿವಭಾಷ್ಯ ಬರೆದು,[54] ಅನಂತರ, ಶಂಕರ ಸಂಹಿತೆಯಲ್ಲಿ ಶೌನಕಾದಿಗಳಿಗೆ ಸೂತನು ಈ ಮಹತ್ವವನ್ನು ತಿಳಿಸಿರುವುದಾಗಿ ಹೇಳುತ್ತಾನೆ. ಈಗ ಒಂದೆರಡು ಉದಾಹರಣೆಗಳನ್ನು ನೋಡೋಣ—

**ಶಿವಮಹತ್ವ:**

ಪರಿಪೂರ್ಣ ಪರಂಜ್ಯೋತಿಃ ಪಶುಪಾಶವಿಮೋಚಕಃ
ಅನಾದಿ ಮಲನಿರ್ಮುಕ್ತಃ ಸರ್ವವ್ಯಾಪೀ ಸನಾತನಃ ||

**ಟೀಕಾ :**

ಸಃ = ಆ ಶಿವನು, ಪರಿಪೂರ್ಣಃ = ಎಲ್ಲಾ ಕಡೆಯಲ್ಲಿದ್ದಂತಹವನು, ಪರಂಜ್ಯೋತಿಃ = ಸ್ವಯಂಪ್ರಕಾಶನು, ಪಶುಪಾಶವಿಮೋಚಕಃ = ಪಶು = ಬ್ರಹ್ಮಾದಿ ಪಶುಗಳ, ಪಾಶ = ಬಂಧವನ್ನು, ವಿಮೋಚಕಃ = ಬಿಡಿಸುವಾತನು, ಅನಾದಿಮಲನಿರ್ಮುಕ್ತ = ಅನಾದೀ = ಅನಾದಿ ಸಂಸಿದ್ಧನು, ಮಲ = ಆಣವಾದಿ ಮಲಂಗಳಿಂದೆ, ನಿರ್ಮುಕ್ತಃ = ಬಿಡಿಸಲ್ಪಟ್ಟಾತನು, ಸರ್ವವ್ಯಾಪೀ = ಸಕಲವನ್ನು ವ್ಯಾಪಿಸಿದರ್ಾತನು, ಸನಾತನಃ = ಕೇಡಿಲ್ಲದಾತನು.

ಕಡೆಯ ಶ್ಲೋಕಕ್ಕೆ—

ತಸ್ಮಾತ್ಸರ್ವಂ ಪರಿತ್ಯಜ್ಯ ವೀರಮಾಹೇಶ್ವರಂ ಜನಂ |
ಪೂಜಯೇದಾದರಾದ್ಯಸ್ತು ಸಸಮ್ಯಜ್ಞಾನವಾನ್ ಭವೇತ್ ||

**ಟೀಕಾ :**

ತಸ್ಮಾತ್ = ಅದು ಕಾರಣದತ್ತಣಿಂದ, ಯಸ್ತು = ಆವಾತನು, ಸರ್ವ = ಬ್ರಹ್ಮಾದಿಯಾದೆಲ್ಲವನು, ಪರಿತ್ಯಜ್ಯ = ಬಿಟ್ಟು, ವೀರಮಾಹೇಶ್ವರಂ = ವೀರಶೈವ ನಾದ, ಜನಂ = ಜನವನು, ಆದರಾತ್ = ಪ್ರೀತಿಯತ್ತಣಿಂದ, ಪೂಜಯೇತ್ = ಪೂಜಿಪನು, ಸಃ = ಆತನು, ಸಮ್ಯಜ್ಞಾನವಾನ್ = ಶಿವಜ್ಞಾನವುಳ್ಳವನು, ಭವೇತ್ = ಆದಪನು ||

—ಈ ರೀತಿ ಟೀಕು ಬರೆದಿದ್ದಾನೆ.

---

[54] ಪುರುಷ ಎಂದರೆ ಶಿವನು ಎಂದು ವ್ಯಾಖ್ಯಾನಿಸಿದ್ದಾನೆ.

ಶಿವಧರ್ಮವನ್ನೂ, ವೀರಮಾಹೇಶ್ವರನನ್ನೂ ಗೌರವಾದರಗಳಿಂದ ಕಾಣಬೇಕೆಂಬ ವಿಷಯವನ್ನೂ ಮುಖ್ಯವಾಗಿ ಹಲವು ಅಂಶಗಳ 'ಮಹತ್ವ'ವನ್ನೂ ಸಾರಿದ್ದಾನೆ. ಅಂತೆಯೇ ಗುರುಮಹತ್ವವನ್ನೂ ಕುರಿತು ಟೀಕು ಬರೆಯುವೆಡೆಯಲ್ಲಿ ನೀಲಕಂಠ ಶಿವಾಚಾರ್ಯನ ಕ್ರಿಯಾಸಾರದಲ್ಲಿ ಹೇಳಿರುವ ಗುರುಲಕ್ಷಣವನ್ನೇ ಅನುಸರಿಸಿದ್ದಾನೆ.

ವೀರಮಾಹೇಶ್ವರ ಸುಧಾವಾರ್ಧಿಯು ಸಿದ್ಧಾಂತ ಶಿಖಾಮಣಿ, ಕ್ರಿಯಾಸಾರ, ಶಿವಧರ್ಮೋತ್ತರ, ಶಂಕರಸಂಹಿತೆ, ಸ್ಕಾಂದಪುರಾಣ, ಲಿಂಗಪುರಾಣ, ಹಂಸೋಪನಿಷತ್, ವಾತುಳಾಗಮ, ಶಿವರಹಸ್ಯ, ವಾಯುವೀಯ ಸಂಹಿತಾ, ಪಾವನಾಗಮ, ಗೋರಕ್ಷ ಸಂಹಿತಾ, ಗಾರುಡಪುರಾಣ, ಆದಿತ್ಯಪುರಾಣ, ಕಾಶೀಕಾಂಡ, ಕೌಮಿಕಾಗಮ, ಕ್ರಿಯಾತಿಲಕ, ಬ್ರಹ್ಮಗೀತೆ, ಮೊದಲಾದ ಪುರಾಣ ಪುಣ್ಯ ಕೃತಿಗಳನ್ನು ಆಧರಿಸಿ ರಚಿತವಾದ ಒಂದು ಸಂಕಲನ ಸಮುದ್ರ. ಇಂತಹ ಸಾಗರವನ್ನು ಚರಮೂರ್ತಿ ಬಸವಲಿಂಗದೇವ ನಿರ್ಭೀತವಾಗಿ ಈಸಿದ್ದಾನೆ; ಗುರಿ ಸೇರಿದ್ದಾನೆ.

## IV ಹಿರಿಯ ಬಸವಪ್ಪ ನಾಯಕ (ಕ್ರಿ. ಶ. ೧೬೯೭-೧೭೧೪)

ಕ್ರಿ. ಶ. ೧೬೯೭ ರಿಂದ ೧೭೧೪ ರವರೆಗೆ ಕೆಳದಿಯಲ್ಲಿ ಬಹು ಅದ್ದೂರಿಯಿಂದ ಆಡಳಿತ ನಡೆಸಿದ ಧರ್ಮಪ್ರಭು ಬಸವರಾಜೇಂದ್ರನು ಸ್ವಯಂ ಕವಿಯೂ ಕವಿಗಳ ಕಲ್ಪವೃಕ್ಷವೂ ಆಗಿದ್ದಾನೆ. ಈತನು ಸಂಸ್ಕೃತ ಮತ್ತು ಕನ್ನಡ ಈ ಎರಡು ಭಾಷೆಗಳಲ್ಲೂ ಕೃತಿ ರಚಿಸಿದಂತಿದೆ. ಸಂಸ್ಕೃತದಲ್ಲಿ ಶಿವತತ್ತ್ವ ರತ್ನಾಕರವೆಂಬ ಬೃಹತ್ ವಿಶ್ವಕೋಶವನ್ನೂ ಸುಭಾಷಿತ ಸುರದ್ರುಮವೆಂಬ ಸಾರಸ್ವತ ಲೋಕದ ಸರ್ವ ಕಾಮಿತಗಳನ್ನೂ ಪೂರೈಸಬಲ್ಲ ಪುಣ್ಯಕೃತಿಯನ್ನೂ ಕನ್ನಡ ಮತ್ತು ಸಂಸ್ಕೃತ ಮಿಶ್ರಿತವಾದ 'ಸೂಕ್ತಿಸುಧಾಕರ' ಎಂಬ ಗ್ರಂಥವನ್ನೂ ಕೊಟ್ಟಿದ್ದಾನೆ. ಆದರೆ ಸೂಕ್ತಿ ಸುಧಾಕರ ಉಪಲಬ್ಧವಿಲ್ಲ. ಕೆಳದಿನೃಪ ವಿಜಯವು—

> ....ಗೀರ್ವಾಣ ಕರ್ಣಾಟಕ ಭಾಷೆಗಳಿಂ ||
> ಅನುಪಮ ಸೂಕ್ತಿಸುಧಾಕರ
> ಮೆನಿಪಾ ವಸ್ತುಕ ಸುಕಾವ್ಯಮಂ ವಿರಚಿಸಿ ಸೂ |
> ರಿ ನಿಕರ ಕಲ್ಪದ್ರುಮನೆಂ
> ದೆನಿಸೀ ಬಿರುದಾಂತು ಮೆರೆದನಾ ಬಸವನೃಪಂ ||

(ಕೆ. ನೃ. ವಿ. ಪು. ೧೭೫)

—ಎಂದು ಹೇಳುತ್ತದೆ. ಇದಿಷ್ಟರಿಂದಲೇ ತೃಪ್ತರಾಗಬೇಕಾಗಿದೆ. ಶ್ರೀ ರಾ. ನರಸಿಂಹಾ ಚಾರ್ಯರೂ ಸಹ 'ಈ ಗ್ರಂಥವು ನಮಗೆ ದೊರೆತಿಲ್ಲ' ಎಂದಿದ್ದಾರೆ.[55] ಇದರಿಂದ ಕನ್ನಡಕ್ಕೆ ಅಪಾರ ನಷ್ಟವುಂಟಾಗಿದೆ. 'ಏಕೆಂದರೆ ಕೆಳದಿಯ ಬಸವರಾಜೇಂದ್ರನು, ಸೂರಿನಿಕರ ಕಲ್ಪದ್ರುಮ.[56] ಅಷ್ಟೆ ಅಲ್ಲ, ಸಾಕ್ಷಾತ್ ಸರಸ್ವತಿಯ ನರ್ತನದ ರಂಗಭೂಮಿಯಾಗಿದ್ದಾನೆ.[57] ಇಂತಹ 'ಭಾರತೀ ನರ್ತನ ಸ್ಥಲ'ನಾದ ಬಸವಪ್ರಭುವಿನ ಪಾಂಡಿತ್ಯ ಪ್ರತಿಭೆಗಳು ಕನ್ನಡಿಗರಿಗೆ ದೊರೆಯದಾಗಿವೆ.

---

[55] ಕ.ಕ.ಚ. II, ಪು. 558.

[56] ಕೆ.ನೃ.ವಿ. ಪು. 175

[57] ಅನುಬಂಧ 3 ನೋಡಿ.

## V. ಶರಜಾ ನಾಗಪ್ಪಯ್ಯ (ಕ್ರಿ. ಶ. ೧೭೦೦)

ಧರಣಿಗುತ್ತಮವಾಗಿ ರಾಜಿಪ
ದೊರೆ ಕೆಳದಿ ಬಸವ ಕ್ಷಿತೀಶನ
ಚರಣಕಮಲದ ಭೃಂಗ ಶರಜಾ ನಾಗಸನಮಂತ್ರಿ
ವಿರಚಿಸಿದನೀ ಪುಣ್ಯ ಕಥೆಯನು
ಹರುಷದಿಂ ಕೇಳ್ವರಿಗೆ ಕ್ರೋಡದ
ಪುರದ ಶಂಕರನಾರಯಣನಿತ್ತಪನು ಸಂಪದವಾ ॥ [58]

—ಕವಿ ತಾನೇ ಹೇಳಿಕೊಂಡಿರುವಂತೆ 'ಕೆಳದಿ ಬಸವ ಕ್ಷಿತೀಶನ ಚರಣಕಮಲ ಭೃಂಗ' ಆದರೆ ಈ ಬಸವಕ್ಷಿತೀಶನು ಯಾರು? ಎಂಬುದಕ್ಕೆ ಈತನಲ್ಲಿ ಉತ್ತರ ಸಿಗುವುದಿಲ್ಲ. ತಿರುಮಲಭಟ್ಟ,[59] ಷಡಕ್ಷರಿ,[60] ಮರಿತೋಂಟದಾರ್ಯ[61] ಮೊದಲಾದವರು ಕೊಟ್ಟಂತೆ ಶರಜಾ ನಾಗಪ್ಪ ಕೆಳದಿಯ ಅರಸರ ವಂಶವೃಕ್ಷವನ್ನಾಗಲೀ, ಅವರ ಚರಿತ್ರೆಯನ್ನಾಗಲೀ ಕೊಡುವುದಿಲ್ಲ. ಶುಕಸಪ್ತತಿಯಲ್ಲೂ ಸಹ ಮೇಲೆ ತಿಳಿಸಿದ ಒಂದು ಪದ್ಯವನ್ನು ಬಿಟ್ಟರೆ ಬೇರೆ ಎಲ್ಲೂ ತನ್ನ ಹೆಸರು ಹೇಳಿಕೊಂಡಿಲ್ಲ. ಕಡೆಯ ಪಕ್ಷ ತನ್ನ ಕಾವ್ಯದ ಪ್ರತಿ ಸಂಧಿಯ ಅಂತ್ಯದಲ್ಲಾಗಲೀ ಅಥವಾ ಕಾವ್ಯದ ಕಡೆಯಲ್ಲಾಗಲೀ ಸಂಪ್ರದಾಯದಂತೆ ಸುದೀರ್ಘ ಒಕ್ಕಣೆಯನ್ನಾದರೂ ಕೊಡಬಹುದಾಗಿತ್ತು. ಇಲ್ಲಿ ಅದೂ ಇಲ್ಲ. ಆದ್ದರಿಂದ ಇವನ ಕಾಲವನ್ನು ಇವನ ಕೃತಿಯ ಆಧಾರದಿಂದ ನಿರ್ಧರಿಸುವುದು ಕಷ್ಟ. ಆದರೆ ಕೆಳದಿಯ ಕವಿ ಲಿಂಗಣ್ಣನು ತನ್ನ ಕೃತಿಯಲ್ಲಿ ಚೆನ್ನಮ್ಮಾಜಿಯವರ ಕಾಲದಲ್ಲಿ ಬದುಕು ಮಾಡಿದವರ ಪಟ್ಟಿಯಲ್ಲೂ ಹಿರಿಯ ಬಸಪ್ಪನಾಯಕರ ಕಾಲದಲ್ಲಿ ಬದುಕು ಮಾಡಿದವರ ಪಟ್ಟಿಯಲ್ಲೂ ಇವನ ಹೆಸರು ತಂದಿದ್ದಾನೆ.[62] ಬಹುಶಃ ಚೆನ್ನಮ್ಮಾಜಿ ಕಾಲದಲ್ಲಿದ್ದ ಶರಜಾ ನಾಗಪ್ಪನು ಅವಳ ಅನಂತರ ಪಟ್ಟಕ್ಕೆ ಬಂದ ದತ್ತಕ ಹಿರಿಯ ಬಸವರಾಜನ ಆಸ್ಥಾನದಲ್ಲೂ ನಿಯೋಗಿ (ಮಂತ್ರಿ)ಯಾಗಿ, ಕವಿಯಾಗಿ ಸೇವೆ ಸಲ್ಲಿಸಿದ್ದಾನೆ. ಮೈಸೂರಿನ ಮಾಯಾವಿಗಳಿಗೂ ಕೆಳದಿಯವರಿಗೂ ವಸುಧಾರಾ (ಈಗಿನ ವಸ್ತಾರ) ಕೋಟೆಗಾಗಿ ಹೋರಾಟ ನಡೆದು ಹಿರಿಯ ಬಸವಪ್ಪನಾಯಕನು ಆ ಕೋಟೆಯನ್ನು ಸ್ವಾಧೀನಪಡಿಸಿಕೊಂಡು ಮುಂದೆ

---

58 ಶುಕಸಪ್ತತಿ, ನಾಂದಿಪದ ಸಂಧಿ, ಪದ್ಯ 16, ಗರಿ. 2.

59 ಕರ್ಣಾಟಕ ಶಿವಗೀತೆ, ಪೀಠಿಕಾ ಸಂಧಿ, ಪದ್ಯ 7–9.

60 ವೀರಶೈವ ಧರ್ಮಶಿರೋಮಣಿ. ಪ್ರಥಮ ಪರಿಚ್ಛೇದ, ಶ್ಲೋಕ 10-42.

61 ವೀರಶೈವಾನಂದ ಚಂದ್ರಿಕಾ (ಕ್ರಿಯಾಕಾಂಡ), ಶ್ಲೋಕ. 16-60.

62 ಕೆ.ನೃ.ವಿ. ಪು. 169 ಮತ್ತು ಪು. 177. (ಅಡಿಟಿಪ್ಪಣಿ)

ಉಭಯ ರಾಷ್ಟ್ರಗಳೂ ವಿರೋಧವನ್ನು ಮರೆತು, ಅನ್ಯೋನ್ಯ ಪ್ರೀತಿಯಿಂದ ಬಾಳಬೇಕೆಂದು ಅಪೇಕ್ಷಿಸಿ, "ನಿಯೋಗಿ ಶರಜಾ ನಾಗಪ್ಪಯ್ಯನ ಮುಖದೊಳ್ ಕ್ರಿಯಾಪೂರ್ವಕವಾಗಿ ಭಾಷಾ ಪತ್ರಿಕೆಯಂ ರಚಿಯಿಸಿ ನಿರ್ವೈರವಮಂ ನಿರ್ಮಿಸು"[63] ವೆಡೆಯಲ್ಲಿ ಶರಜಾ ನಾಗಪ್ಪಯ್ಯ ಕಾಣಿಸಿಕೊಂಡಿದ್ದಾನೆ. ಶರಜಾ ಅವನೇ ಹೇಳಿಕೊಂಡಿರುವಂತೆ 'ಸನ್ಮಂತ್ರಿ'ಯೂ ಹೌದು.

ಬಸವಪ್ಪನಾಯಕನ ಕಾಲ ಕ್ರಿ. ಶ. ೧೬೯೮–೧೭೧೫. ಈ ಅವಧಿಯಲ್ಲಿ ಬದುಕು ಮಾಡಿದ ಶರಜಾ ನಾಗಪ್ಪನ ಕಾಲ ಕ್ರಿ. ಶ. ೧೭ನೆಯ ಶತಮಾನದ ಅಂತ್ಯ ಮತ್ತು ೧೮ನೆಯ ಶತಮಾನದ ಆದಿ ಎಂದು ಹೇಳಬಹುದು. ಆದರೆ ಕವಿ ಚರಿತ್ರೆಕಾರರು ಹೇಳಿದಂತೆ ಕ್ರಿ. ಶ. ೧೬೫೦ ಅಲ್ಲ. ಇದೇ ವಿದ್ವಾಂಸರು ತಮಗೆ ದೊರೆತ ಬೇರೊಂದು ಶುಕಸಪ್ತತಿ ಗ್ರಂಥದ ಹೆಸರು ಹೇಳಿ ಆದರ ಕಾಲವನ್ನು ಸುಮಾರು ಕ್ರಿ. ಶ. ೧೬೮೦ ಎಂದು ಕರೆದು, ೨೯೭ನೆಯ ಪುಟದಲ್ಲಿ ಹೇಳಿರುವ ಶುಕಸಪ್ತತಿಯೂ ಇದೂ ಒಂದೇ ಗ್ರಂಥವಾಗಿದ್ದರೂ ಇರಬಹುದು" ಎಂದು ಹೇಳಿದ್ದಾರೆ.[64] ಶ್ರೀ ರಾ. ನರಸಿಂಹಾಚಾರ್ಯರ ಊಹೆ ಸರಿಯಾಗಿದೆ. ಎರಡೂ ಒಬ್ಬನೇ ಕರ್ತೃವಿನಿಂದ ಅಂದರೆ ಶರಜಾ ನಾಗಪ್ಪಯ್ಯನಿಂದ ರಚಿತವಾದ ಕೃತಿಯ ಪ್ರತಿಗಳೇ.

ಇಂತಹ ಸ್ಪಷ್ಟವಾದ ಊಹೆಗೆ ಬದಲಾಗಿ ಅಪಾರ್ಥ ಬರುವಂತೆ ಮೂಲವನ್ನು ಓದಿದವರೂ ಪ್ರತಿ ಮಾಡಿದವರೂ ಉಂಟು. ಉದಾಹರಣೆಗೆ ಮದ್ರಾಸಿನ ಪ್ರಾಚ್ಯ ಹಸ್ತಪ್ರತಿ ಗ್ರಂಥಾಲಯದಲ್ಲಿ ಪ್ರಕಟವಾದ ವಿಶ್ಲೇಷಣಾತ್ಮಕ ಕೃತಿ ಪಟ್ಟಿಯನ್ನು ನೋಡಬಹುದು. ಅದರಲ್ಲಿ ಹೀಗೆ ಹೇಳಿದೆ—

"ಧರಣಿಗುತ್ತಮನಾಗಿ ರಾಜಿಪ
ದೊರೆ ಕೆಳದಿ (ಯ) ಭವಕ್ಷಿತೀಶನ
ಚರಣಕಮಲದ ಭೃಂಗ ಶರಜಾನಾಗ ಸನ್ಮಂತ್ರಿ
ವಿರಚಿಸಿದನೀ ಪುಣ್ಯ ಕಥೆಯನು
ಹರುಷದಿಂ ಕೇಳ್ವರಿಗೆ ಕೊಡಗಿಯ
ಪುರದ ಶಂಕರನಾರಯಣ (?) ನಿತ್ತಪನು ಸಂಪದವ ||

"ಕವಿ ಶರಜಾ ನಾಗನೆಂಬವನು. ಇವನ ಊರು ಕೊಡಗಿಯಾಗಿರಬಹುದು. ಇವನು ಕೆಳದಿಯ ಭವಕ್ಷಿತೀಶನ ಮಂತ್ರಿಯಾಗಿದ್ದಂತೆ ಗೊತ್ತಾಗುತ್ತದೆ. ಈ ಭವಕ್ಷಿತೀಶನಾರೆಂಬುದೂ, ಯಾವ ಕಾಲದಲ್ಲಿದ್ದನೆಂಬುದೂ ಗೊತ್ತಾಗುವುದಿಲ್ಲ. "ಭವ" ಎಂಬುದರ

---

[63] ಕೆ.ನೃ.ವಿ. ಪು. 174

[64] ಕ.ಕ.ಚ. III ಪು. 300.

ಸ್ಥಾನದಲ್ಲಿ "ಶಿವ" ಎಂಬ ಪದವನ್ನು ಸುಲಭವಾಗಿ ಹಾಕಬಹುದಾಗಿರುವಾಗ "ಶಿವ" ಎಂಬ ಅರ್ಥದಲ್ಲಿ "ಭವ" ಎಂದು ಪ್ರಯೋಗಿಸಿರಬಹುದೆಂದೂ ಹೇಳಲು ಸಾಧ್ಯವಿಲ್ಲ. ಈ ಕಾರಣದಿಂದ ಶಿವಪ್ಪನಾಯಕನೆಂದರ್ಥ ಮಾಡುವುದಕ್ಕೂ ಆಗದು. "ಭದ್ರಕ್ಷಿತೀಶ" ಎಂಬುದಕ್ಕೆ ಬದಲಾಗಿ "ಭವಕ್ಷಿತೀಶ" ಎಂದು ಬಿದ್ದಿರಬಹುದೆಂಬುದನ್ನೂ ಊಹಿಸುವುದಕ್ಕಾಗುವುದಿಲ್ಲ. ಹೇಗೂ ಇವನು ಕೆಳದಿಯರಸರ ಕಾಲದವನೆಂಬುದು ಗೊತ್ತಾಗುತ್ತದೆ. ಇವನ ಕಾಲವು ಸುಮಾರು ೧೭ನೆಯ ಶತಮಾನದ್ದಿರಬಹುದು."[65]

ಪ್ರಾಯಶಃ ದೊರೆತ ಓಲೆ ಪ್ರತಿ ಸ್ಪಷ್ಟವಿಲ್ಲದ್ದರಿಂದ ಈ ತಪ್ಪಿಗೆ ಅವಕಾಶವಾಗಿರಬಹುದು. "ಆತ" ಭವಕ್ಷಿತೀಶನೂ "ಅಲ್ಲ" ಭದ್ರಕ್ಷಿತೀಶನೂ "ಅಲ್ಲ," ಶಿವಕ್ಷಿತೀಶನಂತೂ ಅಲ್ಲವೇ ಅಲ್ಲ. ಅವನು "ಬಸವ ಕ್ಷಿತೀಶನು"- ಹಿರಿಯ ಬಸವಪ್ಪನಾಯಕ. ಕವಿ ಹೇಳಿದ್ದು ಕೊಡಗಿಯ ಪುರವನ್ನಲ್ಲ, "ಕ್ರೋಡಪುರ (ಈಗಿನ ಶಂಕರನಾರಾಯಣ ಎಂಬ ಊರು) ಅಲ್ಲದೆ ಅದು ಕವಿಯ ಹುಟ್ಟೂರು ಅಲ್ಲ. ಅದು ತನ್ನ ಕುಲದೈವವಾದ "ಕ್ರೋಡಪುರದ ಶಂಕರನಾರಾಯಣ" ಸ್ವಾಮಿಯನ್ನು ಕುರಿತು ಹೇಳಿದ್ದು. ಆದರೆ ಮದ್ರಾಸಿನ ಹಸ್ತಪ್ರತಿ ಪಟ್ಟಿ ಕವಿಯ ಕಾಲವನ್ನು ಮಾತ್ರ ೧೭ನೆಯ ಶತಮಾನವೆಂಬುದನ್ನು ಸರಿಯಾಗಿ ಊಹಿಸಿ ಹೇಳಿದೆ.

ಶರಜಾ ನಾಗನು ಬ್ರಾಹ್ಮಣ ಕವಿ. ಇವನ ವಂಶದವರು ಇಂದಿಗೂ ಶಿವಮೊಗ್ಗೆ ಅರಗ ಮೊದಲಾದೆಡೆಗಳಲ್ಲಿ ಇದ್ದಾರೆ. "ಶರಜಾ" ಎಂಬುದು ಇವನ ಮನೆತನದ ಹೆಸರು.[66] ಇವನ ಕೃತಿ ಶುಕಸಪ್ತತಿ ಒಂದೇ ಎಂದು ತೋರುತ್ತದೆ. ಬೇರೆ ಯಾವ

---

[65] A Descriptive catalogue of Kannada Manuscripts in the Govt. of Oriental Manuscripts Library, Madras, Vol. VI, P. 1387-1390.

[66] 'ಶರಜಾ' ಬಿಜಾಪುರದ ಸುಲ್ತಾನನು ಈ ವಂಶೀಕರಿಗೆ ಕೊಟ್ಟ 'ಬಿರುದು' ಎಂದು ಸರ್ಜಾ ಚಂದ್ರಶೇಖರಯ್ಯ ಹೇಳುತ್ತಾರೆ. 'ಶರಜಾ' ಹೋಗಿ 'ಸರ್ಜಾ' ಆಗಿದೆ. 'ಶರಜಾ' ಪರ್ಷಿಯದ ಪದ. ಅದಕ್ಕೆ ಭಯಂಕರ ಪ್ರಾಣಿ ಅಥವಾ ಸಿಂಹ ಎಂಬ ಅರ್ಥವಿದೆ:

i) Persian-English Dictionary, P. 741, by V. Steingass, Ph. D. (III impression, London, 1947)

ii) A Handy Urdu-English Dictionary, P. 488, Complied by - S. Sangaji, 1899.

—ಈ ಉರ್ದುಕೋಶದಲ್ಲೂ "ಶರಜಾ" ಎಂದರೆ "ಸಿಂಹ" ಎಂಬರ್ಥ ಇದೆ. ಆದ್ದರಿಂದ ಇದು ಭಾವಸೂಚಕ ಪದ. ಕೆ. ವೆಂಕಟರಾಯಾಚಾರ್ಯರು ಹೇಳುವಂತೆ "ಶರಜ" ಎಂದರೆ "ಸ್ಕಂದ" ಎಂಬ ಅರ್ಥವಿದ್ದರೂ ಪ್ರಸ್ತುತದ "ಶರಜಾ" ಮನೆತನಕ್ಕೆ ಬಂದ ಈ ಬಿರುದಿನ ಅರ್ಥ ಇಲ್ಲ.

(ನೋಡಿ : ಕೆ. ವೆಂಕಟರಾಯಾಚಾರ್ಯ, ಸಾಹಿತ್ಯ ಹಾಗೂ ಸಂಶೋಧನೆ, ಪು. 27)

ಗ್ರಂಥವನ್ನೂ ಈತನು ಬರೆದಂತೆ ಕಾಣುವುದಿಲ್ಲ. ಬೇರೆ ಯಾವ ಕವಿಯೂ ಈತನು ಬರೆದವೆಂದು ಕೃತಿಗಳನ್ನೂ ಹೆಸರಿಸಿಲ್ಲ. ಆದ್ದರಿಂದ ಶುಕಸಪ್ತತಿ ಒಂದೇ ಶರಜಾ ನಾಗಪ್ಪನ ಕಲಾಕಾಣಿಕೆ ಎಂದು ನಿರ್ಧರಿಸಿ ಹೇಳಬಹುದಾಗಿದೆ.

ಶರಜಾ ನಾಗಪ್ಪಯ್ಯನು ತನ್ನ ಕೃತಿಯನ್ನು ರಾಜನೀತಿ ಶುಕಸಪ್ತತಿ ಎಂದು ಕರೆದಿದ್ದಾನೆ.[67] ಇದರಲ್ಲಿ ೨೮೭ ಗರಿಗಳೂ, ೭೨ ಸಂಧಿಗಳೂ, ೩೧೨೦ ಪದ್ಯಗಳೂ ಇವೆ. ಭಾಮಿನಿಯ ಸುಂದರ ಛಂದದಲ್ಲಿ ಕವಿ ೭೦ ಕಥೆಗಳನ್ನು ಕೋದಿದ್ದಾನೆ.[68]

ಶುಕಸಪ್ತತಿ ಸಂಸ್ಕೃತ ಸಾಹಿತ್ಯ ಚರಿತ್ರೆಕಾರರನ್ನು ಅಷ್ಟಾಗಿ ಕೆಣಕಿದಂತಿಲ್ಲ. ಯಾವ ಸಾಹಿತ್ಯೇತಿಹಾಸಕಾರನೂ ಶುಕಸಪ್ತತಿಯ ಬಗ್ಗೆ ವಿವರಣೆ ಕೊಟ್ಟು ವಿಚಾರ ಮಾಡಿಲ್ಲ. ಕೆಲವರಂತೂ ನೀತಿಬೋಧಕವಾದ ಸಾಧಾರಣ ಕೃತಿಯೆಂದು (Minor Didactic work) ಕಡೆಗಣಿಸಿ ಕೇವಲ ಹೆಸರನ್ನು ಮಾತ್ರ ನಮೂದಿಸಿ ಮುಂದೆ ಹೋಗಿದ್ದಾರೆ. ಇದಕ್ಕೆ ಕಾರಣ ಇಲ್ಲದಿಲ್ಲ. ಏನೆಂದರೆ, ಸಂಸ್ಕೃತದ ಶುಕಸಪ್ತತಿಗೆ ಎರಡು ರೂಪಗಳಿವೆ. ಒಂದು ಔತ್ತರೇಯ (ಶೃಂಗಾರ) ಶುಕಸಪ್ತತಿ, ಮತ್ತೊಂದು ದಾಕ್ಷಿಣಾತ್ಯ (ವೇದಾಂತ) ಶುಕಸಪ್ತತಿ.[69] ಮೊದಲನೆಯದು ಅಚ್ಚಾಗಿ ಜನಪ್ರಿಯತೆಯನ್ನುಗಳಿಸಿದ ಕೀಳು ಕಾಮುಕಥೆಗಳ ಕೃತಿ. ಎರಡನೆಯದು, ಕೇವಲ ನೀತಿಬೋಧಕವಾದುದು. ಬಹುಶಃ ಸಾಹಿತ್ಯೇತಿಹಾಸಕಾರರು ಮೊದಲನೆಯ ಕೀಳುದರ್ಜೆಯ ಕೃತಿಯನ್ನು ನೋಡಿ, ಅದರ ಬಗ್ಗೆ ಏನನ್ನೂ ಹೆಚ್ಚು ಹೇಳದೆ ಹೆಸರನ್ನು ಮಾತ್ರ ಸೂಚಿಸಿ ಮುಂದುವರಿದಿರಬಹುದು. ಇರಲಿ, ಈಗ ನಮ್ಮ ಶರಜಾ ನಾಗಪ್ಪಯ್ಯನ 'ರಾಜನೀತಿ ಶುಕಸಪ್ತತಿ'ಯನ್ನು ವಿಚಾರಿಸಿಕೊಳ್ಳುವ ಮುನ್ನ, ಸಂಸ್ಕೃತದ ಶುಕಸಪ್ತತಿಯ ಎರಡೂ ರೂಪಗಳನ್ನು ಅವಲೋಕಿಸೋಣ :—

---

[67] ಶುಕಸಪ್ತತಿ, ಆರಂಭದಲ್ಲಿ–ಗರಿ–1.

[68] ಸರ್ಜಾ ಚಂಪ್ರಶೇಖರಯ್ಯನವರು, ಕೊಟ್ಟ ಓಲೆ ಪ್ರತಿ ಹಾಗೂ ಕಾಸರವಳ್ಳಿ ಸಾಹುಕಾರ ರಾಮಸ್ವಾಮಿಯವರ ಮನೆಯಲ್ಲಿರುವ ಓಲೆ ಪ್ರತಿ ಎರಡೂ ಒಂದೇ ಆಗಿವೆ.

[69] ಸಾ. ಶಿ. ಮರುಳಯ್ಯ, ಅರ್ಪಣೆ ಗ್ರಂಥದಲ್ಲಿ ಬರೆದಿರುವ "ಶುಕಸಪ್ತತಿಯ ಎರಡು ಮುಖಗಳು" ಲೇಖನ ನೋಡಿ.

## ಸಂಸ್ಕೃತದ ಎರಡು ಶುಕಸಪ್ತತಿಗಳು

ಸಂಸ್ಕೃತದಲ್ಲಿ ಎರಡು ರೂಪದ ಶುಕಸಪ್ತತಿಗಳು ಸಿಗುತ್ತವೆ. ಒಂದು, ಉತ್ತರ ಭಾರತದ ಶುಕಸಪ್ತತಿ[70] ಮತ್ತೊಂದು ದಕ್ಷಿಣ ಭಾರತದ ಶುಕಸಪ್ತತಿ.[71] ಹಾಗೆ ಕರೆಯಲು ಆ ಭಾಗಗಳಲ್ಲಿ ಆ ರೂಪದ ಕೃತಿಗಳು ಹೆಚ್ಚು ಪ್ರಚಲಿತವಾಗಿರುವುದೇ ಕಾರಣ. ಮೊದಲನೆಯದು ಶೃಂಗಾರ ಶುಕಸಪ್ತತಿಯೆಂತಲೂ, ಎರಡನೆಯದು ವೇದಾಂತ ಶುಕಸಪ್ತತಿ ಅಥವಾ ದಿನಾಲಾಪನಿಕಾ ಶುಕಸಪ್ತತಿ ಎಂತಲೂ ಕರೆಯ ಬಹುದು. ಉತ್ತರದ ಶುಕಸಪ್ತತಿಯು ಹೆಚ್ಚು ಪ್ರಚಲಿತವಿದೆ. ಏಕೆಂದರೆ ದಕ್ಷಿಣದ್ದು ವೇದಾಂತ ಭರಿತ, ಉತ್ತರದ್ದು ಶೃಂಗಾರ ಪೂರ್ಣ. ಬಹುಜನಪ್ರಿಯವಾಗಲು ಅದು

---

[70] ಮೋತಿಲಾಲ್ ಬನಾರಸೀದಾಸ್, ಡಿಲ್ಲಿ, ವಾರಣಾಸಿ, ಪಾಟ್ನ-ಇವರ ಪ್ರಕಟಣೆ 1959 ; ತಂಜಾವೂರು ಲೈಬ್ರರಿಯಲ್ಲಿ ನಂ. 4202, 4203 ಕಾಗದದ ಹಸ್ತಪ್ರತಿಗಳಿವೆ.

[71] ಪ್ರಾಯಶಃ ಇದು ಅಚ್ಚಾಗಿರಲಿಕ್ಕಿಲ್ಲ. ಮದ್ರಾಸಿನ ಪ್ರಾಚ್ಯ ಸಂಶೋಧನ ಗ್ರಂಥಾಲಯದಲ್ಲಿ—

i) 21824 Paper Telugu Script D. 12212 Complete 1-70 stories.
ii) 21825 Paper Telugu Script D. 12213 Complete 1-70 stories.
iii) 21826 Paper Telugu Script D. 12214 Incomplete 1-37 stories only.

ಎಲ್ಲವೂ ಅನುಷ್ಟುಪ್ ಛಂದದಲ್ಲಿವೆ. ಪ್ರತಿಯೊಂದು ಸುಮಾರು ನಾಲ್ಕು ಸಾವಿರ ಗ್ರಂಥ ಪರಿಮಾಣದಲ್ಲಿವೆ. ತಿರುಪತಿ ಸಂಸ್ಕೃತ ವಿದ್ಯಾಪೀಠದಲ್ಲಿ ಆಂಧ್ರಾಕ್ಷರದ ಓಲೆ ಗ್ರಂಥ ನಂ. 1805, ಇದೆ. ಅದು ಅಪೂರ್ಣ ಕೃತಿ. 1–30 ರವರೆಗೆ ಮಾತ್ರ ಅಲಾಪನಿಕವಿದೆ ಕರ್ತೃ "ನಾರಾಯಣಾಖ್ಯವಿದುಷಾ"–ಎಂದಿದೆ.

ಮೇಲುಕೋಟೆಯ ಶ್ರೀ ರಾಮಶರ್ಮ ಎಂಬುವರ ಬಳಿ ಅಪೂರ್ಣ ಕೃತಿ ಒಂದಿದೆ. ಈ ವಿಷಯವನ್ನು ಒದಗಿಸಿ ಉಪಕರಿಸಿದ ಲಕ್ಷ್ಮೀತಾತಾಚಾರ್‌ರವರಿಗೆ ತುಂಬಾ ಕೃತಜ್ಞ ರಾಗಿದ್ದೇವೆ.

ತೆಲುಗಿನಲ್ಲಿ ಮೂರನೆಯ ರೂಪದ "ಶುಕಸಪ್ತತಿ"ಯೊಂದು ಸಿಗುತ್ತದೆ. ಇದರ ಕರ್ತೃ ಕದಿರಿ ರಾಜ್ಯದ ಪ್ರಭುವಾಗಿ ಆಳಿದ "ಕದಿರೀಪತಿನಾಯಕ" ಎಂಬುವನು. ಇದು ಚಂಪು ಕೃತಿ. ಅಪೂರ್ಣವಾಗಿದೆ; ಇದು ಸಂಸ್ಕೃತದ ಭಾಷಾಂತರವಲ್ಲ. ಕೇವಲ ಅನುಕರಣೆ ಎಂಬು ದಾಗಿ ಈ ಕೃತಿಯ ಪ್ರಥಮ ಮುದ್ರಣಕ್ಕೆ ಪೀಠಿಕೆ ಬರೆದ ಶ್ರೀ ರಾಮಚಂದ್ರ ವೆಂಕಟ ಕೃಷ್ಣರಾವ್ ತಿಳಿಸುತ್ತಾರೆ.

—ಶ್ರೀರಾಮ ಪ್ರೆಸ್ ಮದ್ರಾಸಿನಲ್ಲಿ 1935 ರಲ್ಲಿ ಅಚ್ಚಾದ ತೆಲುಗು ಗ್ರಂಥದ ಪ್ರಥಮ ಮುದ್ರಣ ಪೀಠಿಕೆ. —ಪು. 5 ನೋಡಿ.

ತುಂಬಿಕೊಂಡಿರುವ ಕಾಮ ಕಥೆಗಳೇ ಕಾರಣ. ಇವೆರಡೂ ಪ್ರಪಂಚದ ಹಲವು ಭಾಷೆಗಳಿಗೆ ತರ್ಜುಮೆಯಾಗಿವೆ.[72]

ಇವೆರಡರಲ್ಲೂ ಸಾಮ್ಯಕ್ಕಿಂತ ವೈಷಮ್ಯವೇ ಬಹಳ. ಎರಡರಲ್ಲೂ ಗಿಳಿಯು ಕಥೆ ಹೇಳುತ್ತದೆ. ಎರಡರಲ್ಲೂ ಎಪ್ಪತ್ತು ಎಪ್ಪತ್ತು ಕಥೆಗಳಿವೆ. ಆದರೆ ಸಂಖ್ಯೆಯಲ್ಲಿ ಸಮನಾಗಿದ್ದರೂ ವಸ್ತು ಮತ್ತು ರಚನೆಯಲ್ಲಿ ಸಂಪೂರ್ಣವಾಗಿ ಬೇರೆಯಾಗಿವೆ. ಔತ್ತರೇಯ ಶುಕಸಪ್ತತಿಯ ಕಥೆಗಳು ಗಾತ್ರದಲ್ಲಿ ತುಂಬಾ ಚಿಕ್ಕವು; ದಾಕ್ಷಿಣಾತ್ಯ ಶುಕಸಪ್ತತಿಯ ಕಥೆಗಳು ಸುದೀರ್ಘವಾದವುಗಳು. ಅದರಲ್ಲಿ ಶುಕವು ಜಾರಿ ಬೀಳುವ ಹೆಣ್ಣಿಗೆ ಉಪದೇಶ ಮಾಡಿದರೆ ಇದರಲ್ಲಿ ದಾರಿ ತಪ್ಪುತ್ತಿರುವ ಗಂಡಿಗೆ ವಿವೇಕ ಕಲಿಸುತ್ತದೆ. ಅಲ್ಲಿ ಕಾಣುವುದು ಕೇವಲ ಕಾಮಭರಿತ ಶೃಂಗಾರ, ಇಲ್ಲಿ ಆಗುವುದು ಧಾರ್ಮಿಕ ಹಿನ್ನೆಲೆಯ ಪ್ರೇಮ ಸಾಕ್ಷಾತ್ಕಾರ; ಅಲ್ಲಿಯದು ಕೇವಲ ಚಮತ್ಕಾರ ಪ್ರದರ್ಶನ, ಇಲ್ಲಿಯದು ದೈವೀಕ ಪ್ರೇಮ ದರ್ಶನ; ಅಲ್ಲಿ ಒಂದೆರಡನ್ನುಳಿದು ಮಿಕ್ಕ ಎಲ್ಲ ಕಥೆಗಳೂ ನೂತನವಾದುವು; ಕವಿಯ ಸ್ವಕಪೋಲ ಕಲ್ಪಿತವಾದುವು, ಆದರೆ ಇಲ್ಲಿ ಅನೇಕ ಕಥೆಗಳು ಪುರಾಣ ಪುಣ್ಯಕಥೆಗಳಿಂದ ಆರಿಸಿದವುಗಳು.[73] ಅದು ಬುದ್ಧಿ

---

[72] ಕ್ರಿ. ಶ. 1890 ರಲ್ಲಿ ಕನ್ನಡಕ್ಕೂ, 1894 ರಲ್ಲಿ ಜರ್ಮನಿಗೂ, 1897 ರಲ್ಲಿ ಲಿತ್‌ಜಿಗೆ, 1901 ರಲ್ಲಿ ರೋಮನ್, 1899 ರಲ್ಲಿ ಸ್ಟುಟಗಾರ್ಟ ಭಾಷೆಗಳಿಗೆ ಶೃಂಗಾರ ಶುಕಸಪ್ತತಿ ಭಾಷಾಂತರವಾಗಿದೆ.

i) ಶರಜಾ ನಾಗಮಂತ್ರಿ ವಿರಚಿತ "ರಾಜನೀತಿ ಶುಕಸಪ್ತತಿ"

ii) ಚಿಕ್ಕುಪಾಧ್ಯಾಯನ ಕೃತಿ "ಶುಕಸಪ್ತತಿ" ಗದ್ಯ 1910

iii) ಟಿ. ಸುಬ್ರಾಯ ಶಾಸ್ತ್ರಿಯವರ ಕೃತಿ "ಶುಕಸಪ್ತತಿ" ಗದ್ಯ (1905)

iv) ಕ್ರಿ. ಶ. 1330 ರಲ್ಲಿ ಜಿಯಾ ಉದ್ದೀನ ನಖ ಬಾಬಿ ಎಂಬುವನು 52 ಕತೆಗಳನ್ನು "ತೋತಾನಾಮ" ಎಂಬ ಹೆಸರಿನಲ್ಲಿ ಪಾರಸೀ ಭಾಷೆಗೆ ಭಾಷಾಂತರಿಸಿದ್ದಾನೆ. ಅಕ್ಬರನ ಮಂತ್ರಿ ಅಬುಲ್‌ಫಜಲ್ ಅಲ್ಲಾಸಿ ಪಾರಸಿಗೆ ಭಾಷಾಂತರಿಸಿದ್ದಾನೆ. ಕ್ರಿ. ಶ. 19ನೆಯ ಶತಮಾನದಲ್ಲಿ ಸೈಯ್ಯದ್ ಹೈದರ್ ಭಕ್ಷ ಎಂಬುವನು ಅದನ್ನೇ "ತೋತಾಕಹಾನಿ" ಎಂದು ಉರ್ದುವಿನಲ್ಲಿ ಬರೆದಿದ್ದಾನೆ.

[73] ಶಕುಂತಲೋಪಾಖ್ಯಾನ, ಅಹಲ್ಯಾ ವೃತ್ತಾಂತ, ಅನುಸೂಯ ಮಹಾತ್ಮ್ಯ, ಅಂಬರೀಷೋಪಾಖ್ಯಾನ, ರಾಮಾಯಣದ ಕಥೆ, ಇತ್ಯಾದಿ. ಆದರೆ ಇವುಗಳ ಕಥಾ ನಿರೂಪಣೆಯಲ್ಲಿ ವ್ಯತ್ಯಾಸವಿದೆ. (ನೋಡಿ: ಕೆ. ವೆಂಕಟರಾಯಾಚಾರ್ಯರ ಲೇಖನ, ಪ್ರಜಾವಾಣಿ, ತಾ॥ 8-6-1969.)

ಪ್ರಧಾನ ಕೃತಿ, ಇದು ಧರ್ಮಪ್ರಧಾನ ಕಾವ್ಯ; ಅದರಲ್ಲಿ ಹೇಳುವ ನೀತಿ ಒಂದು ಆಚರಿಸುವ ಕಾರ್ಯ ಮತ್ತೊಂದು, ಇದರಲ್ಲಿ ನುಡಿಯಂತೆ ನಡೆ; ಉತ್ತರದ ಕೃತಿಯಲ್ಲಿ ನೈತಿಕ ಪತನ ಆಗಿದೆ ಎಂದರೂ ತಪ್ಪಲ್ಲ. ಅದರಲ್ಲಿ, ಮಗನ ಇಚ್ಛಾಪೂರ್ತಿಗಾಗಿ ಯಶೋದೇವಿಯೆಂಬುವಳು ಬೇರೊಬ್ಬ ರಾಜನ ಪತ್ನಿಯಾದ ಶಶಿಪ್ರಭೆಯನ್ನು ತಂದು ಒಪ್ಪಿಸುವುದು, ಮಾಸೋಪವಾಸಿನಿಯೂ ಹಣದಾಸೆಗಾಗಿ ಮೋಸಮಾಡುವುದು, ವಿಮಲನೆಂಬ ಸಾತ್ವಿಕನ ಇಬ್ಬರು ಹೆಂಡತಿಯರನ್ನು ಕುಟಿಲನು ಭೋಗಿಸುವುದು, ಗೋವಿಂದನ ಹೆಂಡತಿ ಮೋಹಿನಿ ಹಾದಿಯಲ್ಲಿ ಸಿಕ್ಕಿದ ಅಪರಿಚಿತ ವಿಪ್ರನನ್ನು ನೋಡಿ ಕಾಮಿಸಿ ಗಂಡನಿಗೆ ಕಾಣದಂತೆ ಬಂಡಿಯಲ್ಲಿ ಅವನೊಡನೆ ರಮಿಸಿ, ಕಡೆಗೆ ಗಂಡನನ್ನು ತ್ಯಜಿಸಿ ಮಿಂಡನೊಡನೆ ಹೋಗುವುದು[74] – ಇತ್ಯಾದಿ ಎಲ್ಲ ಕಥೆಗಳೂ ನೀತಿಗೆಟ್ಟ, ನೆಲೆಗೆಟ್ಟ, ಅಸಂಬದ್ಧ ಪ್ರಲಾಪಗಳು. ಕಾಮಪ್ರಚೋದನೆಗೆ ಬೇಕಾಗುವಷ್ಟು ಆಹಾರ ಇಲ್ಲಿ ದೊರೆಯುತ್ತದೆ.

ದಕ್ಷಿಣದ ಕೃತಿಯಲ್ಲಿ ಉತ್ತಮ ಪತಿವ್ರತಾಧರ್ಮವು ಚಿತ್ರರಗೊಂಡಿದೆ. ಕಲಾತ್ಮಕವಾದ ಈ ಕಥೆಗಳಲ್ಲಿ ನೀತಿಬೋಧೆ ಹಿತಮಿತವಾಗಿ ಅಭಿವ್ಯಕ್ತಗೊಂಡಿದೆ. ಔತ್ತರೇಯ ಶುಕಸಪ್ತತಿಗೆ ಇದು ಉತ್ತರವೋ ಎನ್ನುವಂತೆ ನಮ್ಮ ಶರಜಾ ನಾಗಪ್ಪಯ್ಯನು ತನ್ನ ಶುಕಸಪ್ತತಿಯಲ್ಲಿ–

ವೇದಶಾಸ್ತ್ರ ಪುರಾಣದರ್ಥಗ
ಳಾದಿಗೊಂಡಿಹವೀ ಕೃತಿಯೊಳಿವ
ನಾಧರಿಸಿ ಕೇಳ್ವರಭಿಷ್ಟವು ಸಿದ್ಧಿಯಾದಪುದೂ।
ಹಾದರದ ಕಥೆಯಲ್ಲ[75] ಪರಮ ವಿ
ನೋದವಾಗಿಹುದೀ ಕೃತಿಗೆ ಸಮ
ನಾದ ಕೃತಿಯಿಲ್ಲೆಂದು ಕೊಂಡಾಡುವರು ಕೋವಿದರು ॥

(–ರಾಜನೀತಿ ಶುಕಸಪ್ತತಿ, ಪೀಠಿಕಾ ಪ. ೧೫)

ಎರಡೂ ರೂಪದ ಕೃತಿಗಳ ಉಪೋದ್ಘಾತವು ಬೇರೆ ಬೇರೆ. ಔತ್ತರೇಯ ಶುಕಸಪ್ತತಿಯ ಆರಂಭ ಹೀಗಿದೆ – ಮದನ ವಿನೋದನೆಂಬ ಕುಪುತ್ರನನ್ನು ಪಡೆದ ಹರದತ್ತನಿಗೆ ಆವನ ಗೆಳೆಯ ಒಂದು ಗಿಣಿ ಮತ್ತು ಒಂದು ಸಾರಿಕೆ ಇವುಗಳನ್ನು ತಂದು ಕೊಡಲು ಹರದತ್ತ ಶೆಟ್ಟಿಯು ಅವೆರಡನ್ನೂ ತನ್ನ ಕಾಮಾಂಧಪುತ್ರ ಮದನವಿನೋದನಿಗೆ ಕೊಡುತ್ತಾನೆ. ಗಿಣಿಯು ಧರ್ಮವ್ಯಾಧನ ಕಥೆಯನ್ನು ಚಮತ್ಕಾರಯುಕ್ತವಾಗಿ

---

[74] ಮೋತಿಲಾಲ್ ಬನಾರಸಿದಾಸ್ ಪ್ರಕಟಣೆ, ಶುಕಸಪ್ತತಿ ಕಥೆ: 1, 2, 3, 4 ನೋಡಿ.

[75] "ಸಾದರದಿ ಕೇಳ್ವರಿಗೆ" ಎಂಬ ಪಾಠಾಂತರವೂ ಇದೆ. ಆದರೆ "ಹಾದರದ ಕಥೆಯಲ್ಲ" ಎಂಬುದು ಬಹಳ ಪರಿಣಾಮಕಾರಿಯಾದ ಪದವಾದ್ದರಿಂದ ಅದನ್ನೇ ಸ್ವೀಕರಿಸಿದ್ದೇವೆ.

ಹೇಳಿ ಅವನನ್ನೂ ಧಾರ್ಮಿಕನನ್ನಾಗಿ ಮಾಡಿತು. ಧರ್ಮಜ್ಞನಾದ ಮದನವಿನೋದನು ಆ ಎರಡೂ ಪಕ್ಷಿಗಳನ್ನು ತನ್ನ ಹೆಂಡತಿ ಪ್ರಭಾವತಿಗೆ ಕೊಟ್ಟು ದೇಶಾಂತರ ಹೊರಟು ಹೋಗುತ್ತಾನೆ. ಬಹುದಿನಗಳ ವಿಯೋಗದಿಂದಲೂ, ಸ್ವೈರಿಣಿಯರ ಪ್ರೇರಣೆಯಿಂದಲೂ ಕಾಮೋದ್ರೇಕಭರಿತಳಾದ ಪ್ರಭಾವತಿ ಪರಪುರುಷನೊಡನೆ ರಮಿಸಲು ಹೊರಟಾಗ ಸಾರಿಕೆ ಹಿತೋಪದೇಶಕ್ಕೆ ಮೊದಲು ಮಾಡಿತು. ಅವಳು ಕುಪಿತಳಾಗಿ ಅದನ್ನು ಕೊಲ್ಲಲು ಹೋದಾಗ ಅದು ತಪ್ಪಿಸಿಕೊಂಡು ಹೋಯಿತು. ಆದರೆ ಗಿಣಿ ಬಹು ಜಾಣತನದಿಂದ ಅವಳ ಕಾರ್ಯವನ್ನು ಪ್ರೋತ್ಸಾಹಿಸುವಂತೆ ನಟಿಸಿ, ಅವಳಿಗೆ ಒಂದು ಸಮಸ್ಯೆಯನ್ನು ತಂದೊಡ್ಡಿ, ಅದಕ್ಕೆ ನಿದರ್ಶನವಾಗಿ ಒಂದು ಕಥೆ ಹೇಳುತ್ತಿತ್ತು. ಆ ಕಥೆ ಮುಗಿದ ಕೂಡಲೇ ಪ್ರಭಾವತಿ ನಿದ್ದೆ ಹೋಗುತ್ತಿದ್ದಳು. ಎಪ್ಪತ್ತುದಿನಗಳ ನಂತರ ಅವಳ ಗಂಡ ಬಂದು ಸೇರುತ್ತಾನೆ.[76]

ದಾಕ್ಷಿಣಾತ್ಯ ಶುಕಸಪ್ತತಿಯ ಉಪೋದ್ಘಾತ ಪುರಾಣದೋಪಾದಿಯಲ್ಲಿದೆ- ಒಮ್ಮೆ ಒಡ್ಡೋಲಗಂಗೊಟ್ಟಿದ್ದ ದೇವೇಂದ್ರನು ತತ್ತ್ವದ ಸುಕರ ಸಾರವ ಕೇಳಬೇಕೆಂಬಿಚ್ಛೆಯಿದೆ ಯಾರು ತಿಳಿಸಬಲ್ಲರು ಎಂದು ನಾರದನನ್ನು ಕೇಳಲು, ನಾರದನು ಶುಕನಲ್ಲದೆ ಬೇರೆ ಯಾರಿಂದಲೂ ಸಾಧ್ಯವಿಲ್ಲ ಎನ್ನುತ್ತಾನೆ. ಅದನ್ನು ಅಗ್ನಿಯು ಪ್ರತಿಭಟಿಸಲು ಎಲ್ಲರೂ ಪರೀಕ್ಷಿಸುವ ಸಲುವಾಗಿ ಭೂತಳಕ್ಕಿಳಿಯುತ್ತಾರೆ. ಅಗ್ನಿಯು ವಹ್ನಿರಾಜನಾಗಿಯೂ, ದೇವೇಂದ್ರನು ದೇವದಾಸನೆಂಬ ಭೃತ್ಯನಾಗಿಯೂ, ಶಚಿಯು ಆ ಭೃತ್ಯುವಿನ ಪತ್ನಿಯಾಗಿಯೂ, ವಶಿಷ್ಠ ಮುನಿಯ ಸೂಚನೆಯಂತೆ ಶುಕಮುನಿಯು ಶುಕವಾಗಿಯೂ ಜನ್ಮ ತಳೆಯುತ್ತಾರೆ. ದೇವದಾಸನ ಪತ್ನಿಯ ಸೌಂದರ್ಯಾದಿಗಳನ್ನು ಕೇಳಿ ಮೋಹಗೊಂಡ ವಹ್ನಿರಾಜನು ಅವಳನ್ನು ಹೇಗಾದರೂ ಮಾಡಿ ವಶಪಡಿಸಿಕೊಳ್ಳಬೇಕೆಂದು ಚಿಂತಿಸಿ, ತನ್ನ ಭೃತ್ಯನಾದ ದೇವದಾಸನನ್ನು ಕರೆದು 'ಸಪ್ತಸಾಗರದಾಚೆಯ ಚಂದ್ರಿಕಾಗಿರಿಯಲ್ಲಿ ಶ್ರೀ ವಿಷ್ಣುವನ್ನು ಪೂಜಿಸಿ ಬಾ' ಎಂದು ಆಜ್ಞಾಪಿಸುತ್ತಾನೆ. ದೇವದಾಸನಿಗೆ ಶುಕವು ಏಳುಗರಿಗಳನ್ನು ಕೊಡುತ್ತದೆ. ಅದರ ಸಹಾಯದಿಂದ ಆತನು ಕೃತಕಾರ್ಯದಲ್ಲಿ ಯಶಸ್ವಿಯಾಗಿ ಎಪ್ಪತ್ತುದಿನ ಕಳೆದು ಹಿಂತಿರುಗುತ್ತಾನೆ. ಈ ಮಧ್ಯೆ ಅವನ ಪತ್ನಿಯನ್ನು ವಶಪಡಿಸಿಕೊಳ್ಳಲು ಬಂದ ರಾಜನನ್ನು ಶುಕವು ನಿತ್ಯವು ಕಥೆ ಹೇಳಲು ಪ್ರಾರಂಭಿಸುತ್ತದೆ. ಪ್ರತಿದಿನವು ಕಥೆ ಮುಗಿಯುವ ಕಾಲಕ್ಕೆ ಸರಿಯಾಗಿ ಬೆಳಗಾಗಿರುತ್ತದೆ. ರಾಜನು ನಾಳೆ ಬರೋಣವೆಂದು ಅಂದುಕೊಂಡು ಹಿಂತಿರುಗುತ್ತಿರುತ್ತಾನೆ. ಈ ರೀತಿ ಎಪ್ಪತ್ತು ಕಥೆಗಳು ಹೇಳಲ್ಪಟ್ಟವೆ.[77]

---

[76] ಮೋತಿಲಾಲ್ ಬನಾರಸಿದಾಸ್‌ರವರ ಸಂಸ್ಕೃತ ಗ್ರಂಥ–ಪುಟ 1–3 ಮತ್ತು ಪು. 151–152.

[77] ರಾಜನೀತಿ ಶುಕಸಪ್ತತಿ, ಗರಿ 2 ರಿಂದ 5, ಗರಿ 283–287.

## (ಅ) ಶರಜಾನಾಗಪ್ಪಯ್ಯನ ರಾಜನೀತಿ ಶುಕಸಪ್ತತಿ

ಇದು ಒಂದು ಧಾರ್ಮಿಕ ಕಾವ್ಯ; ನೀತಿಬೋಧಕ ಕೃತಿ. ಚೈತ್ರೇಯ ಕೃತಿಯಂತೆ ಕೇವಲ ಚಮತ್ಕಾರಯುಕ್ತ ಅಥವಾ ಕಾಮಪ್ರಚೋದಕ ಅಲ್ಲ. ಇದನ್ನು ಪೌರಾಣಿಕ ಪರಿಸರದಲ್ಲಿ ಕವಿ ವಿಸ್ತರಿಸಿಕೊಂಡು ಹೋಗಿದ್ದಾನೆ. ವ್ಯಾಸರು ಭೃಗು ಕುಮಾರನಿಗೆ ಅರುಹಿದಂತೆ ಕಾವ್ಯದ ಕಡೆಯಲ್ಲಿ ಕವಿ ಹೇಳಿದ್ದಾನೆ.

ಮೊದಲನೆಯದು ನಾಂದಿಪದ ಸಂಧಿ : ಇದರಲ್ಲಿ ಹದಿನಾರು ಪದ್ಯಗಳಿವೆ.

ಆರಂಭದಲ್ಲಿ—

ಶ್ರೀ ಶಿವನ ಸುಕುಮಾರ ಸಕಲ ಸು
ರಾಸುರಾರ್ಚಿತ ಪಾದಪದ್ಮ ವಿ
ಶೇಷ ಗುಣಯುತ ವಿಮಲ ಗಾತ್ರ ವಿಚಿತ್ರ ಚಾರಿತ್ರ ||
ಮೂಷಕಪ್ರಿಯಮುದವಿವರ್ಧನ
ಪಾಶ ಮೋದಕ ಪರಶುಧರ ವಿ
ಘ್ನೇಶ ದಯದಿಂದೊಲಿದು ಕರುಣಿಸು ಮತಿಗೆ ಮಂಗಲವಾ ||೧||

—ಎಂದು ಶ್ರೀ ವಿಘ್ನೇಶ್ವರನನ್ನು ಪ್ರಾರ್ಥಿಸಿದ್ದಾನೆ. ಅನಂತರ-

ಮೃಡನಿಗೆ, ಶ್ರೀ ವಿಷ್ಣು, ಬ್ರಹ್ಮ, ಕ್ರೋಡಪುರದ ಶಂಕರನಾರಾಯಣ, ಅಂಬ, ಲಕ್ಷ್ಮಿ, ಶಾರದೆ, ಷಣ್ಮುಖ, ವೀರಭದ್ರ, ಭಾಸ್ಕರ, ಪ್ರಹ್ಲಾದ, ನಾರದ, ಪರಾಶರ, ಪುಂಡರೀಕ, ವೇದವ್ಯಾಸಾದಿಗಳಿಗೆ ವಿನಂತಿಸಿಕೊಂಡಿದ್ದಾನೆ.

ಹರಕವಿಗಳಂಘ್ರಿಯನು ಧ್ಯಾನಿಸಿ
ಹರಿಕವಿಗಳಡಿಗೆರಗಿ ಮತ್ತಾ
ವರಕವಿಗೆ ತಾನಮಿಸಿ ಗುರುಕಟಾಕ್ಷದಲಿ ||
ಹರುಷದಿಂ ಶುಕನಗ್ನಿ ಭೂಭುಜ
ಗರುಹಿದತಿ ಕೌಶಲ್ಯ ಕಥೆಯನು
ವಿರಚಿಸುವೆನಿದನಾದರದಿನಾ (ಲಿ) ಪುದು ಸಜ್ಜನರು || ||೩||

ಎರಡನೆಯದು ಪೀಠಿಕಾ ಸಂಧಿ. ಇದರಲ್ಲಿ ಇಪ್ಪತ್ತಾರು ಪದ್ಯಗಳಿವೆ. ಕವಿ ಇಲ್ಲಿ ಕಥೆಯ ಉಪೋದ್ಘಾತವನ್ನೆತ್ತಿಕೊಂಡಿದ್ದಾನೆ. ದೇವೇಂದ್ರ ಸಭೆಯಲ್ಲಿ ನಡೆದ ಅಗ್ನಿ, ನಾರದರ ಸಂವಾದ, ತತ್ಪರಿಣಾಮವಾಗಿ ಭೂಲೋಕದಲ್ಲಿ ಅಗ್ನಿ ವಹ್ನಿರಾಜನಾಗಿಯೂ, ದೇವೇಂದ್ರನು ದೇವದಾಸನೆಂಬ ಭೃತ್ಯನಾಗಿಯೂ, ಶಚೀದೇವಿಯು ಅವನ ಧರ್ಮಪತ್ನಿ

ಯಾಗಿಯೂ, ಶುಕಮುನಿಯು ಗಿಳಿಯಾಗಿಯೂ ಅವತರಿಸಿದ ಕಥಾವತಾರವನ್ನು ತಿಳಿಸಿದ್ದಾನೆ. ಕಥೆ ಬೇಗ ಬೇಗ ಓಡುತ್ತದೆ.

ಒಂದು ದಿನ ವಹ್ನಿರಾಜನು ವೈಭವದ ಮಂದಿರಕ್ಕೆ ಬಂದು ಓರ್ವ ಚಾರನು, "ದೇವದಾಸನ ಭವನದಿರವನು, ತತ್ಸುತೆಯ ಸೌಂದರ್ಯಾದಿ ಗುಣ"ಗಳನ್ನೂ ವಿವರಿಸಿ "ರಾಜೇಂದ್ರ ನಿನಗಾ ಯುವತಿ ತಕ್ಕವಳು."

ರೂಪಿನಲಿ ಹರಿಪತ್ನಿ, ಗುಣದ
ಲ್ಲಾ ಪಿನಾಕಿಯ ರಾಣಿ, ಶಾಸ್ತ್ರಕ
ಲಾಪದಲ್ಲಜನರಸಿ, ತಾನಾ ಚಂದ್ರಸದೃಶಮುಖಿ ||
ಚಾಪಲಾಂಬಕಿ, ಚಾರುನಾಸೆ, ಮಾ
ಯಾ ಮಹೋದರೆ, ಮಂದಗಾಮಿನಿ
ಕೋಮಲಾಂಗಿಯೆನುತ್ತ ಸೂಚಿಸಿದಾ || || ೧೩ ||

ಆ ಬಣ್ಣನೆಗೆ ಬೆರಗಾಗಿ–"ಬಳಿಕಲಾ ವಹ್ನೀಂದ್ರ ಚಾರರ ಕಳುಹಿ ಕಾಮೋದ್ರೇಕದಿಂದಾ ನಳಿನಲೋಚನೆಯನು ಪರಿಗ್ರಹಿಸುವೆನು ನಾನೆಂದು" ನಿಶ್ಚಯಿಸಿ ತಡಮಾಡದೆ "ದೇವದಾಸನ ಬಳಿಗೆ ದೂತರನಟ್ಟಿ ಕರಸಲು" ದೇವದಾಸನು ಬಂದು ಪ್ರಭು ಸನ್ನಿಧಿಯಲ್ಲಿ ಕೈಮುಗಿದು ನಿಲ್ಲಲು, ರಾಜನು ಅನೇಕ ತತ್ತ್ವಗಳನ್ನು ಹೇಳಿ,

"ನಾನು ಬೆಸಸಿದ ಕಾರಿಯಕ್ಕನು
ಮಾನಿಸದೆ ನೀನ್ನೈದಿ ವಸ್ತುವ
ಸಾನುರಾಗದಿ ಕೂಡಿಕೊಂಡಿಷ್ಟವನು ಸಲಿಸಿದರೆ ||
ಯೇನಬೇಕದನೀವೆ ತಪ್ಪುವ
ಹೀನ ಗುಣವೆನಗಿಲ್ಲ ಬದುಕಿಗೆ
ನೀನೆನಿಸೆ ನಾನಡಸಿಕೊಂಬೆನು ನಂಬಿ ನೋಡೆಂದಾ || || ೧೭ ||

ಅದಕ್ಕೆ "ಊಳಿಗವೇನು ಅಪ್ಪಣೆಯಾಗಲಿ" ಎನ್ನುತ್ತಾನೆ ಭೃತ್ಯ. ಆಗ—

ವನಧಿಯೇಳನು ದಾಂಟಿ ಚಂದ್ರಿಕೆ
ಯೆನಿಪ ಗಿರಿಯನು ಪೊಕ್ಕು ವಿಷ್ಣುವ
ನನಶನಂ ವ್ರತದಿಂದ ಪೂಜಿಸೆ ಸಿದ್ಧಿಕರವೆಂದಾ || || ೧೮ ||

ದೇವದಾಸನು ಪ್ರಭುವಾಜ್ಞೆಯನ್ನು ಶಿರದಲ್ಲಾಂತು ತನ್ನ ಮನೆಗೆ ಹಿಂತಿರುಗುತ್ತಾನೆ. ರಾಜಾಜ್ಞೆಯನ್ನು ತನ್ನ ಮನೆಯಲ್ಲಿದ್ದ ಶುಕನಿಗೆ ಉಸುರುತ್ತಾನೆ. ದಿವ್ಯ

ಜ್ಞಾನಿಯಾದ ಶುಕವು ಭವಿಷ್ಯತ್ತನ್ನು ನೆನೆದು, ದೇವದಾಸನಿಗೆ ಅಭಯವಿತ್ತು, ಆಶೀರ್ವದಿಸಿ, ತನ್ನ ರೆಕ್ಕೆಯ ಏಳು ಗರಿಗಳನ್ನು ಮಂತ್ರಿಸಿ ಕೊಡುತ್ತದೆ. ಹೆಂಡತಿಯ ಕಂಬನಿಯ ತೊಡೆದು, ಎಲ್ಲರಿಂದಲೂ ಬೀಳ್ಕೊಂಡವನಾಗುತ್ತಾನೆ ದೇವದಾಸ.

ಗರಿಯ ಮಹಿಮೆಯ ಸೇನನೆಂಬೆನು
ಶರಧಿ ಏಳನು ದಾಂಟಿಸಿತು ಪರ
ತರದೊಳೊಪ್ಪುವ ಚಂದ್ರಿಕಾಗಿರಿಗೈದಿದನು ಬಳಿಕ ||
ವರ ಮುಕುಂದನ ಪೂಜೆಯಲಿ ತ
ತ್ಪರನು ತಾನೆನಿಸಿರ್ದನಾತನ
ತರುಣಿ ಗೌರಿಯನೋಸುತಿರ್ದಳು ತನ್ನ ಮನೆಯೊಳಗೆ || || ೨೫ ||

—ಕವಿ ಕಥೆಯನ್ನು ಬೇಗ ಬೇಗ ಓಡಿಸುತ್ತಾನೆ.

ಮೂರನೆಯ ಸಂಧಿಯ ಆರಂಭದಲ್ಲಿ—

ಮನುಮಥೋದ್ರೇಕದಲಿ ಭೃತ್ಯನ
ಮನೆಗೆ ನಡೆದನು ನೃಪತಿಯಾ
ತನ ಮಡದಿಯೊಡಬಡದಿರಲು ಮರಳಿದು ಬಂದನರಮನೆಗೆ ||

(ಸಂಧಿ ೩, ಪಲ್ಲವಿ, ಗರಿ. ೫)

ಎಂಬ ಸೂಚನಾಪದ್ಯದಲ್ಲಿ ಆ ಭಾಗದ ಸಾರಾಂಶವನ್ನು ತಿಳಿಸಿದ್ದಾನೆ.

ಸಂಜೆ ರಂಜಿಸುವ ದೀಪದ ಬೆಳಕಿನಲಿ ಪಹ್ನಿರಾಜನು ದೇವದಾಸನ ಮನೆಗೆ ನಡೆದು ದೇವದಾಸನ ಹೆಂಡತಿಯ ಮುಂದೆ ತನ್ನ ಬೇಡಿಕೆಯನ್ನಿಟ್ಟು, ವೇದಾಂತದ ಕಟ್ಟು ಬಿಚ್ಚುತ್ತಾನೆ.

ಬಿಸಿಲು ತಾಕಿದರೆ ಬಟ್ಟೆಗೆ ಮುಪ್ಪು, ಬಿಟ್ಟು ತಿರುಗಿದ ಮನುಷ್ಯನಿಗೆ ಮುಪ್ಪು, ಕಟ್ಟಿ ಹಾಕಿದರೆ ಕುದುರೆಗೆ ಮುಪ್ಪು, ಅದೇ ರೀತಿ "ಕುಶಲ ರತಿ ಸುಖವಿಲ್ಲ"ದಿದ್ದರೆ "ಅಂಗನೆಯ ಎಸೆವ ದೇಹಕೆ ಮುಪ್ಪು" ಎಂತಲೂ "ಪ್ರೀತಿಯೋ ನಿಜವಾಗಿರದು ಕೇಳ್ ನಿನ್ನಾತನಿರವನು ಬಲ್ಲೆನ್, ಎಲೆಗೇ ನೂತನದ ಸುಖವಿಲ್ಲ ಕಾಣದು ಕಾಂತೆ ಕೇಳ್" ಎಂತಲೂ "ಹೊಕ್ಕು ನಡೆಯುದರಾರು ನಿನ್ನನು ಸಕ್ಕರೆಗೆ ನೊಣ ಮುತ್ತದೇ? ಯಾತಕ್ಕೆ ಕಷ್ಟಂ ಬಿಡುತಲಿಹೆ ನೀ ಮನವ ಮಾಡು" ಎಂತಲೂ, ಪರಿಪರಿಯಾಗಿ ಅವಳನ್ನು ಕಾಡಿ ಬೇಡುತ್ತಾನೆ.

ಇದೆಲ್ಲವನ್ನೂ ಕೇಳುತ್ತಿದ್ದ ಶುಕನು "ಎಲೆಲೆ ಪೃಥ್ವೀಶ ನಿನಗೀ ಬುದ್ಧಿ ಬಂದುದು ಕಡು ವಿಚಿತ್ರವಲೆ. ದೋಷವಾರಲಿ ಒಪ್ಪದವರನು ಘಾತಿಸುವ ಕರ್ತವ್ಯ ನಿನ್ನದು ಹೇಸಿ ಮನವನು ಬಿಟ್ಟು ನೀನೇ ತಿಳಿದು ನೋಡೆಂದು" ಅವನಿಗೆ ಒಂದು ಕಥೆಯನ್ನು ಹೇಳಲು ಆರಂಭಿಸುತ್ತದೆ.

ಇಲ್ಲಿಂದ ಮುಂದೆ ಗಿಳಿ ಹೇಳಿದ ಎಪ್ಪತ್ತು ಕಥೆಗಳನ್ನೂ ಕವಿ ನಾಗಮಂತ್ರಿಯು ಮುಂದಿನ ಎಪ್ಪತ್ತು ಸಂಧಿಗಳಲ್ಲಿ ವರ್ಣಿಸಿದ್ದಾನೆ.

ಒಂದು ಸಂಸ್ಕೃತದ ಸಂಗ್ರಹಸೂಚಿಯಂತೆ[78] ಇಲ್ಲೂ ಎಪ್ಪತ್ತು ಕಥೆಗಳು ಚಿತ್ತರಗೊಂಡಿವೆ. ಅವುಗಳ ಪಟ್ಟಿಯನ್ನಿಲ್ಲಿ ಗಮನಿಸಬಹುದು :–

೧. ಸನ್ಯಾಸಿಯ ಕಥೆ
೨. ಸ್ತ್ರೀ ಸಾಹಸ
೩. ಶ್ರೀ ಶೈಲಮಹಾತ್ಮ್ಯೆ
೪. ರಾಜಕೀಯ ಗಾಥೆ
೫. ವಿಪ್ರಗಾಥೆ
೬. ಪಿತೃಪುತ್ರರ ಸಂವಾದ
೭. ಶೂದ್ರ ಮಹಾತ್ಮ್ಯೆ
೮. ಇಂದು ಪುಷ್ಕರಣಿಯ ಮಹಿಮೆ
೯. ವರುಣೋಪಾಖ್ಯಾನ
೧೦. ಬ್ರಾಹ್ಮಣ ಕುಮಾರನ ಕಥೆ
೧೧. ಬ್ರಹ್ಮರಾಕ್ಷಸ–ಮದವಣಿಗರ ಸಂವಾದ
೧೨. ಪತಿವ್ರತಾಮೃತ್ಯು ಸಂವಾದ

---

[78] ಕರಾಗ್ರೇಣ ಶುಕಂ ಸ್ಪೃಷ್ಟ್ವಾ ವಸಿಷ್ಠೋ ವಾಕ್ಯಮಬ್ರವೀತ್
ಕಥಾನಾಂ ಪೂರ್ವಮುಕ್ತಾನಾಂ ಮಧ್ಯೇಕಾಂಚಿದ ಸಮ್ಮಿತಾಂ ॥
ಯಶೃಣೋತಿ ನರೋಲೋಕೇ ಸಮುಕ್ತಃ ಪರಮಂಪದಂ
ಪ್ರಥಮ ಮುನಿವೈರಾಗ್ಯಂ ದ್ವಿತೀಯಂ ಸಾಹಸಂ ಸ್ತ್ರಿಯಃ ॥

ಶ್ರೀಶೈಲಸ್ಯೈವ ಮಹಾತ್ಮ್ಯಂ ತೃತೀಯಂ ಪರಿಕೀರ್ತಿತಃ
ಚತುರ್ಥಂ ರಜಕೀಗಾಥಾ ವಿಪ್ರಸ್ಯೈವತು ಪಂಚಮಂ ॥
ಪಿತಾಪುತ್ರಸ್ಯ ಸಂವಾದಂ ಷಷ್ಠಂಚ ಪರಿಕೀರ್ತಿತಃ
ಸಪ್ತಮಂ ಶೂದ್ರಮಾಹಾತ್ಮ್ಯಂ ಸಾಗರಂ ಚ ಅಷ್ಟಮಂ ತಥಾ ॥

೧೩. ದ್ರಾಕ್ಷಾರಾಮಕ್ಷೇತ್ರ ಮಹಾತ್ಮ್ಯೆ
೧೪. ಸುಂದೋಪಸುಂದರ ವೃತ್ತಾಂತ
೧೫. ಪದ್ಮಿನೀ ಮೊದಲಾದ ಸ್ತ್ರೀಗಳ ಕಥೆ
೧೬. ಶಕುಂತಲೋಪಾಖ್ಯಾನ
೧೭. ಅಹಲ್ಯಾವೃತ್ತಾಂತ
೧೮. ಅನುಸೂಯ ಮಹಾತ್ಮ್ಯೆ
೧೯. ಅಂಬರೀಷೋಪಾಖ್ಯಾನ
೨೦. ಪುತ್ರನಿಗೆ ಧರ್ಮಬೋಧನೆ
೨೧. ಜಾಬಾಲಿ ಸಂವಾದ–ಸಂಸಾರ ಸ್ವರೂಪ
೨೨. ಹಲ್ಲಿಯಾದ ಪತಿವ್ರತೆಯ ವೃತ್ತಾಂತ
೨೩. ಲೋಪಾಮುದ್ರೆಯ ಕಥೆ
೨೪. ದೇಶಭೇದಗಳು- ಚಂದ್ರನ ಕಥೆ
೨೫. ಕೃತಘ್ನತಾಲಜಂಘನ ಕಥೆ
೨೬. ರಾಮಾಯಣ ಕಥೆ
೨೭. ಕರ್ಮವಿಪಾಕ–ಕುಸುಮಾಚಲ ಮಹಾತ್ಮ್ಯೆ.
೨೮. ಧರ್ಮಪಾಲನೆಂಬ ಅರಸಿನ ಕಥೆ–ಪತ್ನೀತ್ಯಾಗ ದೋಷ
೨೯. ಶಿಷ್ಯೋಪದೇಶ, ಗುರುಬೋಧೆ
೩೦. ರಾವಣನ ಕಥೆ

---

ದೇವಸ್ವಾಮೀತಿ ನವಮಂ ದಶಮಂ ಬ್ರಹ್ಮರಾಕ್ಷಸಂ
ಏಕಾದಶಂ ಮೃತ್ಯುರೂಪಂ ವಾರುಣಂ ದ್ವಾದಶಂ ತಥಾ ॥
ದಾಕ್ಷಾರಮೇಶ್ವರಂ ಚೈವ ಕಥಂ ಸುಂದೋಪಸುಂದಯೋಃ ।
ಸ್ತ್ರೀ ಜಾತಕಂ ತಥಾ ಪ್ರೋಕ್ತಂ ಷೋಡಷಂತು ಶಕುಂತಲಾ ॥
ಕಲಾಶಾಸ್ತ್ರಂತು ಸಪ್ತದಶಂ ಅನುಸೂಯಾ ಕಥಾ ತಥಾ
*        *        *        *        *
*        *        *        *        *
*        *        *        *        *

ತ್ರಯೋವಿಂಶತ್ಬಂಧನಂ ಚ ದೇಶಭೇದಾಃ ತತಃಪರಂ
ಕೃತಘ್ನಂ ಪಂಚವಿಂಶತ್ಯಾಂ ರತ್ನಲಕ್ಷಣಕಂ ತಥಾ ॥
*        *        *        *        *
*        *        *        *        *

ತ್ರಿಂಶದ್ವೇದವತೀ ಗಾಥಾ ಉಕ್ತಾ ಪರಮ ಶೋಭನಾ ॥
ಪಾತಿವ್ರತ್ಯಂ ತತಃ ಪಶ್ಚಾತ್ ವೇಶ್ಯಾಮಹಾತ್ಮ್ಯ ಮೇವಚ
ತ್ರಯಃ ತ್ರಿಂಶತ್ ಯಮಪುರಂ ತತಸ್ತು ಲಕ್ಷ್ಮಿ ಸಂಭವಃ ॥

---

ದೀರ್ಘಧ್ವಜ ಇತಿ ಖ್ಯಾತಂ ಕಾರ್ತೀಕಸ್ಯ ಶುಭಾವಹಂ ।
ವೈಶಾಖ ಮಾಘ ಮಹಾತ್ಮ್ಯಂ ಗಯಾಮಹಾತ್ಮ್ಯಮೇವಚ
ಕಾಶೀ ಮಹಾತ್ಮ್ಯಕಂ ಚೈವ ಪ್ರಯಾಗಾಖ್ಯಾಮನಂತರಂ
ಚಿದಂಬರಂ ತತಃ ಪಶ್ಚಾತ್ ಸಾಮುದ್ರಿಕಮತಃ ಪರಂ ॥
ಶ್ವೇತೋಪಾಖ್ಯಾನಕಂ ಚೈವ ತತಸ್ತ್ವೇಕಾದಶೀವ್ರತಂ
ರಜಸ್ವಲಾ ಕಥಾಚೈವ ಶ್ರಾದ್ಧವಿಸ್ತಾರ ಮೇ ವಚ ।
ದ್ರವ್ಯಶುದ್ಧಿಃ ತತಃ ಪಶ್ಚಾತ್ ಅಶೌಚಂ ತದನಂತರಂ ।
ತಥೋ ವರ್ಣಾಶ್ರಮಾಚಾರೋ ಗೃಹಧರ್ಮಾಃ ತತಃ ಪರಂ ।
ಪುರಾಣಶ್ರವಣಂ ಚೈವ ಸರ್ವೇಶಾಮನಾಕೀರ್ತಿತಂ ॥
ವಂಧ್ಯಾಸ್ನಾನಂ ತತಃ ಪಶ್ಚಾತ್ ಧನಾರ್ಜಮನಂತರಂ
ಪುತ್ರ ಗೋಪಾಲಕಂ ನಾಮ ವ್ರತಂ ಪುತ್ರಪ್ರದಾಯಕಂ ।
ಗೋಪಾಲ ಪ್ರತಿಮಾದಾನಂ ಅದ್ಭುತಾಶ್ಯ ತತಃ ಪರಂ
ದಾನಪ್ರಕರಣಂ ಚೈವ ವ್ಯವಹಾರಃ ತತೇಃ ಪರಂ
ಪ್ರಾಯಶ್ಚಿತ್ತಂ ತತಃ ಪ್ರೋಕ್ತಂ ರೋಗಾಶ್ಚೈವ ತತಃ ಕ್ರಮಾತ್
ಯುಗಧರ್ಮಾಸ್ತತಃ ಪಶ್ಚಾತ್ ಪ್ರಯತ್ನೇನ ಪ್ರಕೀರ್ತಿತಾಃ ॥
ಪಿತಾ ಪುತ್ರಸ್ಯ ಸಂವಾದೋ ಭೃಗುವಾರ್ರುಣಕಂ ತಥಾ

---

ಜ್ಞಾನೋಪದೇಶನಂ ನಾಮ ತಥಾ ಬ್ರಹ್ಮೋಪದೇಶನಂ
ತತ್ತ್ವರೋಧಾಸ್ತತಃ ಪಶ್ಚಾತ್ ಸಂನ್ಯಾಸಸ್ತದನಂತರಂ
ಯತಿಧರ್ಮಾಸ್ತಥಾಪ್ರೋಕ್ತಾ ವ್ಯಾಸಪೂಜಾತತಃ ಪರಂ
ಯೋಗಮಾರ್ಗಸ್ತತಃ ಪಶ್ಚಾತ್ ಕಥಾನಾಂ ಸಂಹಿತಸ್ತಥಾ
ಏತಾಸಾಂ ಶ್ರವಣಾದ್ವಾಪಿ ಪಠನಾದ್ವಾ ವಿಶಾಂಪತೇ
ಸರ್ವಪಾಪ ವಿನಿರ್ಮುಕ್ತಃ ಸಯಾತಿ ಪರಮಂ ಪದಂ
—ಮದ್ರಾಸಿನಲ್ಲಿರುವ ಆಂಧ್ರಾಕರದ ಓಲೆ ಪುಸ್ತಕ ನಂ. ಡಿ. 12212.

ಈ ಕಥೆಗಳೂ ಮೂಲ ಕಥೆಗಳೂ ನಿರೂಪಣಾತಿಯಲ್ಲಿ ಯಾವ ವ್ಯತ್ಯಾಸವನ್ನೂ ಪಡೆದಿಲ್ಲ. ಆದರೆ ಕೆಲವು ಕಥೆಗಳು ಸ್ಥಾನಪಲ್ಲಟವಾಗಿವೆ ಅಷ್ಟೆ.[79]

ನೀತಿಬೋಧಕ ಸಾಹಿತ್ಯಕ್ಷೇತ್ರದಲ್ಲಿ ಶುಕಸಪ್ತತಿಗೆ ಒಂದು ವಿಶಿಷ್ಟ ಸ್ಥಾನ ಮೀಸಲಿದೆ. ಭಾರತೀಯ ನೀತಿ ಸಾಹಿತ್ಯದಲ್ಲಿ ಪಂಚತಂತ್ರವನ್ನು ಬಿಟ್ಟರೆ ಇದೇ ಎರಡನೆಯದು. ಆದರೆ ಪಂಚತಂತ್ರದಷ್ಟು ಜನಪ್ರಿಯವಾಗಿಲ್ಲ ಈ ವೇದಾಂತ ಶುಕಸಪ್ತತಿ. ಕಾರಣ ಪಂಚತಂತ್ರ ಜಾನಪದ ಕೃತಿ. ಶುಕಸಪ್ತತಿ ಪುರಾಣ ಪುಣ್ಯ ಕಥೆಗಳಿಂದ ಆರಿಸಿ ತೆಗೆದು ಕೋದಕೃತಿ. ಅಲ್ಲಿ ಬದುಕಿನ ಬಹು ಮುಖಗಳನ್ನು ಕುರಿತ ಚಿತ್ರಣ ಇದೆ; ವೈವಿಧ್ಯಪೂರ್ಣ ವಿಡಂಬನೆ ಇದೆ; ಆದರೆ ಇಲ್ಲಿ 'ಕಾಮ'ವೊಂದರ ಅನಾಹುತ ಬಿಟ್ಟರೆ ಬೇರೇನೂ ಇಲ್ಲ. ಅಲ್ಲದೆ ಇಲ್ಲಿ ಗಿಳಿ ಒಂದೇ ಆದ್ಯಂತ ಕಥೆ ಹೇಳಿದರೆ, ಅಲ್ಲಿ ಹತ್ತೆಂಟು ಪಶುಪಕ್ಷಿ ಪ್ರಾಣಿಗಳು ಕಥೆ ಹೇಳುತ್ತವೆ. ಇಂಥವು ಹಲವು ಅಂಶಗಳನ್ನು ಗಮನಿಸಬಹುದು.

ಶುಕಸಪ್ತತಿ ಮೂಲತಃ ನೀತಿಬೋಧಕ ಕಾವ್ಯ. ಆದರೆ, ನೀತಿ ಬೋಧನೆಯ ಕಹಿಗುಳಿಗೆಗೆ ಶೃಂಗಾರದ ಸಕ್ಕರೆ ಅಂಗಿಯನ್ನು ತೊಡಿಸಲಾಗಿದೆ. ಮನರಂಜನೆಯ ಜೊತೆಯಲ್ಲಿ ಮಾನವೀಯತೆಯನ್ನು ಬೋಧಿಸಿ, ಸನ್ಮಾರ್ಗಾವಲಂಬಿಯಾಗುವಂತೆ ಓದುಗನನ್ನು ಪ್ರೇರಿಸುವುದೇ ಕವಿಯ ಮೂಲೋದ್ದೇಶವೆನಿಸಿದೆ. ಅಲ್ಲದೆ ಇದು ವೇದ ಶಾಸ್ತ್ರಾದಿಗಳ ಸಾರಸರ್ವಸ್ವವೆಂದೂ, ಮೋಕ್ಷಕ್ಕೆ ಸಾಧನವೆಂದೂ ಕವಿ ಹೇಳಿದ್ದಾನೆ. ಕಾಮದಿಂದಾಗುವ ಅನಾಹುತಗಳನ್ನೂ, ಸತ್ಯ, ಧರ್ಮಗಳಿಂದ ಲಭಿಸುವ ಪುಣ್ಯ ಫಲಗಳನ್ನೂ, ಕೈವಲ್ಯವನ್ನೂ ಆದ್ಯಂತವೂ ಅವಕಾಶ ಸಿಕ್ಕಾಗಲೆಲ್ಲಾ ಹೇಳಿಕೊಂಡು ಬಂದಿದ್ದಾನೆ....

ಕಾಮದಿಂ ಧನ ಕೆಡುಗು ಮತ್ತಾ
ಕಾಮದಿಂ ಚ್ಯುತಿಯಹುದು ಮಾನವು
ಕಾಮದಿಂ ಮಂಗಲವು ಪೋಪುದು ಪಚ್ಚಿಯೊಂದದಲಿ
ಕಾಮವೇ ದಹಿಸುವುದು ದೇಹವ
ಕಾಮವಾರಿಗೆ ಸುಖವ ಕೊಡುವುದು
ಕಾಮವನು ಬಿಡು ಕಾಮದಲಿ ಕೆಡಬೇಡ ನೀನೆಂದಾ ||

(ಸಂಧಿ ೪, ಪದ್ಯ ೫)

ಶುಕನ ಉಪದೇಶ ಸಾರ್ವಕಾಲಿಕ ಸತ್ಯ ಹಾಗೂ ಸರ್ವಮಾನ್ಯವಾದುದೂ ಹೌದು.

ಕವಿ ತುಂಬಾ ಪ್ರಾಮಾಣಿಕ. ಯಾವೆಡೆಯಲ್ಲೂ ತಾನು ಸ್ವಾತಂತ್ರ್ಯವಹಿಸದೆ

---

[79] ಕಥಾಸಂಖ್ಯೆ 9, 11, 12, 22, 23, 37, 38, 39 ಇತ್ಯಾದಿ.

ಮೂಲಕ್ಕೆ ವೈಲಿಗೆ ಬರದಂತೆ ಸರಳವಾದ ಮಾತುಗಳಲ್ಲಿ ಯಥವತ್ತಾಗಿ ಅನುವಾದ ಮಾಡಿದ್ದಾನೆ.

ಉದಾಹರಣೆಗೆ ಸಂಸ್ಕೃತದ—

ಪಿತಾರಕ್ಷತಿ ಕೌಮಾರೇ ಭರ್ತಾ ರಕ್ಷ ಯೌವನೇ ।
ರಕ್ಷಂತಿ ಸ್ಥವಿರೇ ಪುತ್ರಾಃ ನಸ್ತ್ರೀ ಸ್ವಾತಂತ್ರ್ಯಮರ್ಹತಿ ॥

(—ಮನುಸ್ಮೃತಿ IX, III)

ಎಂಬ ಶ್ಲೋಕವು—

ತಂದೆ ತಾಯಿಗಳು ಬಾಲ್ಯದಲಿ ಮಿಗೆ
ಛಂದದಿಂದಿಹ ಯುವ್ವನದಿ ಮಿಗೆ
ತಂದ ಗಂಡನ ವಶದಲಹುದೀ ನೀತಿ ಮುಪ್ಪಿನಲಿ ॥
ನಂದನರ ಕರ್ತೃತ್ವವಲ್ಲದೆ
ಯೆಂದಿಗೂ ಸ್ವಾತಂತ್ರವುಂಟೇ
ಯೆಂದು ಕಂಬನಿಗರೆದುದಂತಃಪುರಕೆ ಗಮಿಸಿದಳು ॥ (೪-೩೬)

—ಎಂದು ಕನ್ನಡ ರೂಪು ತಳೆದಿದೆ.

ಶರಜಾ ನಾಗಪ್ಪಯ್ಯನ ಕವಿತಾಶಕ್ತಿ ಮೆಚ್ಚುವಂಥದು.

ಮನುಮಥನ ಸಂಗಾತಿಯಂದದಿ
ಮಿನುಗುತಿರ್ದುದು ಹುಬ್ಬು
ಕರ್ನಗಳನುಪಮದ ಶ್ರೀಕಾರಕೆಣೆ ತುಟಿ ಹವಳಕೆಣೆಯೆನಿಸುವುದು (೪-೧೬)

ಎಂಬಲ್ಲಿ ಅವನ ಪ್ರತಿಭೆ ಮಿಂಚಿದೆ. ಅಂತೆಯೇ ಕಿವಿಗಳನ್ನು 'ಶ್ರೀ' ಕಾರಕ್ಕೆ ಹೋಲಿಸಿರುವುದು ಕಣ್ಣಿಗೆ ಕಟ್ಟುವ ಚಿತ್ರವಾಗಿದೆ.

ಶುಕನ ಕಥೆಯನ್ನು ಕೇಳುತ್ತಿದ್ದಂತೆಯೇ ಬೆಳಕು ಹರಿಯಲು, ನಿರಾಶನಾದ ವಹ್ನಿರಾಜನು, 'ಮನದನೋವಲಿ ಮುಸುಕ ಮನದಲಿ ಮೊನೆ ಮುರಿದ ಶರವಾಗಿ ಬಂದರಮನೆಗೆ ತಾಂ ಪೊಕ್ಕು ತನ್ನಯ ಗೃಹವಸಾರಿದನು.'

—ಎಂಬಲ್ಲಿ 'ಮೊನೆ ಮುರಿದ ಶರವಾಗಿ' ಎಂಬ ರೂಪಕದ ಔಚಿತ್ಯವನ್ನೂ ಗಮನಿಸಬಹುದು.

ಮಗನಿಗಾಗಲಿ ಮಗಳಿಗಾಗಲಿ
ಮಗಳ ಕೈವಿಡಿದವಳಿಗಾಗಲಿ
ಮಿಗಿಲೆನಿಸುವನು ಜಾತನಾಗಲಿ ಧರ್ಮಬುದ್ಧಿಯದೂ ॥ (೭-೮)

ಎಂಬಲ್ಲಿನ ಲಾಲಿತ್ಯವನ್ನೂ,

ಅಂಬೆಯಮರ ಕದಂಬೆ ವಿಶ್ವಕು
ಟುಂಬೆ ಘನ ಕುಚಕಾಂಬೆ ಮಿಸುನಿಯ ಬೊಂಬೆ ನಿರ್ದಂಬೆ ||
(ನಾಂದಿಪದ ಸಂಧಿ. ಪ. ೬)

ಎಂಬಲ್ಲಿನ ಕವಿಯ ಪದಚಮತ್ಕಾರ ಹಾಗೂ ಪ್ರಾಸಪ್ರಿಯತೆಯನ್ನೂ ಗಮನಿಸಬಹುದು. ಇಂಥಹ ಹಲವು ಯಮಕವೇ ಮೊದಲಾದ ಉತ್ತಮ ಶಬ್ದಾಲಂಕಾರಗಳು ಈ ಕಾವ್ಯದಲ್ಲಿ ಕಾಣಸಿಗುತ್ತವೆ.

ಶರಜಾ ನಾಗಮಂತ್ರಿಯ ಸಮಕಾಲೀನ ಪ್ರಜ್ಞೆ ತುಂಬಾ ಮೆಚ್ಚುವಂಥದು. ಕವಿ ಶೈವಬ್ರಾಹ್ಮಣ; ಇರುವುದು ಶಿವಭಕ್ತನ ಆಸ್ಥಾನದಲ್ಲಿ ಆದ್ದರಿಂದ—

ಶಿವನ ದರುಶನವಿಲ್ಲದುಣದಿರು
ಶಿವನ ಪೂಜೆಯವೇ ತ್ರಿಕಾಲವು
ಶಿವಕರದ ಮನದಲ್ಲಿ ವಿರಚಿಸು ಶಿವನು ತೋರಿಸಿದಾ ||
ಶಿವನ ಕರುಣವ ಪಡೆದು ನೀನಿರು
ಶಿವನು ಚಿನ್ಮಯನೈಸೆ ಮತ್ತಾ
ಶಿವನ ನೆನೆದೆವನೆಯಿದ ಬಿಡದಿರು ಮರೆಯಬೇಡೆಂದಾ || (೭೨-೧೩)

ನುಡಿ ನುಡಿಗೆ ಶಿವಯೆನ್ನು ಮಿಗೆ ವೈ
ತೊಡಕಿನಲಿ ಶಿವಯೆನ್ನು ನೀಕು
ತ್ತಿಡುವ ಸಮಯದೊಳೊಂದಕೊಂದೊಂದಾಗಿ ಶಿವಯೆನ್ನು ||
ಎಡಹಿದಡೆ ಶಿವಯೆನ್ನು ಶೀನುಗ
ಳೊಡನೆ ಶಿವ ಶಿವಯೆನ್ನು ಕೊಡುವುದ
ನಡಿಗಡಿಗೆ ಶಿವಯೆನ್ನಿತ್ತೆನೆಂಬುದು ಬಿಡಲು ಬೇಡೆಂದಾ || (೭೨-೧೪)

ಎಂದು ಶಿವಪಾರಮ್ಯವನ್ನು ಮೆರೆದಿದ್ದಾನೆ.

ಕಿರು ಜಡೆಗಳೊಲವುತ್ತ ತ್ರಿಪುಂಢ್ರದ
ಪರಿಯ ಮೆರೆವುತ ಹೆಗಲೊಳಿಹ ಕ
ರ್ಪರವು ಮಿಗೆ ಖದಖದಿಸೆ ಕರದಲಿ ತಾಳಿ ಶೂಲವನೂ ||
ಸುರುಚಿರತೆ ತೆರದಂತೆ ಹರನವೊ
ಲಿರದೆ ಭಸ್ಮವಧರಿಸಿ ಯವ್ವನ
ದುರುತರದಲಾ ಜಂಗಮನು ಸಾರುತ್ತಲಯಿತಂದಾ || (೪-೨೩)

—ಜಂಗಮಜ್ಯೋತಿಯನ್ನು ಕುರಿತ ಈ ಚಿತ್ರಣವು ಎಷ್ಟು ಸುಂದರವಾಗಿದೆಯೋ ಅಷ್ಟೇ ಅರ್ಥವತ್ತಾಗಿದೆ. ಅಂದರೆ ಕೆಳದಿಯ ಆಳ್ವಿಕೆಯಲ್ಲಿ ಜಂಗಮರಿಗೆ ಸಮಾಜದಲ್ಲಿ ಎಂಥಹ ಗೌರವವಿತ್ತು. ಎಂಬ ಭಾವನೆಯೂ, ಸಾಕ್ಷಾತ್ ಶಿವನ ಪ್ರತಿರೂಪಿಗಳೆಂಬ ಭಕ್ತಿ ಇದ್ದುದೂ ವೇದ್ಯವಾಗುತ್ತವೆ. ಅಂತೆಯೇ ಜಂಗಮರು ಸಮಾಜ ಸುಧಾರಕರೂ, ಧರ್ಮ ಪ್ರಚಾರಕರೂ ಮಾರ್ಗದರ್ಶಕರೂ ಆಗಿರುತ್ತಿದ್ದರು. 'ಮರೆಯದಿರು ಧರ್ಮ ವನು, ಧರ್ಮವೆ ಪರಿಹರಿಪ್ಪುದು, ಅತಿಥಿಯ ಕರದು ಭಿಕ್ಷವನಿಕ್ಕಿ ತನುವಿದು ಅನಿತ್ಯವು' ಇತ್ಯಾದಿ ನೀತಿಬೋಧನೆಯಿಂದ ಸಮಾಜದ ಗುರುಗಳಾಗಿದ್ದರು.

ಈ ಪರಿಯು ಗುಣಗಣವ ವರ್ಜಿಸಿ
ವೈಪರೀತ್ಯದಿ ನಡೆಯುಬಹುದೇ
ಭೂಪಕೇಳು ವಿದರ್ಭದೇಶದೊಳೊರ್ವ ನರಪತಿಯಾ ॥
ರೂಪಿನಲಿ ಗುಣದಲ್ಲಿ ಮಿಗೆ ಸ
ಧ್ಯಾಪಕನು ತಾನಾಗಿ ಶೈವ ಮ
ತೋಪಲಾಲಿತನೆನಿಸಿ ರಾಜ್ಯವನಾಳುತಿರಲೂ ॥ (೫-೬)

ಈ ಪದ್ಯದಲ್ಲಿ ಬರುವ ವೈದರ್ಭ ರಾಜನ ಗುಣ ವರ್ಣನೆ ಸಂಪೂರ್ಣವಾಗಿ ತನ್ನ ಪ್ರಭು ಬಸವರಾಜೇಂದ್ರನ ಗುಣವಿಶೇಷಣವೆಂದು ಊಹಿಸಬಹುದು. ಸೂಕ್ಷ್ಮವಾಗಿ ಗ್ರಹಿಸಿದರೆ ಇಂಥ ಹಲವು ಅಂಶಗಳು ಅಡಗಿರುವುದು ಕಂಡುಬರುತ್ತದೆ.

ಶರಜಾ ನಾಗಪ್ಪಯ್ಯ ಶ್ರೇಷ್ಠಮಟ್ಟದ ಕವಿಯೂ ಅಲ್ಲ, ಪಂಡಿತನೂ ಅಲ್ಲ. ಅವನ ಪಾಂಡಿತ್ಯ ಪ್ರತಿಭೆಗಳಿಗೆ ಒಂದು ಮಿತಿ ಇದೆ. ಅವುಗಳಲ್ಲಿ ಅತಿಶಯತೆಯೇನೂ ಇಲ್ಲ. ಅಲ್ಲದೆ ಇವನಲ್ಲಿ ಸ್ವಲ್ಪ ಶಬ್ದ ದಾರಿದ್ರ್ಯವೂ ಇರುವುದು ಕಂಡುಬರುತ್ತದೆ. ಪದಗಳಿಗಾಗಿ ಅಲ್ಲಲ್ಲಿ ಕಷ್ಟಪಟ್ಟಿದ್ದಾನೆ. ಹತ್ತಾರು ಕಡೆಗಳಲ್ಲಿ ಹೇಳಿದ ಮಾತುಗಳನ್ನೇ ಪದಪುಂಜಗಳನ್ನೇ ಮತ್ತೆ ಮತ್ತೆ ಹೇಳಿ ಪುನರಾವೃತ್ತಿ ದೋಷಕ್ಕೆ ಪಕ್ಕಾಗಿದ್ದಾನೆ. ಭಾಮಿನಿಯೂ ಅವನಿಗೆ ಅಷ್ಟಾಗಿ ಒಲಿದಂತೆ ಕಾಣುವುದಿಲ್ಲ. ಆದರೂ ಶರಜಾ ನಾಗಪ್ಪಯ್ಯನ ಸರಳತೆ ಮೆಚ್ಚುವಂಥದು.

ಕೆಲಬರನ್ನವೆ ಬ್ರಹ್ಮವೆಂಬರು
ಕೆಲಬರಸುವೇ ಬ್ರಹ್ಮವೆಂಬರು
ಕೆಲರು ಮಾನವನು ಬ್ರಹ್ಮವೆಂಬರು ತಮ್ಮ ತಾವರಿತು ॥
ಕೆಲರು ಜ್ಞಾನವೆ ಬ್ರಹ್ಮವೆಂಬರು
ಕೆಲರು ಮತ್ತಾಸಂಗವೇ ಪ್ರ
ಜ್ವಲಪ ಬ್ರಹ್ಮವದೆಂಬರೆಲ್ಲರು ಬ್ರಹ್ಮಮಯವೆಂದಾ ॥ (೩೧-೧೫)

– ವೇದಾಂತದ ವಿಷಯವನ್ನು ಇಷ್ಟು ಸರಳವಾಗಿ ಹೇಳುವ ಸಿದ್ಧಿ ನಮ್ಮ ಕವಿಗಿದೆ.

## VI ಭಟಕಳದ ಅಪ್ಪಯ್ಯ (ಕ್ರಿ. ಶ. ಸು. ೧೭೦೫)

ಹಿರಿಯ ಬಸವಪ್ಪನಾಯಕನ ಆಸ್ಥಾನದ ಮತ್ತೊರ್ವ ಕವಿ ಅಪ್ಪಯ್ಯ. ಈತನ ಹಾಗೂ ಈತನ ಕೃತಿಗಳ ಬಗ್ಗೆ ಹೆಚ್ಚೇನೂ ತಿಳಿದುಬರುವುದಿಲ್ಲ. ಕವಿಚರಿತೆಕಾರರು ಹೇಳಿರುವುದನ್ನೇ ಇಲ್ಲಿ ಉದ್ಧರಿಸಿದರೆ ಸಾಕು.

"ಇವನು ಸಾರಸ್ವತ ಬ್ರಾಹ್ಮಣನು; ಕೌಂಡಿನ್ಯ ಗೋತ್ರದವನು. ಇವನ ತಂದೆ ಭಟಕಳದ ಸೇನಬೋವ ರಾಮರಾಯ; ಸ್ಥಳ ಭಟಕಳ; ಗುರು ವಿಮಲಾನಂದ; ಹೆಂಡತಿ ಭಾಗೀರಥಿ, ಕುಲದೇವತೆ ಗೋವೆಗೆ ಸೇರಿದ ಕುಶಸ್ಥಲದ ಮಂಗೀಶ (ಮಹಾಗಿರೀಶ). ಇವನ ನಿಜವಾದ ಹೆಸರು ಲಕ್ಷ್ಮಣ. ಆದರೆ ಬಾಲ್ಯದಲ್ಲಿ ತಂದೆ ತಾಯಿಗಳು ಕರೆದ ಅಪ್ಪ ಎಂಬ ಹೆಸರೇ ನೆಲೆಯಾಗಿ ನಿಂತಿತು. ಇಕ್ಕೇರಿ ಬಸವಪ್ಪನಾಯಕನು ತನ್ನ ಕುಲದೇವತೆಯಾದ ಕೊಲ್ಲೂರು ಮೂಕಾಂಬಿಕೆಯ ದರ್ಶನಕ್ಕೆ ಹೋಗಿದ್ದಾಗ ಕವಿ ಬಸವಪ್ಪನಾಯಕನ ಆಶೀರ್ವಾದ ರೂಪವಾಗಿ ಕೆಲವು ಹಾಡುಗಳನ್ನು ಬರೆದಂತೆ ತಿಳಿವುದರಿಂದ ಇವನು ಬಸವಪ್ಪನಾಯಕನ ಸಮಕಾಲೀನನಾಗಿರಬೇಕು. ಆದರೆ ಇಕ್ಕೇರಿ ದೊರೆಗಳಲ್ಲಿ ಈ ಹೆಸರಿನವರು ಇಬ್ಬರು ಇದ್ದರು. ಒಂದನೆಯವನು ೧೬೯೭ ರಿಂದ ೧೭೧೪ ರವರೆಗೂ, ಎರಡನೆಯವನು ೧೭೩೯ ರಿಂದ ೧೭೫೪ ರವರೆಗೂ ಆಳಿದಂತೆ ತಿಳಿವುದರಿಂದ ಕವಿಯು ಕಾಲದವನು ಆವ ಬಸವಪ್ಪನಾಯಕನೋ ಎಂಬ ಸಂದೇಹವುಂಟಾಗಬಹುದು. ಆದರೆ ಕವಿಯ ಗುರುವಾದ ವಿಮಲಾನಂದನು ಕರ್ಣಾರ್ಜುನರ ಕಾಳಗವೆಂಬ ಯಕ್ಷಗಾನವನ್ನು ೧೬೮೪ರಲ್ಲಿ ಬರೆದಂತೆ ಪ್ರತೀತಿಯಿರುವುದರಿಂದ ಕವಿ ಒಂದನೆಯ ಬಸವಪ್ಪನಾಯಕನ ಆಳ್ವಿಕೆಯಲ್ಲಿಯೇ ಇದ್ದಿರಬೇಕು. ಇವನ ಹಾಡುಗಳಲ್ಲಿ ಒಂದನ್ನು ಉದಾಹರಿಸುತ್ತೇವೆ :—

ಹೂವ ಕೊಟ್ಟಳು ಮಹಾದೇವಿ ಮೂಕಾಂಬಾ
ಭೂವರ ಬಸವನೃಪನ ಭಾವಭಕ್ತಿಗೆ ಒಲಿದು || ಪಲ್ಲವಿ ||

ತನ್ನ ಮಗನೆಂಬ ತಾತ್ಪರ್ಯದಲಿ ಕೈವಿಡಿದು
ಮನ್ನಿಸುವೆನೆನುತ ಮೋಹದಲಿ ಕರೆದು ||
ಅನ್ಯವೈರಿಗಳ ಜಯಿಸೆಂದು ಅಭಯವನಿತ್ತು
ಚೆನ್ನಾ ಸಾಮ್ರಾಜ್ಯ ಪದಪಿಯನುಭವಿಸುತ ||
ದೃಢಭಕ್ತಿವಿಡಿದು ತನ್ನಡಿಗಳನು ಪೂಜಿಸಲು
ಒಡನೊಡನೆ ಬಂದು ಭೂಮಿಪನ ನೋಡಿ
ಪಡಗಡಲ ಒಡೆಯಬಾರೆಂದು ನಂಬುಗೆಯನ್ನು
ಕೊಡುವತೆರದಲಿ ವಿಶ್ವದೊಡತಿ ತನ್ನಯ ಬಲದ || ಹೂವ ||

ಇಂದು ರವಿಗಳು ಇರುವ ಪರಿಯಂತ ನೃಪನೆನಿಸಿ
ಚಂದದಿಂದಲಿ ವಿಮಲ ಆನಂದವಾಗಿ ||
ಎಂದೆಂದು ಸ್ಥಿರದಿ ಬಾಳೆಂದು ಬಸವೇಂದ್ರನಿಗೆ
ಇಂದೀವರಾಕ್ಷಿ ಕೊಲ್ಲೂರ ಮೂಕಾಂಬಾ ||

ಇದಿಷ್ಟೂ ವಿಷಯಗಳನ್ನು ಕವಿಚರಿತೆಕಾರರು ತಿಳಿಸುತ್ತಾರೆ.[80] ಚಿದಾನಂದರ ಕೋರಡೆಯನ್ನು ಬರೆದ ಚಿದಾನಂದ, ಅವನ ಶಿಷ್ಯ ವಿಮಲಾನಂದ, ಅವನ ಶಿಷ್ಯ ಭಟಕಳದ ಅಪ್ಪಯ್ಯ ಅಥವಾ ಲಕ್ಷ್ಮಣ. ಈತನು "ವಿಮಲ ಆನಂದ" ಎಂಬ ಅಂಕಿತವನ್ನಿಟ್ಟುಕೊಂಡು ಹಾಡುಗಳನ್ನು ರಚಿಸಿರುವಂತೆ ತೋರುತ್ತದೆ.

---

[80] ಕ.ಕ.ಚ. II, ಪು. 1–2.

# VII. ಕೆಳದಿ ಗಂಗಾದೇವಿ (ಕ್ರಿ.ಶ. ೧೬೭೦)

ಕೆಳದಿ ಅರಸರ ಆಳ್ವಿಕೆಯ ಸುಮಾರು ಎರಡೂಮುಕ್ಕಾಲು ಶತಮಾನಗಳ ಅವಧಿಯಲ್ಲಿ ನಮಗೆ ಕಾಣಸಿಗುವ ಏಕಮಾತ್ರ ಕವಯಿತ್ರಿಯೆಂದರೆ ಗಂಗಾದೇವಿ. ಇವಳು ಬನದಗದ್ದೆ ಮಹಾಮಠದ ಮುಖ್ಯಸ್ಥರೂ, ಕೆಳದೀ ಅರಸರಿಗೆ ರಾಜಗುರುಗಳೂ ಆಗಿದ್ದ ಶ್ರೀ ಚೆನ್ನವೀರ ಶಿವಾಚಾರ್ಯ ಮಹಾಸ್ವಾಮಿಗಳವರ ಧರ್ಮಪತ್ನಿ.[81]

ಶ್ರೀ ಚೆನ್ನವೀರ ಶಿವಾಚಾರ್ಯರು ಕೆಳದಿ ಮಠದ ಗುರುಪರಂಪರೆಯಲ್ಲಿ ಬರುತ್ತಾರೆ. ಶಿವತತ್ತ್ವರತ್ನಾಕರವು ಕೆಳದೀ ರಾಜಗುರುಗಳ ಪರಂಪರೆಯನ್ನು ತಿಳಿಸುತ್ತದೆ.[82] ಅದಕ್ಕನುಗುಣವಾಗಿ ಶಾಸನಗಳು ಕೆಳದೀಮಠದ ಮೂಲಪುರುಷರಾದ ಕೆಂಚವೀರಸ್ವಾಮಿಗಳಿಂದ ಆರಂಭವಾದ ಪುಣ್ಯಪರಂಪರೆಯಲ್ಲಿ ಚೆನ್ನವೀರ ಸ್ವಾಮಿಗಳ ಹೆಸರನ್ನೂ ಹೇಳುತ್ತವೆ. ಈ ಮಠದ ಸ್ವಾಮಿಗಳವರಿಗೆ 'ರಾಜಗುರು' ಬಿರುದು ಇದ್ದಂತೆ ತೋರುತ್ತದೆ.[83] ಚೆನ್ನವೀರಸ್ವಾಮಿಗಳು ರಾಜಗುರುಗಳಾಗಿದ್ದುದು ಹಿರಿಯ ಬಸವಪ್ಪನಾಯಕನಿಗೆ.[84] ಹೇಗೆಂದರೆ ಮೊದಲನೆಯದಾಗಿ, ಈತನು ತಾನೇ ರಚಿಸಿದ ಶಿವತತ್ತ್ವರತ್ನಾಕರದಲ್ಲಿ ತನ್ನ ವಂಶವೃಕ್ಷವನ್ನು ಹೇಳುವ ಮುನ್ನ ತಮ್ಮ ಕುಲಗುರುಗಳ ಹೆಸರುಗಳನ್ನು ತಿಳಿಸುತ್ತಾ, ತನ್ನ ಕಾಲದ ಗುರು ಶ್ರೀ ಚೆನ್ನವೀರ ಸ್ವಾಮಿಗಳೆಂದು ಹೇಳುತ್ತಾನೆ.[85] ಎರಡನೆಯದಾಗಿ, ತಾನೇ ಹಾಕಿಕೊಟ್ಟ ಒಂದು ದಾನಶಾಸನದಲ್ಲಿ ತನ್ನ ತಾಯಿ ಚೆನ್ನಾಂಬೆ ಮತ್ತು ತಂದೆ ಸೋಮಶೇಖರರೆಂದು ಸ್ಮರಿಸಿದ್ದಾನೆ.[86] ಆದ್ದರಿಂದ ಅವರ ದತ್ತಕನಾದ ಬಸವರಾಜ ಹಿರಿಯ ಬಸವಪ್ಪ ನಾಯಕನೆಂಬುದರಲ್ಲಿ ಸಂದೇಹವಿಲ್ಲ. ಮೂರನೆಯದಾಗಿ, ಕೆಳದಿ ಗಂಗಾದೇವಿಯೂ ಸಹ ತನ್ನ ಕೃತಿಗೆ ಬೇಕಾದ ವಸ್ತುವನ್ನು ಬಸವರಾಜನೇ ಒದಗಿಸಿದನೆಂದು ಹೇಳುವುದರಿಂದ[87] ಶಿವತತ್ತ್ವರತ್ನಾಕರದ ಕರ್ತೃನೇ ಎಂಬುದು ಸುಸ್ಪಷ್ಟ. ಈ ಎಲ್ಲ ಆಧಾರಗಳಿಂದ

---

[81] ಅನುಬಂಧ-3-4; M.A.R. 1936, No. 66;
ಹೈದರಲ್ಲೀಖಾನನ ಸನ್ನದು, ಶರಣ ಸಾಹಿತ್ಯ, 15-2(1952) ಪು. 104;
ಕೆಳದಿ ರಾಜಾಭ್ಯುದಯದ ಪ್ರಥಮ ಸೋಪಾನ.

[82] ಅನುಬಂಧ 7.

[83] ಈಗಲೂ ಈ ವಂಶೀಕರಿಗೆ ಈ ಉಪಸರ್ಗ ಇದೆ. ಉದಾಹರಣೆಗೆ ಪ್ರಸಿದ್ಧ ಕರ್ನಾಟಕ ಗಾಯಕ 'ಬಸವರಾಜಗುರು' ಈ ವಂಶದವರು.

[84] ಅನುಬಂಧ. 4.

[85] ಅನುಬಂಧ. 7.

[86] Loc-cit.

[87] ಕೆಳದಿ ರಾಜಾಭ್ಯುದಯಮ್, ದ್ವಿತೀಯ ಸೋಪಾನಂ, ಪದ್ಯ 1.

ಚೆನ್ನವೀರ ಸ್ವಾಮಿಗಳು ರಾಜಗುರುಗಳಾಗಿದ್ದುದು ಹಿರಿಯ ಬಸವಪ್ಪನಾಯಕನಿಗೆ. ಈ ಚೆನ್ನವೀರಸ್ವಾಮಿಗಳ ಪತ್ನಿ ಗಂಗಾದೇವಿ. ಇವಳ ಕಾಲ ಹಿರಿಯ ಬಸವಪ್ಪನಾಯಕನ ಆಳ್ವಿಕೆಯ ಕಾಲ. ಅಂದರೆ ಕ್ರಿ.ಶ. ೧೬೯೭-೧೭೧೪ ರವರೆಗೆ. ಸುಮಾರು ೧೭೦೦ ಎಂದಿಟ್ಟುಕೊಳ್ಳಬಹುದು.

ಇವಳ ತಾಯಿ ಗೌರೀದೇವಿ, ತಂದೆ ಶಿವಪ್ಪ. ಇವರಿಗೆ ತಾನೊಬ್ಬಳೇ ಮಗಳೆಂತಲೂ, ತನ್ನ ತಾಯಿಯೇ ತನಗೆ ಗುರುವೆಂತಲೂ ಅಂತಹ 'ಖ್ಯಾತವಿದ್ಯಾದಾತೆಯುಂ ನಿಜಮಾತೆಯುಂ ತಾನಾದ ದೇವಿಗೆ' ಅತ್ಯಂತ ಪ್ರೀತಿಯಿಂದ ತನ್ನ ನವಕಾವ್ಯಕುಸುಮವನ್ನೂ ಅರ್ಪಿಸುವುದಾಗಿಯೂ ಹೇಳಿಕೊಂಡಿದ್ದಾಳೆ. ಇವಳಿಗೆ ಕರ್ಣಾಟಕ ಕವಿಪರಮೇಶ್ವರಿ, ವಿದ್ವತ್ಸಭಾ ಸರಸ್ವತಿ, ಮೊದಲಾದ ಬಿರುದುಗಳಿದ್ದುವೆಂದು ತಿಳಿಯುತ್ತದೆ. ಇಷ್ಟು ಬಿರುದುಗಳಿರಬೇಕಾದರೆ ಇವಳು ಹಲವು ಗ್ರಂಥಗಳನ್ನು ರಚಿಸಿರಬಹುದೆಂಬ ಊಹೆಗೆ ಅವಕಾಶವಿದೆ. ಆದರೆ ಅವಳದೆಂದು ಹೇಳುವ ಬೇರೆ ಯಾವ ಕೃತಿಯೂ ಸಿಕ್ಕಿಲ್ಲ, ಕೆಳದಿ ರಾಜಾಭ್ಯುದಯವನ್ನು ಬಿಟ್ಟು.

### (ಅ) ಕೆಳದಿ ರಾಜಾಭ್ಯುದಯಮ್.

ಕೆಳದಿ ರಾಜಾಭ್ಯುದಯಮ್ ಒಂದು ಐತಿಹಾಸಿಕ ಗ್ರಂಥ. ಅಪೂರ್ಣಗ್ರಂಥ. ಕೃತಿಕರ್ತಿಯ ಬಗ್ಗೆ ಸಂದೇಹವಿದ್ದರೂ, ಪ್ರಕಟವಾದ ಕೃತಿಯ ಬಗೆಗೆ ತಿರಸ್ಕಾರ ತೋರುವಂತಿಲ್ಲ. ಏಕೆಂದರೆ ಸಿಕ್ಕಿರುವ ಸ್ವಲ್ಪವೇ ಭಾಗದಲ್ಲಿ ಉತ್ತಮ ಕಾವ್ಯಗುಣಗಳು ಮೆರೆದಿವೆ.

ಮೊದಲ ಸೋಪಾನ ಭಾಮಿನೀ ಷಟ್ಪದಿಯಲ್ಲಿ ರಚಿತವಾಗಿದೆ. ಪದ್ಧತಿಯಂತೆ ಶ್ರೀಕಾರದ ಆರಂಭವೇನೂ ಇಲ್ಲ. ಆದರೆ ನವರಸವನ್ನು ಒದಗಿಸಲೆಂದು ಶಿವನನ್ನು ಕುರಿತ ಪ್ರಾರ್ಥನೆ ಇದೆ. ಅನಂತರ ಗೌರೀಸ್ತುತಿ, ಷಣ್ಮುಖ, ವಿಘ್ನೇಶ, ವಿಶ್ವೇಶ್ವರ, ನಂದಿ, ಭೃಂಗಿ ಹಾಗೂ ವೀರಶೈವ ಪಂಚ ಆಚಾರ್ಯರುಗಳ ಸ್ತುತಿ ಮಾಡಲಾಗಿದೆ. ಮುಂದಿನ ಪದ್ಯದಲ್ಲಿ ವೀರಶೈವ ಭಾಷ್ಯಕಾರರಾದ, ಶಿವಮತಾಂಬುಧಿ ಪೂರ್ಣಚಂದ್ರರಾದ ಶ್ರೀಪತಿ ಹಾಗೂ ಶ್ರೀ ನೀಲಕಂಠಶಿವಾಚಾರ್ಯರೇ—ಮೊದಲಾದವರಿಗೆ ನಮಿಸಿ, ಬಸವೇಶ್ವರರಿಗೆ ವಂದಿಸಿ, ಶೈವ, ವೈಷ್ಣವ, ಜೈನಕವಿಗಳನ್ನೂ, ರಾಜರನ್ನೂ ಪಡೆದ ಕರ್ಣಾಟಕಾಂಬೆಗೆ ಜಯವಾಗಲೆಂದು ಹಾರಯಿಸಿ, ಚೆನ್ನ ಕನ್ನಡಜಾಣ ಹರಿಹರ ದೇವನಿಗೆ ನಮಸ್ಕರಿಸಿ, ರಾಘವಾಂಕಾದಿಗಳ ಕಾವ್ಯಶಕ್ತಿ ತನಗೆ ಬರಲೆಂದು ಬೇಡಿ, ನಿಜಗುಣಶಿವಯೋಗಿಗಳನ್ನು ಭಕ್ತಿಯಿಂದ ಪ್ರಾರ್ಥಿಸಿ ಕಥೆಗೆ ನಾಂದಿ ಹಾಡಿದ್ದಾಳೆ.

ಒಂದು ದಿನ ಕೆಳದಿ ಬಸವರಾಜನು ತನ್ನ ಪತ್ನಿ ಚನ್ನಮ್ಮಾಜಿಯ ಕೂಡೆ ಕೆಳದಿ ಮಹಮಠಕ್ಕೆ ಗುರುಸಂದರ್ಶನಾರ್ಥವಾಗಿ ಬರಲು, ಶ್ರೀ ಗುರು ಚೆನ್ನವೀರಾಚಾರ್ಯ

ಆದರದಿಂದ ರಾಜನನ್ನು ಬರಮಾಡಿಕೊಳ್ಳುತ್ತಾರೆ. ಉಭಯಕುಶಲೋಪರಿಯಾದ ಮೇಲೆ, ರಾಜನು 'ಗುರುಚರಣ ಸೇವಾರ್ಥ ಪತ್ನೀಪುತ್ರರೊಡಬಂದೆ' ಎಂದು ಬಿನ್ನವಿಸಿಕೊಂಡು, ಶ್ರೀಮಠದ ಶಿವಪ್ರಸಾದವನ್ನು ಸ್ವೀಕರಿಸಿ ರಾಜ ಮತ್ತು ರಾಜಗುರುಗಳು ಒಂದೆಡೆ ಸಂಭಾಷಿಸುತ್ತಿರುವಾಗ ರಾಣಿಯಾದ ಚೆನ್ನಮ್ಮಾಜಿ ಗುರುವರನೊಡತಿಯಡಿದಾವರೆಯೊಳ್ ಅಳಿಮುಡಿ ಇಡುತೆ ನುಡಿದಳಂತೆ—'ತಾಯೆ ಮದ್ಗುರುಜಾಯೆ ಬುಧಜನಗೇಯೆ, ವಿದ್ಯಾವಿಭವೆ' 'ಕೆಳದೀ ರಾಜಕೃತಿಯಂ' ವಿರಚಿಪುದು ನೀವು' ಎಂದು. ಆ ಕ್ಷಣವೇ ಬಸವರಾಜನೂ ಸಹ ಮಂದಹರ್ಷದಿಂದ 'ಹಿಂದಣವರೀ ಕೃತಿಯನಾರುಂ ಪೇಳ್ದರಿಲ್ಲ ದಿಟ' ಎನ್ನಲು, ಚೆನ್ನವೀರಸ್ವಾಮಿಯವರೂ ತಮ್ಮ ಪತ್ನಿಗೆ 'ನೀನಿವರೆಂದ ಕೃತಿಯಂ ವಿರಚಿಸುವುದುಚಿತ' ಎನ್ನಲು ಗಂಗಾದೇವಿ ಕೃತಿರಚನೆಗೆ ತೊಡಗಿದಳಂತೆ.

ಅನಂತರ ಎರಡು ಪದ್ಯಗಳಲ್ಲಿ ಕುಕವಿನಿಂದೆ ಮಾಡಿ ಪ್ರತಿಭೆಯ ವಿಚಾರವನ್ನು ಹೇಳಿದ್ದಾಳೆ. ಕನ್ನಡದ ಕಬ್ಬಂಗಳೆನಿತೋ ಉನ್ನತಿಯೊಳನುಪಮತೆವಡೆದಿರೆ ಇನ್ನಿವಳ ನವಕೃತಿಯು ಮನ್ನಣೆಪಡೆವುದೇನವರೊಳ್ ಎನ್ನದಿರಿ ಕವಿಕೀರ್ತಿ ಕಾಮಿತವೆನ್ನ ಹವಣಿಕೆಯಲ್ಲವಿದು ಸಂಪನ್ನ ಕೆಳದೀ ರಾಜಚರಿತಮಪೂರ್ವಮೆಂದೊರೆವೆಂ' ಎಂತಲೂ, ಹದಿನೆಂಟು ವರ್ಣನೆಗಳಿಗೆ ಅವಕಾಶಕೊಡದೆ ಈಕೆ ತನ್ನ ಕೃತಿಯಲ್ಲಿ ಕೇವಲ ಪವಿತ್ರವಾದ ಆ ರಾಜರ ಕಥೆಯನ್ನು ಬರೆಯಲು ಮನ ಮಾಡಿದಳಂತೆ. 'ಕೆಳದಿ ರಾಜಾಭ್ಯುದಯಮೆಂಬೀ ಲಲಿತ ನಾಮಂ, ಕೃತಿಪತಿ ಕೆಳದಿ ರಾಜಕುಲಾಬ್ಜರವಿ ರಾಮೇಶಲಿಂಗಕಣಾ, ಇಳೆಯೊಳಿದನೊರೆದವಳದಾರೆನೆ ಕೆಳದಿ ರಾಜಾನ್ವಯದ ನಿಜಗುರು ಕೆಳದಿವರ ಮಠದ ಚೆನ್ನವೀರಾಚಾರ್ಯನರ್ಧಾಂಗಿ' ಎಂದಿದ್ದಾಳೆ.

ಎರಡನೆಯ ಸ್ಥಲ ಗದ್ಯಸಲ್ಲಿದೆ. ಆದರೆ ಆರಂಭದಲ್ಲಿ ಒಂದು ಕಂದ ಪದ್ಯವಿದೆ. ಅದರಲ್ಲಿ ಕೆಳದಿ ಬಸವರಾಜನು ತನ್ನ ಪೂರ್ವಜರ ಇತಿಹಾಸವನ್ನು ಒದಗಿಸಿಕೊಡಲು ತಾನು ಅದನ್ನೇ 'ಸುಲಲಿತ, ಸುಕುಮಾರ, ಸರಸಪದಗತಿಯಿಂದ' ಕಾವ್ಯವಾಗಿ ರಚಿಸಿದಳಂತೆ.

ಕರ್ನಾಟಕದಲ್ಲಿರುವ ಮಲ್ಲದೇಶ ಅದರಲ್ಲಿರುವ ಕೆಳದಿಪುರ ಬಸವಪ್ಪ ಮತ್ತು ಬಸವಾಂಬೆಯರ ದಾಂಪತ್ಯ, ಪತಿ ತೀರಿಕೊಂಡದ್ದರಿಂದ ದುಃಖಿತೆಯಾದ ಬಸವಾಂಬೆಯನ್ನು ಹೊರಗುಡಿಗೆಯು ಪಟ್ಟದ ರುದ್ರಮುನಿಸ್ವಾಮಿಗಳು ತಮ್ಮ 'ಪುಣ್ಯಸತಿ' ರುದ್ರಾಂಬೆಯ ಸಮೇತರಾಗಿ ಬಂದು ಸಾಂತ್ವನಗೊಳಿಸುತ್ತಾರೆ. ಚೌಡಪ್ಪ, ಭದ್ರಪ್ಪರೆಂಬ ಅವಳ ಇಬ್ಬರು ಪುತ್ರರೂ ಜಗತ್ತಿನಲ್ಲಿ 'ಜಸವಡೆದಪ್ಪುದು ತಪ್ಪದದು' ಎಂದು ಭವಿಷ್ಯ ನುಡಿದ ಮೇಲೆ ಸಮಾಧಾನಿಯಾದ ಬಸವಾಂಬೆಯು ತನ್ನ ಎರಡೂ ಮಕ್ಕಳುಗಳ ಕೂಡೆ ಗುರುವಿಗೆ ನಮಸ್ಕರಿಸಲು ಗುರು ಆಶೀರ್ವದಿಸುತ್ತಾನೆ. 'ಇತ್ತಲ್

ಬಸವಾಂಬೆಯನುದಿನಂ ಮನೆಗೆಲಸಮುಂ ಸಾಗಿಸುತ್ತುಂ ಮಠದಯ್ಯನವರಿಂ ಮಕ್ಕಳ್ಗೆ ಳ್
ನೋದಿಸುತ್ತುಂ ಶಿವಾಚಾರ ಸಂಪನ್ನೆ, ಸಚ್ಚಾರಿತ್ರದಿನಚ್ಚಳಿಯದೆ ನಿಚ್ಚಂ ನಡೆವುತ್ತ
ಮಿಂತು ಕೆಲವುಂ ಬರಿಸಂ ಪೋಗೆವೋಗೆ' ಎಂಬಲ್ಲಿಗೆ ಕೃತಿ ನಿಂತಿದೆ. ಮುಂದಿನದು
ತಿಳಿಯದು. ಇದು ಒಂದು ಅಪೂರ್ಣ ಐತಿಹಾಸಿಕ ಕಾವ್ಯ.

ಕರ್ಣಾಟಕವಿಪರಮೇಶ್ವರಿ, ವಿದ್ವತ್ಸಭಾ ಸರಸ್ವತಿ, ಕೆಳದಿ ಗಂಗಾದೇವಿಗೆ ಭಾಮಿನಿಯಲ್ಲಿ ಸಿದ್ಧಿಯಿಲ್ಲ. ಆದರೆ ಗದ್ಯವು ಮಾತ್ರ ಸೊಗಸಾದ, ಪ್ರೌಢವಾದ ಶೈಲಿಯಲ್ಲಿ ರಚಿತವಾಗಿದೆ :—

'ಬನಸಿರಿಯ ಚೆಲುವಿಂಗೆ ನಿಲುವಿಂಗೆ ನೆಲೆಯೆನಿಸ್ಪಾ ಸಲ್ಲಲಿತಮಾದ ಮಲ್ಲದೇಶದೊಳೆಲ್ಲಿ ನೋಡಿದೊಡಂ ಎತ್ತರ ಬಿತ್ತರಂಗಳ ಸೊಂಪಿಂ ರವಿಶಶಿ ಮಂಡಳಮುಂ ಸ್ಪರ್ಧಿಪ ಘನೋತ್ತುಂಗ ಗಿರಿ ಕಾನನ ಶ್ರೇಣಿಗಳ ಲೋಕೇಶನಾಕಾಶ ಭಿತ್ತಿಯೊಳ್ ಬಣ್ಣಿಸಿದ ಚೆಲ್ವು ಚಿತ್ತಾರದಂತಿರ್ಕಡೆಯೊಳ್ ರಯ್ಯಮಾಗಿರಲ್, ಇವುಗಳ ನಡುವಣ ಸರವು ದಾಣಂಗಳೊಳ್ ಪರಿವಿಡಿದು ಪಸಿರ್ಗರೆವ ಸುರುಚಿರ ಕಳಮಕ್ಷೇತ್ರಂಗಳುಂ ಸಾಲ್ಸಾಲಾಗಿ ಲೀಲೆಯಿಂ ಲೋಲಾಡುವ ಬಾನೆತ್ತರಂ ಬೆಳೆದು ತೂಗಾಡುವ ಪೂಗೋದ್ಯಾನಂಗಳುಂ ಇಂತಿವೆಲ್ಲಮಂ ಭೂದೇವಿ ತಾಂ ಕ್ರೂರ ದಾರಿದ್ರ್ಯ ದೈತ್ಯನ ಮೇಲೆ ಧಾಳಿಯನಿಡಲ್ ಕಾಲತ್ರಯಕ್ಕಂಜದ ಕಲಿ ಚಲಿಯಪ್ಪ ಕೃಷೀವಲನೆಂಬ ಪಡೆವಳನಂಕೆಯೊಳ್ ಸಡಗರಂ ಮಿಗೆ ಸಜ್ಜುಗೊಳಿಪ್ಪ ಕಡು ಪಡೆಯಂತೆ ಶ್ರೀ ಸಾಮರ್ಥ್ಯಮಂ ಸಾರುತ್ತ ಬೀರುತ್ತಮಿರ್ಪುದೇಂ ಸೊಂಪೋ·

"ಇಂತನಂತ ವಿಭವ ಪ್ರಭಾವಂಬೆತ್ತ ನಾಡಿನ ಕಾಡು ಕಣಿವೆ ಸರುವು ಘಟ್ಟಂಗಳೊಳ್ ಬೀಳುತ್ತೇಳುತ ಸುತ್ತಿ ಸುಳಿದು ಇಳಿದು ಹೊಳೆದು ಜುಳು ಜುಳು, ಸಳ ಸಳ, ಕಳ ಕಳ ನಾದಮುಂ ಪಸರಿಸುತ್ತಂ ಪರಿವ ಮೆರೆವ ವರದಾ ನದಿ, ವನದೇವಿಯ ಘನ ಮಂಗಳಾದರ್ಶದಂತೆ, ಕಂಗೊಳಿಸುತ್ತಿರಲ್, ಅದರಿಂದುತ್ತರ ದಿಶೆಗಂ ಹರಿದಾರಿಯಂತರದೊಳ್ ಕೆಳದಿಪುರಮೆಂಬ ಜನಪದಂ ಜಸವಡೆದಿಪ್ಪುದು."

ಈ ಬನಸಿರಿಯ ಬಣ್ಣನೆಯಷ್ಟೇ ಚೆಲುವಾದ ಗಂಗಾದೇವಿಯ ಗದ್ಯಶೈಲಿ ಆವಳ ಸಿದ್ಧ ಹಸ್ತಕ್ಕೆ ನಿದರ್ಶನವಾಗಿ ನಿಂತಿದೆ.

ಗಂಡನನ್ನು ಕಳೆದುಕೊಂಡ ಬಸವಾಂಬೆಯನ್ನು ಸಂತೈಸುವ ಭಾಗವೂ ತುಂಬಾ ಪರಿಣಾಮಕಾರಿಯಾಗಿ ರಚಿತವಾಗಿದೆ. ಗದ್ಯಕ್ಕೂ ಪದ್ಯದಷ್ಟೇ ಪ್ರಭಾವ ಬೀರುವ ಶಕ್ತಿ ಇದೆ ಎಂಬುದನ್ನು ಇಲ್ಲಿ ತಿಳಿಯಬಹುದು. ಅಲ್ಲಲ್ಲಿ "ನಡುವೆ ನುಲಿ ಪರಿದೊಡಾ· ಕೊಡಮುನಾರ್ ಪಿಡಿವರೆ? ಮರ್ತ್ಯಜರ್ಗೆಂದುಮೀ ಮರಣಮೇ ಶರಣು ಕಣಾ !" ಎಂಬ ಉಪದೇಶದ ನುಡಿಗಳೂ ಬರುತ್ತವೆ. ರುದ್ರಮುನಿಸ್ವಾಮಿಗಳ ಸಾಂತ್ವನದ ನುಡಿಗಳಿಂದ

ತೃಪ್ತಳಾದ ಬಸವಾಂಬೆ "ಹಿಮವುಡುಗಿದ ಕಮಲದಂತೆ, ತಮವಡಗಿದ ನಯನದಂತೆ, ನೇಸರ್ ತೊಲಂಗಿದ ನಕ್ಷತ್ರದಂತೆ, ರಾಹುವೋಸರಿಸಿದ ರೋಹಿಣೀ ಪ್ರಿಯನಂತೆ, ನಿಜಪ್ರಸನ್ನತೆಯನಾಂತು ಭಕ್ತ್ಯತಿಶಯದಿಂ ಗುರುಪೂಜೆಯನಾಚರಿಸಿ...." ಎಂಬಲ್ಲಿ ಬರುವ ಉಪಮೆಗಳ ಪ್ರೌಢಿಮೆಯು ಮೆಚ್ಚುವಂಥದು.

ಪ್ರತಿಭೆಯನ್ನು ಕುರಿತ ವಿದ್ವತ್ಸಭಾ ಸರಸ್ವತಿಯ ವ್ಯಾಖ್ಯಾನ ಸೊಗಸಾಗಿದೆ—

ಕಥನಕೊಪ್ಪುವ ವಸ್ತು ಚಿತ್ರೋ
ಚಿತ ಸುಶಬ್ದಾರ್ಥಂಗಳಂ ಕವಿ
ಮತರಸಾಲಂಕಾರ ಭಾವಾದಿಗಳನಾಕ್ಷಣಕೆ ||
ಕಥಿಸುವವನೊಳು ಮಿಂಚಿನಂತುರೆ
ಪ್ರತಿಫಲಿಸಿ ಭಾವಿಸುವುದಾವುದೊ
ಪ್ರತಿಭೆಯದು ಕವಿಜನರ ಕಾಮಿತಲೀವಸುರತರುವು || (೧-೨೯)

ಪ್ರತಿಭೆಯನ್ನು ಕುರಿತು ಈ ಪದ್ಯದಲ್ಲಿ ನಿಜಕ್ಕೂ ಅವಳಲ್ಲಿದ್ದ ಪ್ರತಿಭಾದೀಪ್ತಿ ನಮಗೆ ಗೋಚರಿಸುತ್ತದೆ.

ಸಂಸ್ಕೃತ ಮತ್ತು ಕನ್ನಡ ಭಾಷೆಗಳ ಮೇಲೆ ಈಕೆಗೆ ಸಾಕಷ್ಟು ಪ್ರಭುತ್ವವಿದೆ. "ದೇಸಿ" ರಚನೆಯಲ್ಲಂತೂ ಕೈ ತುಂಬಾ ಪಳಗಿದೆ. ಆದರೆ "ಪುರದ ಗೌಡನು ಮಾಡದುದನವನುರುವ ಕಂಬಳಿ ಮಾಳ್ಪುದೇ" ಎಂಬ ಕನ್ನಡ ಗಾದೆಯ ಮಾತು ವಿದ್ವತ್ಸಭಾ ಸರಸ್ವತಿಯದೇ ಎಂಬ ಸಂದೇಹ ಮೂಡಿಸುತ್ತದೆ.

ಕರ್ಣಾಟಕ ಕವಿಪರಮೇಶ್ವರಿಯು ಹೇಳಿರುವ ಮಾತುಗಳೊಂದಿಗೆ ಈ ವಿಮರ್ಶೆಯನ್ನು ಮುಗಿಸಬಹುದು:

ಸ್ಪೇಷ್ಟವಹ ಹೆಣ್ಣಿಂಗೆ ಮಣ್ಣಿಗೆ
ಕಷ್ಟಪಟ್ಟರು ಕಾದು ಮಡಿದ
ಭ್ರಷ್ಟ ಭವಿಗಳ ಪೊಗಳ್ದ ಕೃತಿ ತಾನಲ್ಲವೀ ಕೃತಿಯು ||
ಸೃಷ್ಟಿಯೊಳಗಿಹ ಸಕಲ ಧರ್ಮ ಪ್ರ
ತಿಷ್ಠೆಗಾಗಿಯೆ ನಾಡ ಪೊರೆವ ವ
ರಿಷ್ಠರವರತಿ ಶೀಲ ಕೆಳದೀ ರಾಜರಾಚರಿತ || (೧-೩೪)

## VIII. ನಿರ್ವಾಣಾರ್ಯ (ಕ್ರಿ. ಶ. ೧೭೨೫)

'ವೀರಶೈವ ಸುಧಾನಿಧಿ' ಎಂಬ ಕೃತಿರತ್ನ ಸಂಸ್ಕೃತದಲ್ಲಿದೆ.[88] ಇದರ ಕರ್ತೃ ಶ್ರೀ ಗುರುಬಸವದೇಶಿಕೇಂದ್ರರು.[89] ಕೆಳದಿಯ ಮಹಾಮಂತ್ರಿ ನಿರ್ವಾಣಾರ್ಯನ ಪ್ರಾರ್ಥನೆಯ ಮೇರೆಗೆ ಈ ಗ್ರಂಥವನ್ನು ಹೇಳುತ್ತಿರುವದಾಗಿ ಕವಿ ಹೇಳಿಕೊಂಡಿದ್ದಾರೆ.[90] ಇದೇ ಗ್ರಂಥದ ಉಪೋದ್ಘಾತದಲ್ಲಿ ಮೌನಪ್ಪ ಮಂತ್ರಿಯ ವಂಶವೃಕ್ಷವೂ ಬಂದಿದೆ. ವಿವರ ಹೀಗಿದೆ :—

---

[88]O.R.I. No. 5287.

(ಗರಿ 48 ರಿಂದ 114 ರವರೆಗೆ. ಆದರೆ ಈ ಕೃತಿಯ ಮೊದಲ ಗರಿ ಇಲ್ಲ.)

[89]"ಇತಿ ಶ್ರೀ ನಿಖಿಲ ನಿಗಮಾಗಮಸಾರ ಪಾರಾವಾರ ಮಂಥ ಮಂಥಾಯ ಮಾನಾಶೇಷ ಮನೀಷಿತೋಷಕ ಮನೀಷಾದರ್ಶ ಬಿಂಬ ಪ್ರತಿಬಿಂಬ ಹೃದ್ಯಾನಂದ್ಯ ಷಟ್ಸ್ಥಲ ವಿದ್ಯಾ ವೈಭವ ವಿಖ್ಯಾತಿ ಗುರು ಬಸವಾಖ್ಯ ದೇಶಿಕೇಂದ್ರ ವಿರಚಿತೇ ವೀರಶೈವ ಸುಧಾನಿಧೌಯಿತ್ತಿ ಸಂಪೂರ್ಣಂ ಮಂಗಳ ಮಹಾ ಶ್ರೀ ಶ್ರೀ ಶ್ರೀ."

ಈ ಕೃತಿಯ ಕಡೆಯಲ್ಲೂ, ಪ್ರತಿಪ್ರಕರಣದ ಅಂತ್ಯದಲ್ಲೂ ಬರುವ ಮಾತುಗಳಷ್ಟೇ ಅಲ್ಲದೆ ಈತನ ಬಗ್ಗೆ ಇನ್ನೂ ಹಲವು ಮಾಹಿತಿಗಳು ದೊರೆಯುತ್ತವೆ. ಮೌನಪ್ಪ ಮಂತ್ರಿಯು ತನ್ನ 'ವೀರಶೈವಾಚಾರ ಕೌಸ್ತುಭ'ದಲ್ಲಿ ಗುರುಬಸವ ಯತಿರನು ತನ್ನ ಶಿಕ್ಷಾಗುರುವೆಂದು ಹೇಳಿಕೊಂಡಿದ್ದಾನೆ — ವೀರಶೈವಾಚಾರ ಕೌಸ್ತುಭ (ಮುಕ್ತಿಕಾಂಡದ ಅಂತ್ಯ; ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ಕೆ. ಪಿ. 324 ಓಲೆಪ್ರತಿ)

ಈ ಮೌನಪ್ಪನ ಮೊಮ್ಮಗ, ಅಂದರೆ ನಿರ್ವಾಣಯ್ಯನ ಮಗ, ಸಂಗನ ಬಸವಪ್ಪ ಮೇಲೆ ಹೇಳಿದ ಗುರುಬಸವದೇಶಿಕೇಂದ್ರರ ಕೃತಿಯ ಕಡೆಯ ಮಾತುಗಳನ್ನೇ ಉದ್ಧರಿಸಿ, ಅವರ ಕೃತಿಗೆ ಕನ್ನಡ ಟೀಕು ಬರೆಯುವುದಾಗಿ ಹೇಳಿಕೊಂಡಿರುವುದು ಕಂಡು ಬರುತ್ತದೆ.

ಕ.ಕ.ಚ. III, ಪು. 61-62.

[90]ನಿರ್ವಾಣಪ್ರಭುತಿಲಕೇನ ಪೃಷ್ಟೋ ವಿಖ್ಯಾತೋ
ಗುರು ಬಸವಾಖ್ಯ ದೇಶಿಕೇಂದ್ರಃ
ಕುರ್ವೇ ತತ್ಪ್ರಮಥಾ ಕೃತೇ ದ್ಯ ವೀರಶೈವಾಚಾರಾ
ರ್ಹಗಮನಿಗಮಾನ್ವಿತಂ ಪ್ರಬಂಧಂ.

—ವೀರಶೈವ ಸುಧಾನಿಧಿ, ಉಪೋದ್ಘಾತ, ಪ್ರಕರಣ. ಶ್ಲೋಕ 20.

ಸದಾಶಿವ ಭೂಪಾಲನ ಅನ್ವಯದಲ್ಲಿ ಧುರೀಣತ್ವ ಪಡೆದ ವೀರಶೈವಾಚಾರನಿಷ್ಠರಾದವರು ಮೌನಪ್ಪ ಮಂತ್ರಿ ಮತ್ತು ಅವನ ಹೆಂಡತಿ ಶಿವಾಂಬ. ಇವರಿಗೆ ನಾಲ್ಕು ಜನ ಮಕ್ಕಳು — ೧) ಚನ್ನಬಸವಪ್ಪ, ೨) ನಿರ್ವಾಣಾರ್ಯ, ೩) ಗುರುವಪ್ಪ ಮತ್ತು ೪) ಅಕ್ಕಮ್ಮ. ಇವರಲ್ಲಿ ಹಿರಿಯವನಾದ ಚನ್ನಬಸವಪ್ಪನು ಮಹಾಸೇನಾನಿ. ಒಮ್ಮೆ ಶತ್ರುಸಮುದ್ರದ ಮಧ್ಯದಲ್ಲಿದ್ದ ದುರ್ಗವನ್ನು ಹಿಡಿಯುತ್ತಾನೆ. ಗುರುವಪ್ಪನೂ ಸಹ ಶೂರ. ಧೈರ್ಯ, ಶೌರ್ಯ, ಯೋಗ, ವಿಯೋಗದಲ್ಲಿ ಚರಗುರು. ಶರಣಾರ್ಥದಲ್ಲಿ, ಗಾಂಭೀರ್ಯದಲ್ಲಿ, ರೂಪದಲ್ಲಿ — ಎಲ್ಲದರಲ್ಲೂ ರಾಜನನ್ನು ತೃಪ್ತಿಪಡಿಸಿದವನು ನಿರ್ವಾಣಯ್ಯನ ಅನುಜ ಗುರುವಪ್ಪ. ಇವನಿಗೆ ಸಮಾನರಾದವರು ಯಾರಿದ್ದಾರೆ. ಚಂದ್ರ, ಚಿಂತಾಮಣಿ, ಕಲ್ಪವೃಕ್ಷಾದಿಗಳು ಸಮುದ್ರದಲ್ಲಿ ಹುಟ್ಟಿದುವು. ಆದರೆ ಕಾಮಧೇನುವೂ ಒಬ್ಬಳೇ ಹುಟ್ಟಿದಳು. ಹಾಗೆ ಮೂರು ಗಂಡುಗಳೊಡನೆ ಒಂದೇ ಒಂದು ಹೆಣ್ಣು ಅಕ್ಕಮಾಂಬಾ ಹುಟ್ಟಿದಳು. ಅವಳ ಗುಣಶೀಲಗಳು ವರ್ಣನಾತೀತ. ಹಾರದ ಮಧ್ಯದಲ್ಲಿನ ರತ್ನವಾಗಿ ಶೋಭಿಸುವವನು ನಿರ್ವಾಣ ಮಂತ್ರಿ. ಇವನು ರಕ್ಷೆಯಲ್ಲಿ, ಶಿಕ್ಷೆಯಲ್ಲಿ, ಪರೀಕ್ಷೆಯಲ್ಲಿ, ದಂಡನೆಯಲ್ಲಿ, ದೀನರಿಗೆ ದಾನ ಕೊಡುವಲ್ಲಿ ವಿಶ್ರುತನಾಗಿದ್ದಾನೆ.[91]

ಇದರ ಮುಂದಿನ ವಿವರವನ್ನು ಕೆಳದಿನೃಪವಿಜಯವು ಕೊಡುತ್ತದೆ — ಮೌನಪ್ಪ ಶೆಟ್ಟರ ಮಗ ನಿರ್ವಾಣಾರ್ಯನು ಹಿರಿಯ ಬಸವಪ್ಪನಿಗೆ ಆಡಳಿತದಲ್ಲಿ, ಸಹಾಯಕನಾಗಿದ್ದುಕೊಂಡು, ಅರಸು ಮನೆತನದಲ್ಲಿ ಬಾಂಧವ್ಯವನ್ನು ಬೆಳಸಿರುತ್ತಾನೆ. ಅಪುತ್ರವತಿಯಾದ ಚೆನ್ನಮ್ಮಾಜಿಯು ಹಿರಿಯ ಬಸವಪ್ಪನನ್ನು ದತ್ತು ಪಡೆದಂತೆ, ತನ್ನ ತಂಗಿ ಮರಿಯಮ್ಮಾಜಿಯೆಂಬವಳನ್ನು ಸಾಕಿ ನಿರ್ವಾಣಯ್ಯನಿಗೆ ಕೊಟ್ಟು ಮದುವೆ ಮಾಡಿರುತ್ತಾಳೆ. ಈತನು ತನ್ನ ಮಗಳು ನೀಲಮ್ಮಾಜಿಯನ್ನು ಹಿರಿಯ ಬಸವಪ್ಪನ ಅನಂತರ ಪಟ್ಟಕ್ಕೆ ಬಂದ ಕಿರಿಯ ಸೋಮಶೇಖರನಾಯಕನಿಗೆ ಕೊಟ್ಟು ಮದುವೆ ಮಾಡಿರುತ್ತಾನೆ. ಅರಸನಿಗೆ ಮಾವನಾದ ನಿರ್ವಾಣಯ್ಯನಿಗೆ ರಾಜ್ಯದಲ್ಲಿ ವಿಶೇಷ ಮನ್ನಣೆಯಿರುತ್ತದೆ. ಈತನು ಅಳಿಯ ಸೋಮಶೇಖರನನಂತರ ಕಿರಿಯ ಬಸವಪ್ಪ ನಾಯಕನ ಕಾಲದಲ್ಲೂ ಬದುಕಿದ್ದಿರಬಹುದು. ಮುಂದೆ ಕಿರಿಯ ಬಸವಪ್ಪನಾಯಕನಿಗೆ ಮಕ್ಕಳಿಲ್ಲದ್ದರಿಂದ ನಿರ್ವಾಣಯ್ಯನ ಮೊಮ್ಮಗ ಗುರುವಪ್ಪನ ಮಗ ಚೆನ್ನಪ್ಪನನ್ನು 'ಚೆನ್ನಬಸವನಾಯಕ' ನೆಂದು ನಾಮಕರಣ ಮಾಡಿ, ಶಕವರ್ಷ ೧೬೭೭ ನೆಯ ಭಾವಸಂವತ್ಸರದ ಕಾರ್ತೀಕ ಶುದ್ಧ ೫ ರವಿವಾರದಲ್ಲಿ ಪಟ್ಟಕ್ಕೆ ತರುತ್ತಾರೆ.[92]

---

[91] ಅದೇ. ಶ್ಲೋಕ 8–19, ಗ೦ 48–49.

[92] ಕೆ. ನೃ. ವಿ. ಪು. 170–208.

ನಿರ್ವಾಣಯ್ಯನ ಮೊಮ್ಮಗನೇ ಆ ದೌರ್ಭಾಗ್ಯಶಾಲಿ ಚೆನ್ನಬಸವನಾಯಕ.[93]

ಬಹುಶ್ರುತನೂ ಮಹಾಮೇಧಾವಿಯೂ ಆದ ನಿರ್ವಾಣಾರ್ಯನು ಮಂತ್ರಿಯೂ ಹೌದು, ಕವಿಯೂ ಹೌದು. ಇವನ ಬದುಕಿನ ಸಾರವತ್ತಾದ ದಿನಗಳೆಂದರೆ ತಾನು ಕಿರಿಯ ಸೋಮಶೇಖರನಾಯಕನಿಗೆ ಮಂತ್ರಿಯಾಗಿ, ಮಾವನಾಗಿದ್ದ ಕಾಲ. ಆಗಲೇ ಹಲವು ಕೃತಿಗಳನ್ನು ಸಂಸ್ಕೃತದಲ್ಲೂ ರಚಿಸಿದ್ದಿರಬೇಕು. ಅಂದರೆ ಇವನ ಕಾಲವನ್ನು ಕರ್ನಾಟಕ ಕವಿಚರಿತೆಕಾರರು ಹೇಳುವಂತೆ ಕ್ರಿ. ಶ. ೧೭೫೪ ಎಂದೇ ಇಟ್ಟುಕೊಳ್ಳಬಹುದು.

ಇವನು ಕನ್ನಡದಲ್ಲಿ ಶಿವಪೂಜಾ ವಿಧಾನವನ್ನೂ.[94] ಸಂಸ್ಕೃತದಲ್ಲಿ ಕ್ರಿಯಾಸಾರದ ಕೆಲವು ಭಾಗಗಳಿಗೆ ವ್ಯಾಖ್ಯಾನವನ್ನೂ, ನಿಜಗುಣ ಶಿವಯೋಗಿಗಳ ಕನ್ನಡ ವಿವೇಕ ಚಿಂತಾಮಣಿಯ ಸ್ವಲ್ಪ ಭಾಗವನ್ನು ಸಂಸ್ಕೃತಕ್ಕೆ ಪರಿವರ್ತಿಸಿರುವುದಾಗಿಯೂ ತಿಳಿಯುತ್ತದೆ.[95]

"ಶಿವಪೂಜಾವಿಧಾನ, ಗದ್ಯರೂಪವಾಗಿದೆ; ಅಲ್ಲಲ್ಲಿ ಸಂಸ್ಕೃತ ಶ್ಲೋಕಗಳು ಉದಾಹೃತವಾಗಿವೆ. ಇದರಲ್ಲಿ ವೀರಶೈವ ಮತಾನುಸಾರವಾಗಿ ಶಿವಪೂಜಾಕ್ರಮವು ವಿವರಿಸಿದೆ" ಎಂದು ತಿಳಿಸುವ ಕರ್ನಾಟಕ ಕವಿ ಚರಿತವು ತನ್ನ ಅಡಿಟಿಪ್ಪಣಿಯಲ್ಲಿ–

ವೀರಶೈವ ಕ್ರಮಾಚಾರ ಪೂಜಾಪದ್ಧತಿರುಚ್ಯತೇ |
ನಿರ್ವಾಣಮಂತ್ರಿ ವರ್ಯೇಣ ವೇದ ಶಾಸ್ತ್ರಾನು ಸಾರಿಣೀ ||
ಎಂದಿದೆ.

---

[93]ಮಾನಪ್ಪ ಪಂಡಿತನ ಮಗನೂ. ಸಂಗನಬಸವನ ತಂದೆಯೂ ಆದ ನಿರ್ವಾಣಾರ್ಯ ಅಥವಾ ನಿರ್ವಾಣಶೆಟ್ಟಿಯು ಮಂಗಳೂರು, ಬಾರಕೂರು, ತೋನ್ಸೆ, ಕಟೀಲು, ಗುರುಪುರ, ಉಡುಪಿ ಮೊದಲಾದೆಡೆಗಳಲ್ಲಿ ಸುಮಾರು 64 ಮಠಗಳ ನಿರ್ಮಾಣಕ್ಕೆ ಕಾರಣನಾಗಿದ್ದಾನೆ. ಈತನ ವಂಶೀಕರು ಇಂದಿಗೂ ಮಂಗಳೂರು ಹತ್ತಿರದ ಕಾಡುಮಠ ಎಂಬಲ್ಲಿದ್ದಾರೆ. ಈ ವಂಶದ ಮಹಾಬಲಶೆಟ್ಟಿ ಎಂಬವರಿಗೆ ಸಾಸಲಿನ ಈಗ ತಿಪಟೂರಿನಲ್ಲಿರುವ ಕೊಬ್ಬರಿ ವ್ಯಾಪಾರಿಗಳು 'ಸಾಸಲು ಬ್ರದರ್ಸ್' (ನೀಲಕಂಠಪ್ಪ, ಸಿದ್ಧಲಿಂಗಪ್ಪ, ಗಂಗಾಧರಪ್ಪ) ರವರ ದಿವಂಗತ ಎಸ್. ಪಿ. ಸಿದ್ಧಲಿಂಗಪ್ಪನವರ ಪುತ್ರಿ ಪ್ರಭಾದೇವಿ ಎಂಬ ಕನ್ಯೆಯನ್ನು ಕೊಟ್ಟಿದೆ.

ಅನುಬಂಧ 12 ನೋಡಿ.

[94]ಕ. ಕ. ಚ. III, ಪು. 28
M. A. R. 1961, P. 68 ; Ibid. 1943 P 144 ; E. C. VII. TL. 6, 87, 183, 184; Ibid. 1933, P. 199.

[95]ಕ. ಕ. ಚ. ಪು. 327.

ಈ ಬಗ್ಗೆ ಇದಿಷ್ಟೇ ಅಂಶ ವೇದ್ಯವಾಗುವುದು. ಏಕೆಂದರೆ ಕರ್ನಾಟಕ ಕವಿಚರಿತೆ ಕಾರರಿಗೆ ಸಿಕ್ಕ ಗ್ರಂಥ ನಮಗೆ ಸಿಕ್ಕಿಲ್ಲ. ನಮಗೆ ಸಿಕ್ಕ ಗ್ರಂಥವು[೨೬] ಹೆಸರಿಗೆ ಮಾತ್ರ ಶಿವಪೂಜಾ ವಿಧಾನವೆಂದಿದ್ದು, ಆ ಕಟ್ಟಿನಲ್ಲಿ ಹಲವು ಗ್ರಂಥಗಳು ಸೇರಿಕೊಂಡಿರುವುದು ಕಂಡು ಬಂದಿತು. ಶಿವಪೂಜಾವಿಧಾನವನ್ನು ಸಂಸ್ಕೃತದಲ್ಲಿ ಹೇಳುವ ಗರಿಗಳು ೬+೨ ಮಿಕ್ಕವು.

೧) ರಸಸಿಂಧೂರ ಮಾಡುವ ಕ್ರಮ ೧ ಗರಿ

೨) ಪರಮಾರ್ಥಗೀತೆ ೧೬ ಗರಿ

೩) ಗುರುಬಸವನ ಮನೋವಿಜಯ ೨೧ ಗರಿ

೪) ಪರಮ ರಹಸ್ಯ ೨೩ ಗರಿ

೫) ಅನುಭವ ಸೂತ್ರ ೧೦೧ ಗರಿ ಇರುವ ಒಂದು ಸಂಕಲನ.

---

[೨೬] ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ನಂ. 175 (ಓಲೆಪ್ರತಿ)

## IX ಸಂಗನ ಬಸವಪ್ಪ (ಕ್ರಿ. ಶ. ೧೭೫೦)

ಕೆಳದಿಯ ಅನೇಕ ಕವಿಗಳಿಗೆ ಉಂಟಾದ ದುಃಸ್ಥಿತಿ ನಿರ್ವಾಣಯ್ಯನ ಮಗ ಸಂಗನಬಸವನಿಗೂ ಒದಗಿದೆ. ಇವನದೆಂದು ಹೇಳುವ "ವೀರಶೈವಸುಧಾನಿಧಿ" ಕನ್ನಡ ಟೀಕು ದೊರೆಯುತ್ತಿಲ್ಲ. ಅದಿರಲಿ ಕೆಳದಿ ನೃಪವಿಜಯವು ಮೌನಪ್ಪ, ಅವನ ಮಕ್ಕಳು ನಿರ್ವಾಣಯ್ಯ, ಚೆನ್ನಬಸವಪ್ಪ, ಗುರುವಪ್ಪ, ಇವರ ವಿಚಾರವನ್ನು, ನಿರ್ವಾಣಯ್ಯನ ಮಗಳು ನೀಲಮ್ಮಾಜಿ, ಅವರ ಮಗ ಗುರುವಪ್ಪ ಅವರ ಮಗ ಚೆನ್ನಪ್ಪ ಅಥವಾ ಕೆಳದಿಯನ್ನಾಳಿದ (ಕ್ರಿ. ಶ. ೧೭೫೫-೫೮) ಚೆನ್ನಬಸವಪ್ಪನಾಯಕ ಇವಿಷ್ಟನ್ನೂ ತಿಳಿಸಿ, ನಿರ್ವಾಣಯ್ಯನ ಮಗ ಸಂಗನ ಬಸವಪ್ಪನ ಹೆಸರನ್ನೇ ಹೇಳುವುದಿಲ್ಲ. ಆದರೂ ಸಂಗನ ಬಸವಪ್ಪನು ತನ್ನ ಟೀಕುವಿನಲ್ಲಿ ತಾನಾರೆಂಬುದನ್ನು ಹೇಳಿಕೊಂಡಿದ್ದಾನೆಂದು ಕವಿಚರಿತೆ ತಿಳಿಸುತ್ತದೆ.[97] ಇವನ ಕಾಲ ಸುಮಾರು ಕ್ರಿ. ಶ. ೧೭೫೦.

"ಇತಿ ಶ್ರೀ ನಿಖಿಲ ನಿಗಮಾಗಮಸಾರ ಪಾರಾವಾರ ಮಂಥಮಂಥಾಯಮಾನಾಶೇಷ ಮನೀಷಿತೋಷ ಕುಮನೀಷಾದರ್ಶಬಿಂಬ ಹೃದ್ಯಾನವದ್ಯ ಷಟ್ಸ್ಥಲ ವಿದ್ಯಾ ವೈಭವ ವಿಖ್ಯಾತ ಗುರುಬಸವ....ದೇಶಿಕೇಂದ್ರ ವಿರಚಿತಸ್ಯ ವೀರಶೈವ ಸುಧಾನಿಧಿ ನಾಮಧೇಯಸ್ಯ ಪ್ರಬಂಧಸ್ಯ ಶ್ರೀಮದ್ವೀರಶೈವ ಮಾರ್ಗಪ್ರವರ್ತಕ ಲಿಂಗಾಂಗ ಸಾಮರಸ್ಯ ಯೋಗ ರಹಸ್ಯಾಬ್ಧಿ....ಮಂತ್ರಿವರ್ಯ ಗರ್ಭಾಬ್ಧಿ ಕೌಸ್ತುಭ ಶ್ರೀಮನ್ನಿರ್ವಾಣಾಚಾರ್ಯ ತನೂಭವ ಸಂಗನ ಬಸವಪ್ಪ ನಿರ್ಮಿತ ಕರ್ಣಾಟ ಭಾಷಾ ಟೀಕಾಯಾಂ"[98]

—ಎಂಬ ಗ್ರಂಥಾಂತ್ಯದ ಈ ಮಾತುಗಳಿಂದ ಈತನು ನಿರ್ವಾಣಮಂತ್ರಿಯ ಮಗನೆಂತಲೂ, ತನ್ನ ಹೆಸರು ಸಂಗನ ಬಸವಪ್ಪನೆಂತಲೂ, ಶ್ರೀ ಗುರುಬಸವ ದೇಶಿಕೇಂದ್ರರಿಂದ ರಚಿತವಾದ "ವೀರಶೈವ ಸುಧಾನಿಧಿ" ಎಂಬುದಕ್ಕೆ ಕನ್ನಡ ಭಾಷೆಯಲ್ಲಿ ಟೀಕು ಬರೆದಿರುವುದಾಗಿಯೂ ತಿಳಿಯುತ್ತದೆ. ಆದರೆ ಇವನ ಗ್ರಂಥ ಸಿಕ್ಕಿಲ್ಲ. ಆದರೂ ಮೂಲಗ್ರಂಥವೇ ಇರುವುದರಿಂದ ಇವನ ಟೀಕುವನ್ನು ನೆನೆಯಬಹುದು.

ನಿರ್ವಾಣಾರ್ಯನ ಪ್ರಾರ್ಥನೆಯಂತೆ ವೀರಶೈವಾಚಾರಕ್ಕೆ ಸಂಬಂಧಿಸಿದ "ವೀರಶೈವಾಚಾರ ಸುಧಾನಿಧಿ"ಯನ್ನು ರಚಿಸುವುದಾಗಿ ಗುರುಬಸವ ದೇಶಿಕೇಂದ್ರನು ಹೇಳಿಕೊಂಡು[99] – ಐದು ಪ್ರಕರಣಗಳುಳ್ಳ ಒಂದು ಧಾರ್ಮಿಕ ಗ್ರಂಥವನ್ನು ನೀಡಿದ್ದಾನೆ.

---

[97] ಕ. ಕ. ಚ. III, ಪು. 61–62.

[98] ಅದೇ.

[99] ವೀರಶೈವ ಸುಧಾನಿಧಿ ಶ್ಲೋಕ 20 (20) (ಗಂ. 48 ರಿಂದ 114 ರವರೆಗೆ) O.RI. No. 5287.

ಪ್ರಥಮ ಪ್ರಕರಣ : ಉಪೋದ್ಘಾತ

ದ್ವಿತೀಯ ಪ್ರಕರಣ : ೧) ವೀರಶೈವ ಮತ ಪ್ರಕರಣ
೨) ಭಕ್ತಿಪ್ರಶಂಸ
೩) ಲಿಂಗಧಾರಣ ಮಹಿಮಾ
೪) ತ್ರಿಪುಂಡ್ರಧಾರಣ ಮಹಿಮಾ
೫) ರುದ್ರಾಕ್ಷಿಧಾರಣ
೬) ಪಂಚಾಕ್ಷರೀ ಜಪವಿಧಿ

ತೃತೀಯ ಪ್ರಕರಣ : ೧) ಗುರುತತ್ತ್ವ ಸ್ವರೂಪ
೨) ಗುರುತತ್ತ್ವ ಮಹತ್ವ
೩) ಗುರುತತ್ತ್ವ ಯಾತ್ರಾ
೪) ಗುರುತತ್ತ್ವ ಲೇಖನ
೫) ಪಾದೋದಕ ವಿಚಾರ

ಚತುರ್ಥ ಪ್ರಕರಣ : ೧) ಜಂಗಮ ಲಕ್ಷಣ
೨) ಚರಪಾದೋದಕ ಮಹಿಮಾ
೩) ಶಿವಪ್ರಸಾದ ಮಹಿಮಾ
೪) ವೀರಮಾಹೇಶ್ವರದಾನ ವಿಧಿ

ಪಂಚಮ ಪ್ರಕರಣ : ೧) ಸಹಜದಾನ ಪ್ರಶಂಸಾ
೨) ಮಂತ್ರಮಹಿಮೆ
೩) ವೀರಶೈವದ ಘನತೆ
೪) ಜಂಗಮ ಮಹತ್ವ
೫) ವೀರಮಾಹೇಶ್ವರ ದರ್ಶನ ಮಹಿಮಾ
೬) ವೀರಶೈವ ಮತಸ್ಥಾಪಕ ಸ್ವರೂಪ
೭) ವೀರಶೈವ ಶಾಸ್ತ್ರ ಶ್ರವಣ ಫಲ

—ಇತ್ಯಾದಿ ವೀರಶೈವ ಧರ್ಮಕ್ಕೆ ಅನುಗುಣವಾದ, ಆಚಾರ ಯೋಗ್ಯವಾದ ವಿಧಿವಿಧಾನಗಳನ್ನು ತಿಳಿಸಿದ್ದಾನೆ. ಗ್ರಂಥಾಂತ್ಯದಲ್ಲಿ –

"ಇತಿಶ್ರೀ ನಿಖಲನಿಗಮಾಗಮಸಾರ ಪಾರಾವಾರ
ಮಂಥ ಮಂಥಾಯ ಮಾಸಾಶೇಷಮಸೀಷಿ
ತೋಷಕ ಮನೀಷಾದರ್ಶಬಿಂಬ ಹೃದ್ಯಾನವಂದ್ಯ
ಷಟ್ಸ್ಥಲವಿದ್ಯಾ ವೈಭವ ವಿಖ್ಯಾತ ಗುರುಬಸ
ವಾಖ್ಯ ದೇಶಿಕೇಂದ್ರ ವಿರಚಿತೇ ವೀರಶೈವ
ಸುಧಾನಿಧಾ" ಯಿತಿ ಸಂಪೂರ್ಣಂ ಮಂಗಳಂ
ಮಹಾ ಶ್ರೀ ಶ್ರೀ ಶ್ರೀ"

ಎಂದಿದೆ. ಇದಕ್ಕೆ ಸಂಗನ ಬಸವಪ್ಪನು ವೀರಶೈವ ರೀತ್ಯಾ ಕನ್ನಡ ಟೀಕು ಬರೆದಿರ ಬಹುದು.

ಗುರುಬಸವ ದೇಶಿಕೇಂದ್ರನು ಈ ಕೃತಿಯ ಅಂತ್ಯದಲ್ಲಿ ಒಂದೆಡೆ ಹೀಗೆ ಹೇಳಿದ್ದಾನೆ—

"ಶೈವಪ್ರಮೋದಾಂಬುಧಿ ವೃದ್ಧಿದಾಯೀ ।
ಗಾಡಾಂಧ ರಧ್ವಾಂತ ನಿರಾಸದಕ್ಷಃ ।
ಆಚಂದ್ರತಾರಂ ಭುವಿವೀರಶೈವ ।
ಸುಧಾನಿಧಿಃ ಸರ್ವಸುಖಾಯ ಭೂಯಾತ್ ॥ ೨ ॥

—ಆದರೆ ಆ ಚಂದ್ರತಾರಂಬರಂ ಬಾಳುವ ಭಾಗ್ಯ ನಮ್ಮ ಸಂಗನ ಬಸವಪ್ಪನ "ವೀರಶೈವ ಸುಧಾನಿಧಿ ಕರ್ಣಾಟಕ ಟೀಕು" ವಿಗಿಲ್ಲ.

# X. ಲಿಂಗಣ್ಣ ಕವಿ (ಕ್ರಿ.ಶ. ೧೭೫೦)

ಲಿಂಗಣ್ಣ ಕೆಳದಿಯ ಸಂಪನ್ನ ಕವಿ, ಪುಣ್ಯ ಕವಿ. "ಕವಿ" ಎಂಬ ಉಪಸರ್ಗವು ಈ ವಂಶೋದ್ಭವರಿಗೆಲ್ಲಾ ಪಾರಂಪರ್ಯವಾಗಿ ಅಂಟಿಕೊಂಡು ಬಂದದ್ದು ಕವಿ ಲಿಂಗಣ್ಣನ ಅನಂತರದಲ್ಲಿ ಎಂದು ತೋರುತ್ತದೆ. ಈತನ ತಂದೆ ವೆಂಕಟಪ್ಪ, ತಾಯಿ ಬಹುಶಃ ಆನೆಗೊಂದಿಯಿಂದ ಬಂದ ಜೋಯಿಸರ ಮನೆತನದವರಿರಬಹುದು.[100] ಅಂತೂ ಇವನದು ಸಂಸ್ಕಾರಗೊಂಡ ಚೇತನ. ಕೆಳದಿಯ ಕಿರಿಯ ಬಸವಪ್ಪನಾಯಕನ ಆಸ್ಥಾನ ಕವಿಯಾಗಿದ್ದುಕೊಂಡು ಹಲವು ಕಾವ್ಯಗಳನ್ನು ರಚಿಸಿ ಕನ್ನಡದ ಸೇವೆ ಸಲ್ಲಿಸಿದ್ದಾನೆ. ಇವನ ಕಾಲ ಕ್ರಿ.ಶ. ಸುಮಾರು ೧೭೫೦. ಕಿರಿಯ ಬಸವಪ್ಪನ ಕಾಲದ ಕೆಳದಿಯ ಸುವರ್ಣಯುಗವನ್ನೂ ಕಂಡಿದ್ದಾನೆ, ಅದು ಹಾಳಾದ ದುರಂತ ಚಿತ್ರವನ್ನೂ ಕಂಡಿದ್ದಾನೆ. ದಾರುಣವಾದ ಬದುಕು ಬದುಕಿದ್ದಾನೆ ಕಡೆಯಲ್ಲಿ. ರಾಜಾಶ್ರಯ ತಪ್ಪಿ, ಮಕ್ಕಳೂ ಬೇರೆ ಬೇರೆಯಾಗಿ ಲಿಂಗಣ್ಣ ತುಂಬಾ ಕಷ್ಟವನ್ನನುಭವಿಸಿದ್ದಿರಬೇಕು. ಏನೇ ಇರಲಿ ಇವನ ಕಾವ್ಯಗಳು ಚಿರಂತನವಾದವುಗಳು.

ಕವಿ ಲಿಂಗಣ್ಣನ ಕಾವ್ಯಗಳು ಒಟ್ಟು ಐದು.

ಕೃತಿಗಳು :—

ಅ) ಕೆಳದಿ ನೃಪ ವಿಜಯ

ಆ) ಶಿವಪೂಜಾದರ್ಪಣ

ಇ) ಪಾರ್ವತೀ ಪರಿಣಯ

ಈ) ದಕ್ಷಾಧ್ವರ ವಿಜಯ

ಉ) ಶಿವಕಲ್ಯಾಣ.

ಇವುಗಳಲ್ಲಿ ಕೆಳದಿನೃಪವಿಜಯವನ್ನು[101] ಬಿಟ್ಟರೆ ಮಿಕ್ಕ ನಾಲ್ಕೂ ಗ್ರಂಥಗಳು ಪ್ರಕಟವಾಗಿಲ್ಲ. ಶ್ರೀ ಎ.ಆರ್. ಕೃಷ್ಣಶಾಸ್ತ್ರಿಗಳವರು ಈ ಕೃತಿಗಳನ್ನೆಲ್ಲಾ ನೋಡಿದ್ದಿರಬೇಕು. "ಆತನ ವಂಶಸ್ಥರಾದ (ಮತ್ತೆ ಅದೇ ಹೆಸರಳ್ಳ) ಮ|| ರಾ|| ಕವಿಲಿಂಗಣ್ಣಯ್ಯ

---

100 ಅನುಬಂಧ. ಆ

101 ಆರ್. ಶಾಮಾಶಾಸ್ತ್ರಿ ಸಂಪಾದಿತ ಕೆಳದಿನೃಪವಿಜಯ.
Mysore Oriental Library Publications, Kannada Series No. 9, 1921.

ನವರು[102] ತಮ್ಮ ವಂಶದಲ್ಲಿ ಎಲ್ಲರೂ ಕವಿಗಳಾಗಿದ್ದಾರೆಂದು ಹೇಳಿದುದಲ್ಲದೆ ಅದಕ್ಕೆ ಆಧಾರವಾಗಿ ಅವರ ಪೂರ್ವಿಕರು ಬರೆದ ಕೆಲವು ಗ್ರಂಥಗಳನ್ನು ತೋರಿಸಿದರು" ಎಂದಿದ್ದಾರೆ ಶ್ರೀ ಎ. ಆರ್. ಕೃ. [103] ಆ ಗ್ರಂಥಗಳೇ ಈ ಮೇಲೆ ಹೇಳಿದವುಗಳು. "ಶಿವಕಲ್ಯಾಣ" ಯಕ್ಷಗಾನವನ್ನೂ ಅವರೊಮ್ಮೆ ತಿರುವಿ ಹಾಕಿ ನೋಡಿರುವುದು ಉಂಟು.

ಕವಿ ಲಿಂಗಣ್ಣನು ತನ್ನ ಕೃತಿಗಳಲ್ಲೆಲ್ಲಾ ತನ್ನ ಹೆಸರನ್ನೂ, ಕೃತಿಯನ್ನೂ ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆ. ಕೆಳದಿ ನೃಪವಿಜಯಕ್ಕೆ ಸಂಬಂಧಿಸಿದ ಒಂದು ಗರಿಯಲ್ಲಿ "ತಿಳಿಯಲ್ಕೀ ಕೃತಿನಾಮಂ ॥ ಕೆಳದೀ ನೃಪವಿಜಯಮುಂದಿದಕ್ಕಧಿನಾಥಂ ॥ ಕೆಳದಿಪ ರಾಮೇಶ್ವರನಿದ ॥ ನೊಲದುಸುರ್ದಂ ವೆಂಕಪಾತ್ಮಜಂ ಲಿಂಗಬುಧಂ ॥" ಎಂದು ಒಂದೆಡೆ ಹೇಳಿಕೊಂಡಿದ್ದಾನೆ.[104]

---

[102] ಮೈಸೂರು ಸಂಸ್ಥಾನದಲ್ಲಿ ಡೆಪ್ಯುಟಿ ಕಮಿಷನರಾಗಿದ್ದು ಕೆಲಕಾಲ ಮೈಸೂರು ಅರಸರ ಆಪ್ತ ಕಾರ್ಯದರ್ಶಿಗಳಾಗಿದ್ದು ಸಾಗರದ ಕವಿ ಲಿಂಗಣ್ಣಯ್ಯನವರು ನಾಡಿನ ಸೇವೆ ಸಲ್ಲಿಸಿದ್ದಾರೆ. ಶ್ರೀಯುತರು ಚಿತ್ರರಾಮಾಯಣ, ಚಿತ್ರಭಾಗವತ ಬರೆದಿದ್ದಾರೆ. ಶ್ರೀಯುತ ಎಸ್.ಕೆ. ಲಿಂಗಣ್ಣಯ್ಯನವರ ಮಗಳೊಬ್ಬರನ್ನು ಕೆಳದಿಗೆ ಕೊಟ್ಟಿದೆ. ಈ ತಾಯಿ ಈಗಲೂ ಕೆಳದಿಯಲ್ಲಿದ್ದಾರೆ. ಅವರ ಮಕ್ಕಳಾದ 'ಕೆಳದಿ ಸಂಕಿಪ್ತ ಇತಿಹಾಸ'ದ ಮುಖಾಂತರ ಕರ್ಣಾಟಕದಲ್ಲಿ ಪ್ರಸಿದ್ಧರಾಗಿರುವ ಕೆಳದಿ ಗುಂಡಾಜೋಯಿಸರು ಹೇಗೋ ಈ ಗ್ರಂಥಗಳನ್ನು ಜೋಪಾನ ಮಾಡಿಕೊಂಡಿದ್ದು ಈ ವೇಳೆಯಲ್ಲಿ ನಮಗಿತ್ತು ತುಂಬಾ ಉಪಕಾರ ಮಾಡಿದ್ದಾರೆ. ರಾಜಾಶ್ರಯ ತಪ್ಪಿದಮೇಲೆ ಈ ಕೃತಿಗಳು ಪ್ರತಿಗಳಾಗದೆ ಕೇವಲ ಒಂದೋ ಎರಡೋ ಉಳಿದುಕೊಂಡವೆಂದು ತೋರುತ್ತದೆ. ಅವು ಇದ್ದುದು ಅವರ ಮನೆಯಲ್ಲೇ. ಹೀಗಾಗಿ ಕೃತಿಗಳು ಅಲ್ಲಲ್ಲಿ ಹಾಳಾಗಿದ್ದರೂ ಅಲ್ಪಸ್ವಲ್ಪವಾದರೂ ಉಳಿದಿವೆಯೆಂದು ಸಂತೋಷಪಡಬೇಕಾಗಿದೆ.

[103] ಕೆ.ನೃ.ವಿ. ಉಪೋದ್ಘಾತ ಪು. 5

ಹಿ. ಚಿ. ಶಾಂತವೀರಯ್ಯನವರೊಡನೆ ಬೆಂಗಳೂರಿನಲ್ಲಿ ಪೂಜ್ಯ ಎ.ಆರ್.ಕೃ. ರವರನ್ನು ಸಂದರ್ಶಿಸಿ ಈ ಬಗ್ಗೆ ವಿವರ ಕೇಳಿದಾಗ, ಹೌದಪ್ಪಾ ನೋಡಿದ ನೆನಪು ಇದೆ, ಆದರೆ ಪುಸ್ತಕಗಳು ಯಾವುವೆಂಬ ವಿವರ ತಿಳಿಯದು ; ಬಹಳ ದಿನಗಳಾಯಿತು–ಎಂದಿಷ್ಟೇ ಹೇಳಿದರು.

[104] ಇದು ಕೆಳದಿ ನೃಪವಿಜಯದ ಎರಡನೆಯ ಗರಿ. ಇದಕ್ಕೂ ಮೊದಲಿನ ಒಂದನೆಯ ಗರಿ ಸಿಕ್ಕಿಲ್ಲ. ಕೆ.ನೃ.ವಿ. ಸಂಪಾದಕರಿಗೆ ನಮಗೆ ಸಿಕ್ಕಿರುವ ಎರಡನೆಯ ಗರಿಯೂ ಸಿಕ್ಕಿದಂತಿಲ್ಲ. ನೋಡಿ. ಅನುಬಂಧ ೧೭.

## ೮) ಕೆಳದಿನೃಪವಿಜಯಂ:

ಕೆಳದಿಯ ಪ್ರಸಿದ್ಧ ಕವಿ ಲಿಂಗಣ್ಣನಿಂದ ವಿರಚಿತವಾದ "ಕೆಳದಿನೃಪವಿಜಯು"ವು ಕನ್ನಡದ ಒಂದು ಪ್ರಸಿದ್ಧ ಐತಿಹಾಸಿಕ ಕಾವ್ಯ. ಇದಕ್ಕೂ ಹಿಂದೆ ತಿರುಮಲಾರ್ಯನಿಂದ (ಕ್ರಿ.ಶ. ೧೬೫೦) ಚಿಕ್ಕದೇವರಾಜ ವಿಜಯುವೂ, ವೇಣುಗೋಪಾಲ ವರಪ್ರಸಾದ ಎಂಬವನಿಂದ ೧೬೮೦ರಲ್ಲಿ ಚಿಕ್ಕದೇವರಾಜ ವಂಶಾವಳಿಯೂ ರಚಿತವಾಗಿವೆ. ಆದರೆ ಇವೆರಡರ ಉದ್ದೇಶವೇ ಬೇರೆ. ಕೇವಲ ತಮಗೆ ಆಶ್ರಯವಿತ್ತ ಪ್ರಭುವಿನ ಪ್ರತಾಪಾದಿ ಗಳನ್ನು ಚಿತ್ರಿಸುವುದೇ ಅವರ ಗುರಿ. ಪ್ರಾಸಂಗಿಕವಾಗಿ ಆತನಿಗಿಂತ ಅಂದರೆ ಚಿಕ್ಕ ದೇವರಾಜನಿಗಿಂತ ಹಿಂದೆ ಆಳಿದ ಮೈಸೂರರಸರ ಇತಿಹಾಸವನ್ನು ತಿಳಿಸುವುದೇ ಆಗಿದೆ. ಆದರೆ ಕೆಳದಿನೃಪವಿಜಯ ಹಾಗಲ್ಲ. ಕವಿ ಲಿಂಗಣ್ಣನು ಕಿರಿಯ ಬಸವಪ್ಪನಾಯಕನ ಆಸ್ಥಾನ ಕವಿಯಾಗಿದ್ದು ಅನಂತರ ಚನ್ನಬಸವಪ್ಪನಾಯಕ, ಚನ್ನವೀರಮ್ಮಾಜಿ, ದತ್ತಕ ಮುಮ್ಮಡಿ ಸೋಮಶೇಖರನ ಕಾಲದಲ್ಲೂ ಇದ್ದು, ಕೆಳದಿಯ ಸತ್ವ ಸತ್ತು ಹೈದ ರನ ಅಧೀನವಾದ ಮೇಲೂ ತಾನು ಬದುಕಿದ್ದು ಇಡೀ ಕೆಳದಿಯನ್ನಾಳಿದ ವಂಶಜರ ವೀರವೈಭವಗಳನ್ನು ಚಿತ್ರಿಸಿದ್ದಾನೆ. ತಿರುಮಲಾರ್ಯ ಅಥವಾ ವೇಣುಗೋಪಾಲರಂತೆ ಕೇವಲ ತನಗೆ ಆಶ್ರಯ ಕೊಟ್ಟ ಅರಸನ ಬಗ್ಗೆ ಪೂರ್ಣ ಅಭಿಮಾನವಿದ್ದು ಉಳಿದವರನ್ನು ಪ್ರಾಸಂಗಿಕವಾಗಿ ತರುವ ಉದ್ದೇಶ ಇವನದಲ್ಲ. ಈತ ಒಂದು ವಿಧದಲ್ಲಿ ಕಾವ್ಯರಚನೆ ಯಲ್ಲಿ ನಿರ್ಲಿಪ್ತನಾಗಿದ್ದಾನೆ. ಕೆಳದಿಯ ಸಮಗ್ರ ಇತಿಹಾಸವನ್ನು ದೂರದಲ್ಲಿ ನಿಂತು ವಸ್ತುನಿಷ್ಠ ದೃಷ್ಟಿಯಿಂದ ನೋಡಿ ಅದನ್ನು ಅತ್ಯಂತ ಪ್ರೀತಿ ಆದರಗಳಿಂದಲೇ ಕೈಗೆತ್ತಿ ಕೊಂಡು ರಚಿಸಿದ್ದಾನೆ. ಕೆಳದಿಯ ಲಿಂಗಣ್ಣನಿಗೆ ಆಶ್ರಯ ಕೊಟ್ಟ ರಾಜನಷ್ಟೇ ಆ ವಂಶದ ಪೂರ್ವಜರೂ, ಅನಂತರದವರೂ ಪ್ರೀತಿಗೆ, ಗೌರವಕ್ಕೆ ಪಾತ್ರರಾದರು. ಆ ಸದ್ಭಾವನೆಯಿಂದಲೇ ಲಿಂಗಣ್ಣ ಕವಿ ಕಾವ್ಯ ರಚನೆ ಮಾಡಿಕೊಂಡು ಹೋಗಿದ್ದಾನೆ; ತನ್ನಲ್ಲಿದ್ದ ರಾಜಭಕ್ತಿಯನ್ನು ಪ್ರಕಟಿಸಿದ್ದಾನೆ.

ಕೆಳದಿನೃಪವಿಜಯ ಚಂಪೂಗ್ರಂಥ;[105] ಹನ್ನೆರಡು ಆಶ್ವಾಸಗಳಿಂದ ಕೂಡಿದೆ. ಇದರಲ್ಲಿ ಕೆಳದಿಯನ್ನಾಳಿದ ಇಪ್ಪತ್ತು ಜನರನ್ನೂ ಹದಿನೆಂಟು ಆಶ್ವಾಸನಗಳಲ್ಲಿ ವಿಚಾರಿಸಿ ಕೈಬಿಟ್ಟಿದ್ದಾನೆ. ಇತಿಹಾಸಕ್ಕೆ ದ್ರೋಹ ಬಗೆಯದೆ, ಸಾಹಿತ್ಯಕಲೆಗೆ ಭಂಗತಾರದೆ ತನ್ನ ಪ್ರಾಮಾಣಿಕತೆಗೂ, ಸ್ವಾಮಿನಿಷ್ಠೆಗೂ ತರ್ಪಣ ಕೊಡದೆ ಲಿಂಗಣ್ಣ ನಿಜಕ್ಕೂ

---

[105] ನಮಗೆ ಸಿಕ್ಕಿದ ಎರಡನೆಯ ಗರಿಯಲ್ಲಿ ಕವಿ "ವಸ್ತುಕ ಭಣತೆಯೋಳಿ ದಿಪ್ಪಂತುಸಿರ್ವೆನಾಲಿಪುದು ಸುಜನರ್ಕಳ್" ಎಂದು ಹೇಳಿದ್ದಾನೆ. ಅನುಬಂಧ—ಅದೇ.

ಯಶಸ್ವಿಯಾಗಿದ್ದಾನೆ. [106] "ಮೊದಲಿನಿಂದ ಕೊನೆಯವರೆಗೆ ಮುಖ್ಯವಾಗಿ ಕೆಳದಿಯ ನಿಜಕ್ಕೂ ಅರಸರ ಚರಿತ್ರೆಯೂ, ಪ್ರಾಸಂಗಿಕವಾಗಿ ಚಿತ್ರದುರ್ಗದ ನಾಯಕರು, ಬೇಲೂರು ಅರಸರು, ವಿಜಯನಗರದ ಅರಸರು, ಸಾಹಿರಾಜರು, ಮರಾಠರಾಜರು, ಡಿಳ್ಳಿಯ ಸುಲ್ತಾನರು ಇವರ ವಿಷಯವೂ ಹೇಳಿದೆ. ಶಾಸನಗಳನ್ನು ನೋಡಿದರೆ ಇಲ್ಲಿ ಹೇಳಿರುವ ಕೆಳದಿಯ ಅರಸರ ಕಾಲ ಕಾರ್ಯಾದಿಗಳು ಸತ್ಯವೆಂದು ಹೇಳಬೇಕಾಗುತ್ತದೆ. ರೈಸ್ ಪಂಡಿತರೂ ಹಾಗೆಯೇ ಒಪ್ಪಿಕೊಂಡಿದ್ದಾರೆ. [107]

ಉಪಲಬ್ಧವಿರುವ 2ನೆಯ ಗರಿಯಲ್ಲಿ
ಕುಲ್ಲಕ ನೃಪಾಲರ ಕಥೆ ।
ಯಲ್ಲಿದು ಶಿವಚರಣ ಜನ ಶಿರೋಮಣಿಗಳೆನಿ
ಪುಲ್ಲಸಿತ ಕೆಳದಿ ಧರಣೀ ।
ವಲ್ಲಭರ ಚರಿತ್ರಮಿಳೆಗೆ ಪರಮ ಪವಿತ್ರಂ ॥ (—ಪದ್ಯ ೧೬)

—ಎಂದು ಕವಿ ಕೆಳದಿ ನೃಪಾಲರ ಬಗ್ಗೆ ವಿಶೇಷ ಭಕ್ತಿ ಆದರಗಳಿಟ್ಟುಕೊಂಡೇ ಕೃತಿ ರಚನೆಗೆ ಕೈಹಾಕಿರುವುದು ಕಂಡುಬರುತ್ತದೆ. "ಪ್ರಾಕೃತ ಸಂಸ್ಕೃತ ಮೃದು ಭಾಷಾ ಕವನದಿಂದ ಅಧಿಕ ರಮ್ಯವಾಗಿರುವುದರಿಂದ ಈ ಶ್ರೀ ಕೆಳದಿನೃಪವಿಜಯಮೆನಿಪೀ ಕಾವ್ಯವು ಸೇವ್ಯವೆನಿಸಿ ಶೋಭಿಸು"ತ್ತಿದೆಯಂತೆ. ಹಿರಿಯರು ತಮ್ಮ ಮಕ್ಕಳ ತೊದಲು ನುಡಿಗಳನ್ನು ಲಾಲಿಸಿದಂತೆ ತನ್ನ ಕೃತಿಯಲ್ಲಿ "ಕೊಂಕುಂ ಕೊಸರುಗಳಿರೆ ತಿದ್ದಿಯೊಪ್ಪು ಗೊಳ್ವುದು ಸುಜನರ್" ಎಂದು ತನ್ನ ವಿನಯವನ್ನು ಮೆರೆದು, ಕುಕವಿ ನಿಂದೆ ಮಾಡಿ, ದೊರೆವೆತ್ತುಜ್ವಲ ವೀರಶೈವ ಕೆಳದೀ ಭೂಪಾಲ ಚಾರಿತ್ರವನ್ನು ಕೇಳ್ದರಿಗೆ ಕೆಳದೀ ಪುರೇಶನಾದ ಶ್ರೀ ರಾಮೇಶನು ವಾಂಛಿತವನ್ನಿತ್ತು ಆಚಂದ್ರಾರ್ಕಂ ಪೊರೆವನೆಂಬುದಾಗಿ ಹೇಳಿ ಕಾವ್ಯಾರಂಭಕ್ಕೆ ಕೈಹಾಕಿದ್ದಾರೆ.

ಕಾವ್ಯರಚನೆಯ ಪದ್ಧತಿಯಂತೆ ಸಾಗರವರ್ಣನೆ, ಜಂಬೂದ್ವೀಪ, ಕನಕಾಚಲ, ಹಿಮಾಚಲ ಅದರ ದಕ್ಷಿಣದಲ್ಲಿರುವ ಭರತಖಂಡ, ಅದರ ತೆಂಕಣಾಶಾಭಾಗದಲ್ಲಿರುವ 'ನಾನಾ ವಿಧವರ್ಣಾಶ್ರಮ ಸುಖಸಂಪತ್ಸಮಾಜಕಾಸ್ಪದಮೆನಿಸಿ ಮೆರೆವ ಕನ್ಯಾಖಂಡ ಪ್ರದೇಶ, ಅದರಲ್ಲಿರುವ ಸಹ್ಯಾದ್ರಿ, ಕರ್ಣಾಟಕದೇಶ—

---

106 "Hence, the account given by K.N.V. is the most correct one, and is as histoically true as it is poetically artistic. Here history and poetry go hand in hand. There is no sacrificing of the historical fact for the sake of the poetical skill as is generally if not invariably seen in many champu works."
Kadadevara Math, Keladi Literature, P. 23.

107 ಎ.ಆರ್.ಕೃ. ಕೆ.ನೃ.ವಿ. ಉಪೋ. ಪು. viii.

ಅದರೊಳ್ ವೈವೆಯಿನೆಸೆವಾ ।
ತ್ರಿದಶತರಂಗಿಣಗಮಧಿಕಮೆನಿಸುವ ವರದಾ ।
ನದಿಮೂಲವೊಪ್ಪುಗುಂ ತ ।
ನ್ನದಿಯುತ್ತರ ತಟದೊಳರ್ಧಯೋಜನದೆಡೆಯೊಳ್ ॥ (—ಪು. ೭)

"ನಾಕವನ್ನೇ ಇಳಿಕ್ಕೈವ ಕೆಳದಿಪುರ" ಇದೆ—

ಶ್ರೀ ಮತ್ಕೆಳದಿಯ ಪೊಳಲೊಳ್ ।
ಹೈಮವತೀಶಮಣಣನೆಸೆವಲಿಂಗಾಕೃತಿಯಿಂ ।
ರಾಮೇಶ್ವರಾಖ್ಯೆಯುಂ ತಳ ।
ದಾಮಹಿಯೊಳ್ ಪುತ್ತದಲ್ಲಿ ನೆಲೆಸಿರುತಿರ್ದಂ ॥ (—ಪು. ೭)

ಅಲ್ಲಿದ್ದುದು "ಪಳ್ಳಿಬಯಲು" ಎಂಬ ಪುಟ್ಟಹಳ್ಳಿ. ಅಲ್ಲಿ "ಕೃಷಿಕವರ್ಮಾಭ್ಯನುಗತ ಜೀವಿ" ಬಸವಪ್ಪ ಎಂಬ ಸಾಧಾರಣ ರೈತ. ಈತನು "ಪರಶಿವಮೂರ್ತಿ ಸ್ವರೂಪ ಬಸ ವೇಶ್ವರಾಂಶೀಭೂತನಪ್ಪ ಕಾರಣಪುರುಷನುಂ ಲಿಂಗಾಂಗಸಂಬಂಧಿ ಷಟ್ಸ್ಥಲ ಜ್ಞಾನಾನು ಸಂಧಾನ ಮಹಾನುಭವ ಪ್ರಾಜ್ಞನುಂ, ನಿರುಪಮನಿರಾಭಾರಿವೀರಶೈವ ಸದಾಚಾರಾ ಚರಣ ಸಂಪನ್ನನುಂ,ಶ್ರೀಗುರುಲಿಂಗಜಂಗಮ ಪದಾಂಬುಜ ಸೇವಾತತ್ಪರಾಮಲಚಿತ್ತನು ಮೆನಿಸಿ ವಿರಾಜಿಸುತಿರ್ದನ್"

ಆತನ ಪತ್ನಿ ಬಸವಾಂಬೆ—

ರತಿ ರೂಪಿನೊಳೊಪ್ಪುವರುಂ ।
ಧೃತಿ ಪತಿಭಕ್ತಿಯೊಳೆ ಜಾಣ್ಮೆಯೊಳ್ಗೌತಮನ ಭಾ ।
ರತಿ ನಿರ್ಮಲಮತಿ ಶೋಭಾ ।
ವತಿಯೆಂದಿಳೆ ಪೊಗಳೆ ತದ್ಯುವತಿ ಕೆರಮೆಸೆದಳ್ ॥ (—ಪು. ೪೮)

ಈ ಪುಣ್ಯಸ್ತ್ರೀಯ ಉದರಪಾರಾವಾರದಲಿ ಸುಧಾಕರನೋ ಎಂಬಂತೆ ಸದ್ರೂಪನೂ ನಿರುಪಮ ಸುಗುಣ·ಕಲಾಪನೂ ಆದ ಚೌಡಪ್ಪನೆಂಬ ಮಗನುದಯಿಸುತ್ತಾನೆ. ಜೊತೆಗೆ ಭದ್ರಪ್ಪನೂ ಹುಟ್ಟುತ್ತಾನೆ. ಬಸವಪ್ಪನು ಕುಮಾರರು ಬೆಳೆದ ಮೇಲೆ ಸತ್ಕುಲ ಸಂಭವೆಯರಾದ ಕನ್ಯಾರತ್ನಗಳನ್ನು ತಂದು ಮದುವೆ ಮಾಡಿ ಶಿವೈಕ್ಯನಾಗುತ್ತಾನೆ. ಚೌಡಪ್ಪ ಮತ್ತು ಭದ್ರಪ್ಪರು ಪಳ್ಳಿಬೈಲಿನಲ್ಲಿ ಕೃಷಿ ಕಾರ್ಯ ಪಾರಂಗತರಾಗಿ, "ಪಟುತರ ಭುಜಬಲಶಾಲಿ"ಗಳಾಗಿ ವಿರಾಜಿಸುತ್ತಿದ್ದು—

ವರವೀರಶೈವಕುಲಶೇ ।
ಖರ ಬಸವಪ್ಪಪುತ್ರ ಚೌಡಪಂ ಶ್ರೀರಾಮೇ ।
ಶ್ವರ ಕೃಪೆಯುಂ ತತ್ಕೆಳದಿಯ ।
ಪುರವರ ಸಿಂಹಾಸನಕ್ಕಧೀಶ್ವರನಾದಂ॥ (ಪು. ೯)

ಮುಂದೆ ರಾಜ್ಯಸ್ಥಾಪನೆ, ವಿಸ್ತರಣೆ, ಪ್ರಗತಿ, ಪತನಗಳನ್ನು ಆದ್ಯಂತವಾಗಿ ವಿಸ್ತರಿಸಿಕೊಂಡು ಹೋಗಿದ್ದಾನೆ. ಈ ಕೃತಿಯಲ್ಲಿ ಮಧ್ಯೆ ಮಧ್ಯೆ ಹಲವು ರಾಜರ ಚರಿತ್ರೆಗಳು ಬರುತ್ತವೆ. ಇವು ತುಂಡು ತುಂಡಾಗಿದ್ದು ಜನರ ಹೇಳಿಕೆಯ ಮಾತಿನ ಮೇಲೆ ಬರೆದ ಹಾಗೆ ಕಾಣುತ್ತದೆ. ಆದುದರಿಂದ ಅವುಗಳಲ್ಲಿ ಯಾವುದಕ್ಕೂ ಗಮನ ಕೊಡಬೇಕಾದುದಿಲ್ಲ'[108] ಎಂದು ಶ್ರೀ ಎ.ಆರ್.ಕೃ. ಹೇಳಿದ್ದಾರೆ.

ಕೆಳದಿನೃಪವಿಜಯದಲ್ಲಿ "ಕಾವ್ಯಾಂಶಕ್ಕಿಂತಲೂ ಚಾರಿತ್ರಾಂಶವೇ ಹೆಚ್ಚಾಗಿದೆ." ಕವಿಯ ಉದ್ದೇಶ ಕೆಳದಿಯ ಇತಿಹಾಸವನ್ನು ಹೇಳುವುದೇ ಹೊರತು ಕಾವ್ಯವನ್ನು ಮೆರೆಯುವುದಲ್ಲ. ಅದಕ್ಕೆ ಬೇರೆ ವಸ್ತುಗಳಿವೆ. ಅವುಗಳಲ್ಲಿ ತನ್ನ ಕವಿತಾಶಕ್ತಿಯನ್ನು ಆತ ಮೆರೆದಿದ್ದಾನೆ. ಇಲ್ಲಿ ಐತಿಹಾಸಿಕ ಸತ್ಯವನ್ನು ಬಿತ್ತರಿಸಿದ್ದಾನೆ. ಆದರೆ ಸ್ವಭಾವತಃ ಕವಿಯಾದ ಇವನಲ್ಲಿ ಕಾವ್ಯಾಂಶಕ್ಕೆ ದಾರಿದ್ರ್ಯವಿಲ್ಲ. ಕವಿ ಲಿಂಗಣ್ಣ ಅಲ್ಲಲ್ಲಿ ಅದನ್ನೂ ಪ್ರಕಟಪಡಿಸಿದ್ದಾನೆ. ಪ್ರಥಮಾಶ್ವಾಸದಲ್ಲಿ ಬರುವ ಕರ್ಣಾಟದೇಶದ ವರ್ಣನೆ, ಸದಾಶಿವನಾಯಕನು ಬರೀದ ಪಾತುಶಾಹನ ಮೇಲೆ ಮಾಡಿದ ಯುದ್ಧದ ವರ್ಣನೆ, ದೊಡ್ಡ ಸಂಕಣ್ಣನು ಅಂಕುಶಖಾನನೊಡನೆ ಮಾಡಿದ ಹೋರಾಟದ ವರ್ಣನೆ ಮೊದಲಾದವು ಉತ್ತಮ ಕಾವ್ಯಭಾಗಗಳಾಗಿವೆ—

ಖಂಡಕರುಳೆಲು ತೊವಲ್ನರ ।
ತುಂಡಿಗೆ ಮಿದುಲಡಗು ತೊರಳೆನೆಣವಸೆನೆತ್ತ ।
ರ್ಗೊಂಡ ಕಾಳಜಿಗಳಿಂ ಜವ ।
ನುಂಡೊಗಡಿಸಿದಿಳೆಯ ಪ್ರೋಲ್ತುದಾ ರಣಪಕಳಂ ॥ (ಪು. ೩೭)

ಎಂಬ ಒಂದೇ ಒಂದು ಕಂದ ಪದ್ಯ ರಣಭೂಮಿಯ ಬೀಭತ್ಸ ದೃಶ್ಯವನ್ನು ಓದುಗರ ಕಣ್ಣಿನಲ್ಲಿ ಕಟ್ಟಿ ನಿಲ್ಲಿಸುತ್ತದೆ. ಅದೇ ರೀತಿ ಕವಿಯಲ್ಲಿ ಉತ್ಪ್ರೇಕ್ಷೆಯೂ ಉಂಟು. ಸದಾಶಿವನಾಯಕನ ಯುದ್ಧದ ಪರಿಣಾಮವನ್ನು—

ಪೊತ್ತಂತಕನಾಳ್ಗಳ್ಬೀ ।
ಸತ್ತುದು ವರಚಿತ್ರಗುಪ್ತರಿಂಗುಣಿಸಲ್ಕಾ ।
ದತ್ತಸದಳವಾರಣದೊ ।
ಳ್ಸತ್ತವದಿರನಿನಿಬರೆಂದು ಲಿಕ್ಕಿಪನಾವಂ ॥ (ಪು. ೩೭)

ಎಂತಲೂ, ಶಿವಪ್ಪನಾಯಕನ ಕೀರ್ತಿ ಮೂರು ಲೋಕದಲ್ಲೂ ವ್ಯಾಪಿಸಿತೆಂದು ಹೇಳುವಲ್ಲಿ—

---

[108] ಅದೇ. ಪು. IX.

ಸಸಿಯಂ ಶಿವನಮೌಳಿಯನ್ನೈ ।
ದಿಸಿ ಕಡಲಂ ಪುಗಿಸಿ ಬಾಂಬೋಳೆಯನಹಿಪತಿಯಂ ।
ರಸೆಯಡಿಗಲ್ದ ಶಿವೇಂದ್ರನ ।
ಜಸಮೆಸಕದಿನುರ್ವಿ ಪರ್ವಿದುದು ಮೂಜಗಮುಮಂ ॥ (—ಪು. ೧೧೧)

ಎಂತಲೂ ಅತಿಶಯದ ಮಾತುಗಳಿಂದ ಬಣ್ಣಿಸಿದ್ದಾನೆ. "ಮಂಜುಳಖಾನನಂ ಮುರಿದು ಎಂಜಲುಖಾನನಂ" ಮಾಡಿ ಎಂಬಲ್ಲಿ, "ರಾಮರಾಜಂ ಪನ್ನಾಳಿಯಿಂ ಪಲಾಯನಂ ಬಡೆದೈದಿ ಪೊನ್ನಾಳಿಯಂ ಪೊಕ್ಕು" ಎಂಬಲ್ಲಿ ಅವನ ಮಾತಿನ ಚಮತ್ಕಾರವನ್ನು ಅರಿಯಬಹುದು.[109]

ಲಿಂಗಣ್ಣ ಒಳ್ಳೆಯ ಕತೆಗಾರ. ಪರಮೇಶ್ವರನು ವೃದ್ಧಜಂಗಮರೂಪಿಯಾಗಿ ಬಂದು ಚೌಡಪ್ಪನಿಗೆ ಆದೇಶ ನೀಡುವ ಭಾಗವೂ, ನಾಗರಮರಿಯ ಕಥಾಭಾಗವೂ ವಿಜಯನಗರದ ಅರಸುಮನೆತನದ ಇತಿಹಾಸವೂ, ಶಿವಾಜಿಯ ಹಿರಿಯಮಗ ಸಾಂಬಾಜಿಯ ಕಾಮಜೀವನವು ಚಿತ್ರಿತವಾಗಿರುವ ಭಾಗವೂ ತುಂಬಾ ರಸವತ್ತಾಗಿವೆ.[110] ಜನಪದ ಕವಿಯಂತೆ ಕಥೆಯನ್ನು ಲಿಂಗಣ್ಣ ಮನಮುಟ್ಟುವಂತೆ ಹೇಳಿಕೊಂಡು ಹೋಗಿರುವುದು ಕಂಡುಬರುತ್ತದೆ.

"ಆದಿಭಾಗದಲ್ಲಿ ವಿಶೇಷವಾಗಿಯೂ ಮುಂದೆ ಅಲ್ಪಸ್ವಲ್ಪವಾಗಿಯೂ ಶಬ್ದಾಲಂಕಾರ ಅರ್ಥಾಲಂಕಾರ ಮುಂತಾದ ಕಾವ್ಯ ಚಮತ್ಕಾರಗಳು ಕಂಡುಬರುತ್ತವೆ. ಇಷ್ಟಪಟ್ಟರೆ ಕವಿಯು ಪ್ರೌಢವಾಗಿಯೂ, ಮನೋಹರವಾಗಿಯೂ ಬರೆಯಬಲ್ಲನು. ಸಂಕಣ್ಣ ನಾಯಕನು ಅಂಕುಶಖಾನನೊಡನೆ ಮಾಡಿದ ಕಾಳಗವು ಬಹು ಸ್ವಾರಸ್ಯವಾಗಿ ವರ್ಣಿಸಲ್ಪಟ್ಟಿದೆ. ಆದರೆ ಒಟ್ಟಿನ ಮೇಲೆ ನೋಡಿದರೆ ಚರಿತ್ರಕಥನಕ್ಕೇ ಹೆಚ್ಚು ಪ್ರಾಶಸ್ತ್ಯ ಕೊಟ್ಟಿರುವ ಹಾಗೂ, ಪ್ರೌಢ ಕಾವ್ಯರಚನೆಯನ್ನೇ ಮುಖ್ಯೋದ್ದೇಶ್ಯವನ್ನಾಗಿಟ್ಟುಕೊಳ್ಳದಿದ್ದಂತೆಯೂ ಕಾಣುತ್ತದೆ. ಆದ್ದರಿಂದಲೇ ಇದರಲ್ಲಿ ದೊಡ್ಡ ವೃತ್ತಗಳು ಕಡಿಮೆ; ಕಂಡಗಳು ಮತ್ತು ಗದ್ಯವೇ ಹೆಚ್ಚಾಗಿ ಉಪಯೋಗಿಸಲ್ಪಟ್ಟಿವೆ. ಭಾಷೆಯು

---

[109] ಅದೇ. ಪು. 73 ಮತ್ತು 161.

[110] ಅದೇ ಪು. 157-160. ಈ ಭಾಗದಲ್ಲಿ ಔರಂಗಜೇಬನ ಮಗಳು ಸಾಂಬಾಜಿಯನ್ನು ಮೆಚ್ಚಿದಂತೆಯೂ ಅವನ ಶಿರಶ್ಛೇದನ ಮಾಡಿಸಿದ ಮೇಲೆ ಅವನೇ ತನ್ನ ಗಂಡನೆಂದು ಭಾವಿಸಿ, ಅವನ ಮಗ ಶಾಹುರಾಜನನ್ನು ತನ್ನ ಮಗನೆಂದು ಘೋಷಿಸುವ ಕಥೆ ಬರುತ್ತದೆ. ಇದು ನಂಜುಂಡಕವಿಯ ಕುಮಾರ ರಾಮ ಸಾಂಗತ್ಯದ ಪ್ರಭಾವವಿರಬಹುದು ಎನ್ನಿಸುತ್ತದೆ. ಈ ಪ್ರಸಂಗದ ಚಾರಿತ್ರಕ ಸತ್ಯ ತಿಳಿಯದು.

ಸುಲಭವಾಗಿದೆ. ಹಳಗನ್ನಡವಾದರೂ ಅದರ ಬಿಗಿಯಿಲ್ಲ; ಹೊಸಗನ್ನಡರೂಪಗಳೂ ಪ್ರಯೋಗಗಳೂ ಹೇರಳವಾಗಿವೆ; ಮರಾಟಿ ಅಥವಾ ಹಿಂದೂಸ್ಥಾನಿಯ ಪದಗಳು ಅಲ್ಲಲ್ಲೇ ಉಪಯೋಗಿಸಲ್ಪಟ್ಟಿವೆ. ಉದಾಹರಣೆಗೆ—ಗನೀಮು, ಜಲಿಯ, ಶಕತ್, ಬಕತರ, ಬೊಕ್ಕಸೀಸ, ಮೇರುಮಾನಿ, ಸಲಾಮು, ಹುಕುಂ ಇತ್ಯಾದಿ. ಈತನು 'ಅನಂತರ' ಎಂಬ ಅರ್ಥದಲ್ಲಿ ನಂತರ ಎಂಬ ಪದವನ್ನು ಉಪಯೋಗಿಸುತ್ತಾನೆ. ಇದನ್ನು ಸಾಧುವೆಂದು ಹೇಳುವುದಕ್ಕಾಗುವುದಿಲ್ಲ. ಆದರೂ ಮರಾಟಿಯಲ್ಲಿ ಈ ರೂಪವುಂಟು. ಆದುದರಿಂದ ಇದು ತದ್ಭವರೂಪವೆಂದು ಕವಿಯ ಅಭಿಪ್ರಾಯವಿರಬಹುದು. ಆದರೆ ಇದರಂತೆ ವಡ್ಡಿ, ಪ್ರತಿದಿನಗಳ್, ಪೆಣ್ಮಣಿಗಳಂ ವಿವಾಹಮಂ ರಚಿಸಿ, ದೇವಾಲಯಮಂ ನಿರ್ಮಾಣಮಂ ರಚಿಸಿ, ಇತ್ಯಾದಿ ಪ್ರಯೋಗಗಳಿಗೆ ಸಾಧುತ್ವವನ್ನು ಕಲ್ಪಿಸುವುದು ಸುಲಭವಲ್ಲ.

ಗ್ರಂಥವು ಆರಂಭವಾದುದು ಹೇಗೋ, ಮುಗಿಯುವುದೂ ಹಾಗೆಯೇ. ಕೊನೆಯಲ್ಲಿಯೂ ಮಂಗಳಶ್ಲೋಕಾದಿಗಳು ಇಲ್ಲ"[111]

ಕೆಳದಿ ನೃಪ ವಿಜಯದಲ್ಲಿ ದೋಷಗಳಿಲ್ಲದಿಲ್ಲ. ಮುಖ್ಯವಾಗಿ ಈತನು ಕೊಡುವ ಶಕವರ್ಷಂಗಳಲ್ಲಿ ಹಲವು ಕ್ರಿ.ಶ.ಗೆ ಹೊಂದಿಕೊಳ್ಳುವುದೇ ಕಷ್ಟ. ಅದೇ ರೀತಿ ಪ್ರಥಮಾಶ್ವಾಸದಲ್ಲಿ ಚೌಡಪ್ಪನ ಪ್ರಖ್ಯಾತಿಯನ್ನು ವಿದ್ಯಾನಗರದ ಅಚ್ಯುತರಾಯನು ಕೇಳಿ, ಎಂದು ಹೇಳಿ, ಮುಂದೆ ಶ್ರೀ ವಿದ್ಯಾನಗರ ರಾಜಧಾನೀ ರತ್ನಸಿಂಹಾಸನಾಧೀಶ್ವರನಪ್ಪ ಕೃಷ್ಣರಾಯಂ....ಎಂದು ಕೃಷ್ಣರಾಯನ ಹೆಸರು ಹೇಳುತ್ತಾನೆ. "ಈ ಕವಿಯು, ಕಂದದ ಮೊದಲನೆಯ ಮತ್ತು ಮೂರನೆಯ ಪಾದಗಳಲ್ಲಿ ನಾಲ್ಕು ನಾಲ್ಕು ಮಾತ್ರೆಗಳ ಮೂರು ಮೂರು ಗಣಗಳಿರಬೇಕೆಂಬ ನಿಯಮವನ್ನಿಟ್ಟುಕೊಂಡಂತಿಲ್ಲ. ಒಟ್ಟು ಹನ್ನೆರಡು ಮಾತ್ರೆಗಳಾದರೆ ಸರಿಯೆಂದು ಭಾವಿಸಿದ ಹಾಗೆ ತೋರುತ್ತದೆ. ಆದುದರಿಂದ ಅಲ್ಲಲ್ಲೇ ಮೂರು ಮಾತ್ರೆಯ ಒಂದು ಗಣ, ಐದು ಮಾತ್ರೆಯ ಒಂದು ಗಣ, ಆಮೇಲೆ ನಾಲ್ಕು ಮಾತ್ರೆಯ ಒಂದು ಗಣ ಈ ರೀತಿ ಹನ್ನೆರಡು ಮಾತ್ರೆಗಳುಳ್ಳ ಎಷ್ಟೋ ಕಂದ ಪಾದಗಳು ಕಂಡುಬರುತ್ತವೆ... ಹೀಗೆಯೇ "ಜಗಣಂ ವಿಷಮದೊಳಾಗದು, ಜಗಣಂ ಮೇಣ್ ನಗಣಮುಕ್ಕೆಯಾರನೆಯಡಿಯೊಳ್" ಎಂಬ ಸೂತ್ರಕ್ಕೂ ವಿರೋಧವಾಗಿ ಬರೆದ ಕೆಲವು ಕಂದಗಳಿವೆ.

ಉದಾಹರಣೆಗೆ— X, ೧೦೩, XI, ೫, XII, ೨ [112]

---

[111] ಅದೇ. ಉಪೋ. XV - VIII.

[112] ಅದೇ. ಉಪೋ. (ಅಡಿಟಿಪ್ಪಣಿ) XVI.

ಹೆಚ್ಚು ಇತಿಹಾಸ, ಕೊಂಚ ಕಾವ್ಯಾಂಶ ಇವುಗಳಿಂದ ತುಂಬಿದ ಕೆಳದಿನೃಪ ವಿಜಯ ನಿಜಕ್ಕೂ ಕನ್ನಡನಾಡಿನ ಇತಿಹಾಸ ಕ್ಷೇತ್ರಕ್ಕೆ ಲಿಂಗಣ್ಣನಿತ್ತ ಅಮೂಲ್ಯ ಕಾಣಿಕೆ.

### ಆ) ಶಿವಪೂಜಾದರ್ಪಣ :

ಇದು ಇಂದಿನವರೆಗೂ ಅಜ್ಞಾತವಾಗಿದ್ದ ಗ್ರಂಥ. ಆಸ್ತಿಕ ಜನಸ್ತೋಮಕ್ಕೆ ಲಿಂಗಣ್ಣನ ಕಾಣಿಕೆ ಇದು. ಇದರಲ್ಲಿ ಶಿವಪೂಜೆಯನ್ನು ಕಲಾತ್ಮಕವಾಗಿ ಬಣ್ಣಿಸಿದ್ದಾನೆ. ಆದ್ದರಿಂದಲೇ "ಶಿವಪೂಜಾಕಲೆಗಳೊಳಂ ದಿಟ್ಟಯಿಟ್ಟು ಕೇಳ್ವುದು ಸುಜನರ್" ಎಂದಿದ್ದಾನೆ. "ಸೂನೃತಮಿಂತಹ ಶಿವನಂ ಧ್ಯಾನಾಹ್ವಾನಾದಿ ವಿಲಸದುಪಕಾರಗಳಿಂ ಮಾನವರರ್ಚಿಸೆ ಶಕ್ಯಂತಾನೆಂತುಹುದು ; ಆದೊಡಂ ಶಂಕರನಂ ನೆರೆಭಜಿಸಿದ ಶತ್ಫಲಮಿಹ ಪರಸೌಖ್ಯವನೀವುದಿದು ಸುನಿಶ್ಚಯಂ" – ಎಂಬ ಭಕ್ತಿಭಾವದಿಂದ ಕೃತಿಗಾರಂಭಿಸಿದ್ದಾಗಿ ತಿಳಿಸುತ್ತಾನೆ.

ಇದು ೫೮೫ ಸಂಖ್ಯೆಯ ಕಂದ, ವೃತ್ತ, ವಚನ, ಗದ್ಯಗಳಿಂದ ಕೂಡಿದ್ದು, ಐದು ಆಶ್ವಾಸಗಳುಳ್ಳದ್ದಾಗಿದೆ.[113] ಇದು ವಸ್ತುಕ ಕಾವ್ಯ. ಕೆಲವೇ ಕೆಲವು ವೃತಗಳನ್ನೂ, "ಅದೆಂತೆಂದೊಡೆ" ಅಂತುಮಲ್ಲದೆಯುಂ ಇತ್ಯಾದಿ ಕೊಂಡಿಯಂತಿರುವ ಗದ್ಯದ ತುಣುಕು, ಮೊದಲ ಆಶ್ವಾಸದ ಮೊದಲಲ್ಲಿ ಬರುವ ಸುದೀರ್ಘವಾದ ಗದ್ಯಭಾಗ – ಇವಿಷ್ಟು ಬಿಟ್ಟರೆ ಮಿಕ್ಕ ಕಾವ್ಯವೆಲ್ಲಾ ಕಂಡಪದ್ಯಗಳಿಂದ ತುಂಬಿದೆ. ಆದ್ಯಂತವೂ ಕಾವ್ಯವನ್ನು ಕಂದಗಳಿಂದ ಕೋದಿದ್ದಾನೆ ಕವಿ. ಇದನ್ನು ಶಿವಕವಿ ಲಿಂಗಣ್ಣ ನಿತ್ಯದ ಶಿವಪೂಜೆಗೆ ಒಳ್ಳೆಯ ಸಾಮುಗ್ರಿಯನ್ನೇ ಒದಗಿಸಿಕೊಟ್ಟು ಉಪಕರಿಸಿದ್ದಾನೆ. ಮೊದಲನೆಯ ಆಶ್ವಾಸದ ಪೀಠಿಕಾ ರಚನೆಯಲ್ಲಿ—

ಶ್ರೀಮದ್ವಿಷ್ಣು ವಿರಂಜಿ ಮುಖಾಮರನರ |
ನಾಗಪೂಜಿತಾಂಘ್ರಿ ಸರೋಜಂ ||
ಹೈಮವತೀಶಂ ವಿಬುಧಫಲ |
ಲಾಮಂ ಪೊರೆಗೆಮ್ಮನಿತ್ತು ವಾಂಛಿತಫಲಮಂ || (೧-೧)

—ಎಂದು ಶಿವಸ್ತುತಿಯಿಂದ ಕಾವ್ಯವನ್ನು ಆರಂಭಿಸಿದ್ದಾನೆ. ಶಂಕರ, ಗಣೇಶ, ವಾಣಿ, ಇವರನ್ನು ಸ್ತುತಿಸಿ, ಸಂಸ್ಕೃತ, ಕನ್ನಡ ಕವಿಗಳ ಸ್ಮರಣೆ ಮಾಡಿ—

---

[113] ಈ ಓಲೆ ಹೊತ್ತಗೆಯ ಐದನೆಯ ಆಶ್ವಾಸಾಂತ್ಯದಲ್ಲಿ—ಅಂತೂ ಶಿವಪೂಜಾದರ್ಪಣ ಕಾವ್ಯಾಶ್ವಾಸಮೈದಕ್ಕೆ ಕಂದ, ವೃತ್ತ, ವಚನ, ಗದ್ಯ ಸಹಾ ಸಂಖ್ಯೆ 585 ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ ಶುಭಮಸ್ತು—ಎಂದಿದೆ.

ಶಿವನಂ ಧ್ಯಾನಾಹ್ವಾನಾದಿ ವಿವಿಧ ಸಕಲೋಪ ।
ಚಾರದಿಂ ಪೂಜಿಸುವೀ ॥
ಪವಣಿಂದುಸುರ್ವೆಂ ತತ್ತದ್ವಿವರಣೆಯಿಂ ।
ಸಕಲಸುಜನರರಿವಂತೆ ವಲಂ ॥ (೧-೮)

—ಎಂದು ಕೃತಿರಚನೆಯನ್ನು ವಿವರಿಸಿದ್ದಾನೆ. ಸ್ವವಿಷಯ, ಕುಕವಿನಿಂದೆ, ಸೂರಿ ಜನರ್ಸಂಮುದದಿಂ ಕೇಳ್ದಿದು ಚಂನಾದುದು ಬಾಪು ಎನೆಸಾಲ್ಕುಂ, ಈಶನೊಲ್ಮೆಯೆ ಸಫಲಂ ಎಂಬ ತೃಪ್ತಿಯನ್ನು ಕವಿ ತಳೆದಿದ್ದಾನೆ. ತನ್ನ ಕಾವ್ಯದ ವೈಶಿಷ್ಟ್ಯವನ್ನು ವಿವರಿಸಿ—

ಇದು ಸರ್ವಸೌಖ್ಯಸಾಧನ ।
ಮಿದು ಶಂಭುಪ್ರೀತಿಕಾರಣಂ ಭಾವಿಪೊಡಿಂ ॥
ತಿದು ಸಕಲಾಭೀಷ್ಟಂಗಳ ।
ನೊದವಿಪ ಹರಭಕ್ತ ನಿಕರ ಚಿಂತಾರತ್ನಂ ॥ (೧-೬೦)

—ಎಂದು ಹೇಳಿ ಪೀಠಿಕಾರಚನೆಯ ಪ್ರಥಮಾಶ್ವಾಸವನ್ನು ಮುಗಿಸಿದ್ದಾನೆ.

ಕಾವ್ಯ ಯಾವ ಕಥೆಯನ್ನೂ ಒಳಗೊಂಡಿಲ್ಲ. ಕೇವಲ ಪರಶಿವನನ್ನು ಆಹ್ವಾನಿಸಿ ಅವನಿಗೆ ಅಭಿಷೇಕ ಆರೋಗಣೆ ಇತ್ಯಾದಿ ಸೇವೆಯನ್ನು ನೆರವೇರಿಸುವ ಕಾರ್ಯ ಅಥವಾ ಶಿವಪೂಜೆಯೇ ಈ ಕಾವ್ಯದ ವಸ್ತು. ಕವಿ ತುಂಬಾ ಸೊಗಸಾಗಿ ಮುಂದಿನ ನಾಲ್ಕು ಆಶ್ವಾಸಗಳಲ್ಲಿ ಚಿತ್ರಿಸಿದ್ದಾನೆ. ಮಲಗಿದ ಪರಶಿವನನ್ನು, ಮಂಗಳಪಾಠಗಳಿಂದ ಎಬ್ಬಿಸಿ ದರ್ಪಣವನ್ನು ತೋರಿ ಮಜ್ಜನಾದಿಗಳನ್ನು ಮಾಡಿಸಿ, ಪೂಜಿಸಿ, ಆರೋಗಣೆ ಮಾಡಿಸಿ, ಮತ್ತೆ ಪವಡಿಸುವಂತೆ ಮಾಡುವವರೆಗಿನ ಭಕ್ತನ ಸೇವಾಕಾರ್ಯ ವಿವರಿಸಲ್ಪಟ್ಟಿದೆ.

ದ್ವಿತೀಯಾಶ್ವಾಸದಲ್ಲಿ "ಶೈವಾಹ್ನಿಕ ಫಲಾಹಾರಾಭ್ಯಂಗ ಪೂಜಾಮಂಟಪ ಪ್ರವೇಶನ ಸಿಂಹಾಸನಾರೋಹಣಾದ್ಯುಪಚಾರವೂ ; ತೃತೀಯಾಶ್ವಾಸದಲ್ಲಿ - ಪಾದ್ಯಾರ್ಘ್ಯಾಚಮನ, ಮಧುಪರ್ಕ, ಪಂಚಾಮೃತಾದಿ ನಾನಾಭಿಷೇಕ, ವಸ್ತ್ರೋಪ ವೀತಾಭರಣಧಾರಣ ಗಂಧಾಕ್ಷತಪತ್ರ ಪುಷ್ಪ ಸಹಸ್ರನಾಮಾದಿ ಪೂಜೋಪಚಾರ ಸಮರ್ಪಣವೂ, ಚತುರ್ಥಾಶ್ವಾಸದಲ್ಲಿ - ಧೂಪದೀಪ ಪರಮಾಂನಭಕ್ಷ್ಯ; ಭೋಜ್ಯ ಫಲ ರಸಾಯನಾದಿ ಬಹು ವಿಧ ವಿಚಿತ್ರತರ ವಸ್ತೂತ್ಕರ ಸಮನ್ವಿತೋಪಹಾರ ಸರ್ವಸ್ವ ಸಮರ್ಪಣಾದಿ ಪೂಜೋಪಚಾರ ವಿವರಣವೂ ; ಪಂಚಮಾಶ್ವಾಸದಲ್ಲಿ ಲಿಂಗಪೂಜಾ ದೀಪಾರಾಧನ ವಿವಿಧ ನೀರಾಜನ....ಪ್ರದಕ್ಷಿಣ ನಮಸ್ಕಾರ, ಪ್ರಾರ್ಥನ, ನಾನಾವಿಧ ವಿನಿಯೋಗ ಸೇವಾಸಮರ್ಪಣ ; ಋಗ್ವೇದಾದಿ ವೇದವೇದಾಂಗ ಶಾಸ್ತ್ರ ಪುರಾಣಾಗಮ ತಂತ್ರೀ....ವಾದ್ಯವಾದನ ಶ್ರವಣನೃತ್ಯ, ತುರಂಗಾರೋಹಣಾದಿ ನಾನಾ ಯಾನೋತ್ಸವ, ದೋಲಾರೋಹಣ....ಇತ್ಯಾದಿ ಸೇವಾಭಾಗವೂ ವರ್ಣಿತವಾಗಿವೆ.

ಒಟ್ಟಿನಲ್ಲಿ ಶಿವಪೂಜಾ ದರ್ಪಣ ಪೂಜೆಗಾಗಿ ಮೀಸಲಿರುವ ಕೃತಿ. ಇದರಲ್ಲಿ ಹೂವುಗಳು, ವಾದ್ಯಪರಿಕರಗಳು, ಧೂಪ ದೀಪಗಳು, ಅಡಿಗೆಯ ವಿವಿಧ ಮಾದರಿಯ ಊಟ ತಿಂಡಿಗಳು, ಪತ್ರಪುಷ್ಪಗಳು, ಸಂಗೀತದ ನಾನಾ ರಾಗಗಳು, ತಾಳಗಳು, ನೃತ್ಯಭೇದಗಳು – ಗುಂಪುಗುಂಪಾಗಿ ಸಿಗುತ್ತವೆ. ಇವುಗಳ ಪಟ್ಟಿಯೇ ಎನ್ನಬಹುದು ಈ ಕಾವ್ಯ. ಕಂದಪದ್ಯಗಳಲ್ಲಿ ನಾನಾವಿಧವಾದ ವಸ್ತುಗಳ ಪಟ್ಟಿಯನ್ನು ತಯಾರಿಸಿದ್ದಾನೆ. ಕೆಲವೆಡೆ ಹರಿಹರನ ಪ್ರಭಾವ ಈ ಕವಿಯ ಮೇಲಾಗಿರುವುದು ಸ್ಪಷ್ಟವಾಗಿ ಕಾಣಿಸುತ್ತದೆ. ಇದರಲ್ಲಿ ಕಾವ್ಯಾಂಶಕ್ಕಿಂತ ಭಕ್ತಿಯ ಅಂಶವೇ ಪ್ರಧಾನವಾದುದು. ಕವಿ ಒಂದೆಡೆ – "ಐಹಿಕಾಮುಷ್ಮಿಕ ಸೌಖ್ಯಮಂ ಪಡೆಯಬೇಕಾದೊಡೀಶ್ವರಾರ್ಚನಾ ಬಲದಿಂದಲ್ಲದೆ ಬೇರೊಂದು ಸುಲಭೋಪಾಯ ಮಾರ್ಗಮಿಲ್ಲೆಂಬುದೆ ನಿಶ್ಚಯಮಾಗಿರ್ಪುದು."[114] ಎಂದು ಭಕ್ತಿ ಮಾರ್ಗದ ವೈಶಿಷ್ಟ್ಯವನ್ನು ಸ್ಪಷ್ಟಪಡಿಸಿದ್ದಾನೆ. ಆದ್ದರಿಂದ ಶಿವಪೂಜಾದರ್ಪಣ ಆಸ್ತಿಕರ ಕೈಪಿಡಿ; ಶಿವಭಕ್ತರ ಆರಾಧನಾಗ್ರಂಥ.

## ಇ) ದಕ್ಷಾಧ್ವರ ವಿಜಯಂ:

"ದಕ್ಷಾಧ್ವರವಿಜಯಂ" ಕವಿ ಲಿಂಗಣ್ಣನ ಕೃತಿರತ್ನಗಳಲ್ಲಿ ಒಂದು. ಇದು ಮಹಾಕಾವ್ಯವಲ್ಲ; ಖಂಡಕಾವ್ಯ. ಇದೂ ಅಜ್ಞಾತವಾಸದಲ್ಲಿದ್ದ ಕೃತಿ. ಇದರಲ್ಲಿ ಐದ್ದು ಉಲ್ಲಾಸಗಳಿವೆ.

ಪಳಗನ್ನಡದೊಳಚ್ಚ ಸಕ್ಕದಂಗಳೊಳುಸುರೆ |
ತಿಳಿಯಲ್ಕೆ ಕೆಲಬರ್ಗಸಾಧ್ಯವೆಂದು ||
ತಿಳಿದು ತದ್ಭವಮಿಶ್ರ ದೇಶೀಯ ವರ್ಣಕೋ |
ಜ್ವಲವಸ್ತುಕಾನ್ವಿತ ಸುಗಾನ ಭಣಿತೆಯೊಳು ||

ಹೀಗೆ ಹೇಳಿದ ಲಿಂಗಣ್ಣನಿಗೆ ತಾನು ಯಾವುದರಲ್ಲಿ ಬರೆಯುತ್ತಿದ್ದೇನೆ ಎಂಬುದರ ಬಗೆ ಸ್ಪಷ್ಟವಾದ ಅಭಿಪ್ರಾಯ ಇದ್ದಂತೆ ಕಾಣುವುದಿಲ್ಲ. ಇದನ್ನು "ವರ್ಣಕ, ವಸ್ತುಕ ಅಥವಾ ದೇಶೀಯ ವರ್ಣಕೋಜ್ವಲ ವಸ್ತುಕಾನ್ವಿತ ಸುಗಾನ ಭಣಿತೆ" ಎನ್ನುವುದಕ್ಕಿಂತ ಸುಲಭವಾಗಿ ಶಿವಕಲ್ಯಾಣದಂತೆ ಇದೂ ಒಂದು ಸುಂದರವಾದ "ಯಕ್ಷಗಾನ ಪ್ರಸಂಗ" ಎಂದು ಕರೆಯುವುದು ಹೆಚ್ಚು ಸೂಕ್ತವೆನಿಸುತ್ತದೆ. ಏಕೆಂದರೆ ಈ ಕೃತಿಯಲ್ಲಿ ಕಂಡು ಬರುವ ವಸ್ತು ವಿನ್ಯಾಸಕ್ರಮ, ಸನ್ನಿವೇಶ ಸೃಷ್ಟಿ – ಸಂಯೋಜನೆ, ಸಂಗೀತ, ಸಂಭಾಷಣೆ ಎಲ್ಲವೂ ಯಕ್ಷಗಾನ ಪ್ರಸಂಗಕ್ಕೆ ಹೆಚ್ಚು ಸಮೀಪವರ್ತಿಯಾಗಿವೆ. ನಾಟಕೀ

---

[114] ಅದೇ. 1. ಗದ್ಯ, ಗರಿ. 4.

ಯತೆಯ ದೃಷ್ಟಿಯಿಂದಲೂ ಈ ಕೃತಿ ಪುರಾಣ ಕಾವ್ಯಕ್ಕಿಂತ ಹೆಚ್ಚಾಗಿ ಪ್ರಸಂಗ ಸಾಹಿತ್ಯ ಅನ್ನಿಸಿಕೊಳ್ಳಬಹುದಾಗಿದೆ.

ಶ್ರೀ ಗೌರೀ ಕುಚಕುಂಕುಮಾಂಕಿತ ಲಸದ್ವಕ್ಷಸ್ಥಳಾರಾಜಿತಂ
ವಾಗೀಶಾದಿ ಸಮಸ್ತ ದೇವ ವಿನುತಂ ವಿಶ್ವೈಕ ಸಂಸೇವಿತಂ
ನಾಗಾಲಂಕೃತನಭ್ರ ಸಿಂಧು ಸುಮನೋಮಾಲಾಸಮಂಚಜ್ಜಟಾ
ಭಾಗಂ ಶಂಕರಾನಂದಾದಿ ದೇವನೀಗೆನನಂದ ಸಂದೋಹಮಂ ॥

(೧-೮)

ಎಂಬ ಪ್ರಾರ್ಥನಾ ಪದ್ಯದೊಂದಿಗೆ ಈ ಕೃತಿ ಆರಂಭವಾಗುತ್ತದೆ. ಅನಂತರ ಶರ್ವಾಣಿಯನ್ನೂ ಸಿದ್ಧಿವಿನಾಯಕ ಸ್ವಾಮಿಯನ್ನೂ, ಶ್ರೀ ಶಾರದಾದೇವಿಯನ್ನೂ ಪ್ರಾರ್ಥಿಸಿ, "ದಕ್ಷನಗರ್ವಮಂ ಮುರಿದು ಮೇಕೆಯ ಮುಂಡವನಿತ್ತ ವಿಶ್ವಸಂರಕ್ಷಕ ವೀರಭದ್ರನೊಲಿದೀಗೆ ಸಮಸ್ತ ಮನೋಭಿವಾಂಛೆಯಂ" ಎಂದು ಬೇಡಿದ್ದಾನೆ. ಕುಮಾರಸ್ವಾಮಿ, ನಂದಿಕೇಶ್ವರ ಮೊದಲಾದ ದೇವತೆಗಳನ್ನು ಸ್ತುತಿಸಿ, ಕುಕವಿನಿಂದೆ ಮಾಡಿ, ತನ್ನ ಕಾವ್ಯೋನ್ನತಿಯನ್ನು ಮೆರೆದು—

ಎಸೆವೀ ಸತ್ಕೃತಿಯಂ ವಿರ ।
ಚಿಸಿದಂ ಭೂಪಾಲ ಮೌಳಿಮಣಿವರ ಕೆಳದೀ ॥
ಬಸವನೃಪಾಲಾಶ್ರಿತ ಹರಿ ।
ತ ಸಗೋತ್ರಜ ವೆಂಕಸಾರ್ಯಸುತ ಲಿಂಗಬುಧಂ ॥ (೧-೩೪)

ಎಂದು ಸ್ವಾಮಿ ಭಕ್ತಿಯನ್ನು ಬಿತ್ತರಿಸಿದ್ದಾನೆ.

ಕವಿಯೇ ಹೇಳಿರುವಂತೆ ದಕ್ಷಾಧ್ವರ ವಿಜಯದ ಆಕರ ಗ್ರಂಥ ಸ್ಕಾಂದಪುರಾಣ. ಅದರಲ್ಲಿನ ಮಾಹೇಶ್ವರ ಖಂಡ - ಅದರಲ್ಲೂ ಮೊದಲ ಒಂದರಿಂದ ಐದು ಅಧ್ಯಾಯಗಳು.[115] ಆದರೆ ಮೂಲವನ್ನು ಮೀರಿಸಿದ ಕಲಾವಂತಿಕೆ ಈ ಕವಿಯ ಕೃತಿಯಲ್ಲಿ ಕಂಡುಬರುತ್ತದೆ. ಇದು ಸಹಜ. ಏಕೆಂದರೆ ನಮ್ಮ ಪುರಾಣಗಳು ನಮ್ಮ ಸಂಸ್ಕೃತಿ ಸಂಪತ್ತಿನ ಗಣಿಗಳು. ಅವುಗಳಿಂದ ತೆಗೆದ ಅದುರಿನಲ್ಲಿ ಅಂದದ ಆಭರಣಗಳನ್ನು ಮಾಡಿಕೊಡುವುದು ಕಲಾವಿದನ ಕರ್ತವ್ಯ. ಕವಿ ಲಿಂಗಣ್ಣನು, ಸ್ಕಾಂದ ಪುರಾಣದ

---

[115] ಸ್ಕಾಂದಪುರಾಣದಲ್ಲಿ ಏಳು ಖಂಡಗಳಿವೆ—ಮಹೇಶ್ವರೋ ವೈಷ್ಣವಬ್ರಾಹ್ಮಕಾಶ್ಯಸ್ತ್ವವಂತಿಕಾ ನಾಗರಮತ್ರ ಷಷ್ಠಂ । ಪ್ರಾಭಾಸಿಕೋ ವಿಪ್ರವರೇಣ ಖಂಡಾಃ ಸ್ಕಾಂದೇ ಪುರಾಣೇ ಕಥಿತಾಃ ಸುಪುಣ್ಯಾಃ ॥ —ಶ್ರೀ ಸ್ಕಾಂದಮಹಾಪುರಾಣಂ ಮಹೇಶ್ವರ ಖಂಡ (ಅರಿಕೆ. ಪು. ೫) ಶ್ರೀ ಜಯಚಾಮರಾಜೇಂದ್ರ ಗ್ರಂಥ ರತ್ನಮಾಲಾ, ಸಂಖ್ಯೆ ೧೪.

ಕಣವನ್ನೇ ತನ್ನ ಕಾವ್ಯದಲ್ಲಿ ಕಡಲನ್ನಾಗಿಸಿದ್ದಾನೆ. ಪುರಾಣ ವಸ್ತುವನ್ನು ಕಾವ್ಯವನ್ನಾಗಿಸುವಾಗ ಹಲಕೆಲವು ಸುಂದರ ಬದಲಾವಣೆಗಳನ್ನೂ ಮಾಡಿಕೊಂಡಿದ್ದಾನೆ.

ಸ್ಕಾಂದ ಪುರಾಣದಲ್ಲಿ ಕಥೆ ಹೀಗೆ ಆರಂಭವಾಗುತ್ತದೆ—ವ್ಯಾಸ ಮಹರ್ಷಿಯ ಶಿಷ್ಯನಾದ ಲೋಮಶ ಅಥವಾ ಸೂತನು ಶೌನಕಾದಿ ಮಹಾಮುನಿಗಳಿದ್ದ ನೈಮಿಷಾರಣ್ಯಕ್ಕೆ ಒಮ್ಮೆ ಹೋಗಿದ್ದಾಗ ಆ ಮುನಿಗಳು ಈತನನ್ನು ಮಹಾದೇವನ ಮಹಾತ್ಮೆಯನ್ನು ಕುರಿತು ಪ್ರಶ್ನಿಸುತ್ತಾರೆ. ಆಗ ಸೂತನು ಸವಿಸ್ತಾರವಾಗಿ ತಿಳಿಸುವಲ್ಲಿ ಈ ದಕ್ಷನ ವಿಷಯ ಬರುತ್ತದೆ. ಹಿಂದೆ ದಕ್ಷನು ಬ್ರಹ್ಮನ ಮಾತಿನಂತೆ ತನ್ನ ಮಗಳಾದ ಸತೀದೇವಿಯನ್ನು ಮಹಾತ್ಮನಾದ ಶಂಕರನಿಗೆ ಕೊಟ್ಟು ಮದುವೆ ಮಾಡಿದನಂತೆ. ಒಮ್ಮೆ ನೈಮಿಷಾರಣ್ಯಕ್ಕೆ ಬಂದಾಗ ಇಂದ್ರಾದಿದೇವತೆಗಳೂ, ಮಹರ್ಷಿಗಳೂ ಅವನನ್ನು ಸ್ತುತಿಸಿದರಂತೆ. ಆದರೆ ಮಹಾದೇವನು ಮಾತ್ರ ಎದ್ದು ಗೌರವಿಸಲಿಲ್ಲ. ಅದರಿಂದ ಕುಪಿತನಾದ ದಕ್ಷನು ಶಿವನನ್ನು ಯಜ್ಞಬಾಹ್ಯನನ್ನಾಗಿ ಮಾಡಿರುವುದಾಗಿ ತಿಳಿಸುತ್ತಾನೆ. ತಿಳಿಯ ಹೇಳಬಂದ ನಂದಿಗೂ ಶಾಪವಿತ್ತು ಕನಖಲ ಕ್ಷೇತ್ರದಲ್ಲಿ ಯಜ್ಞವೊಂದನ್ನು ಕೈಗೊಳ್ಳುತ್ತಾನೆ.

ಶಿವನೊಬ್ಬನನ್ನು ಬಿಟ್ಟು ಸಕಲ ದೇವತೆಗಳೂ ಆ ಯಜ್ಞಕ್ಕೆ ಆಹ್ವಾನಿತರಾಗುತ್ತಾರೆ. ಚಂದ್ರನು ದಕ್ಷನ ಯಜ್ಞಕ್ಕೆ ಹೊರಟಿರುವ ವಿಚಾರವನ್ನು ತನ್ನ ಸಖಿಯ ಮುಖಾಂತರ ಕೇಳಿ ತಿಳಿದ ದಾಕ್ಷಾಯಣಿ ತಂದೆಯ ಮನೆಗೆ ಹೋಗುತ್ತಾಳೆ ಶಿವನಪ್ಪಣೆ ಪಡೆದು. ಕಡೆಗೆ ತೌರಿನಲ್ಲಿ ಅಪಮಾನಿತಳಾಗಿ ಅಲ್ಲಿಯೇ ಅಗ್ನಿ ಪ್ರವೇಶ ಮಾಡುತ್ತಾಳೆ. ಇದನ್ನು ನಾರದನಿಂದ ತಿಳಿದ ಶಿವನು ಜಟೆಯನ್ನಪ್ಪಳಿಸಲು ವೀರಭದ್ರ, ಮಹಾಕಾಳಿಯರು ಜನಿಸಿ, ದುರುಳ ದಕ್ಷನ ಗರ್ವಭಂಗ ಮಾಡಿದರು.

ಇದಿಷ್ಟೇ ಪುರಾಣ ವಸ್ತುವನ್ನು ಕವಿ ಲಿಂಗಣ್ಣ ಸುಂದರ ಕಾವ್ಯವನ್ನಾಗಿಸಲು ಯತ್ನಿಸಿದ್ದಾನೆ. ತಾನು ಬ್ರಹ್ಮನ ಮಗನೆಂಬ ಸೊಕ್ಕಿನಿಂದ ತನ್ನ ಅಳಿಯನಾದ ಪರಶಿವನ ಘನತೆಯ ಬಗ್ಗೆ ಅಸೂಯೆಯನ್ನು ವ್ಯಕ್ತಪಡಿಸಿದ ದಕ್ಷ, ಶಿವನ ಓಲಗಕ್ಕೆ ಒಮ್ಮೆ ಹೋಗುತ್ತಾನೆ. ಅಲ್ಲಿ "ಚಾಮೀಕರ ನಿರ್ಮಿತ ನವರತ್ನಖಚಿತ ನಾನಾವಿಧ ವಿಚಿತ್ರ ರಚನಾ ಪರಿಶೋಭಿತ ಜ್ಯೋತಿರ್ಮಯಮಪ್ಪ, ಸಮಸ್ತ ಮಂಗಲಾಸ್ಪದಮಾದ ತತ್ಸಭಾಮಂಟಪ ಮಧ್ಯಸ್ಥಿತಾತ್ಯುಚ್ಚ ದಿವ್ಯ ಸಿಂಹಾಸನಾಗ್ರದೊಳ್"—ಶಿವನು ಮಂಡಿತನಾಗಿರುತ್ತಾನೆ. ತುಂಬುರ ನಾರದರ ಸಂಗೀತ, ಭೃಂಗಿಯ ನೃತ್ಯ ಇತ್ಯಾದಿ ವೈಭವೋಪೇತವಾದ ಸಭಾಭವನವನ್ನು ನೋಡಿ, ತನ್ನಲ್ಲೇ ತಾನು ಕುದಿಯುತ್ತಾ ದಕ್ಷನು "ಅರಿಯದೆ ಕುವರಿಯನಿತ್ತೆ...." ಎಂದಂದುಕೊಂಡು, ಅಳಿಯನ ಮೇಲಿನ ಸೇಡಿಗಾಗಿ ಯಜ್ಞವೊಂದನ್ನು ಕೈಗೊಳ್ಳುತ್ತಾನೆ.

ಪುರಾಣದಲ್ಲಿ ಬರುವ ನೈಮಿಷಾರಣ್ಯಕ್ಕಿಂತ ಶಿವನ ಓಲಗದ ಕಲ್ಪನೆ ತುಂಬಾ ಕಲಾತ್ಮಕವಾಗಿದೆ; ನ್ಯಾಯವಾಗಿಯೂ ಇದೆ. ಆಕಸ್ಮಿಕ ಭೇಟಿಯಲಿ ಶಿವ ಮಾವನಿಗೆ ಗೌರವ ತೋರದಿರುವುದು ಅಲ್ಲಿ ಉಚಿತವಲ್ಲ; ತೋರಲಿಲ್ಲವೆಂದು ಮುನಿದು ಮಾತನಾಡುವುದು ದಕ್ಷನ ಘನತೆಯಲ್ಲ. ಆದರೆ ಆಸ್ಥಾನದಲ್ಲಿ ತಾನು ಪ್ರಭುವಾಗಿ ಸಿಂಹವಿಷ್ಟರದ ಮೇಲೆ ಮಂಡಿಸಿರುವ ಶಿವನಿಗೆ ಆ ಸಭಾಸ್ಥಾನದಲ್ಲಿರುವವರೆಲ್ಲರೂ ಒಂದೇ. ಮಾವನೆಂಬ ಪ್ರತ್ಯೇಕ ಮರ್ಯಾದೆ ಇಲ್ಲಿ ಅನಗತ್ಯ. ಇದನ್ನೇ ದೊಡ್ಡದು ಮಾಡಿ ಅನಾಹುತಕ್ಕೆ ದಕ್ಷನು ಕೈ ಹಾಕುವುದರಲ್ಲೂ ಒಂದು ಅರ್ಥವಿದೆ, ಮನಃ ಶಾಸ್ತ್ರೀಯವಾದ ನ್ಯಾಯವೂ ಇದೆ ಅನ್ನಿಸುತ್ತದೆ.

ದಧೀಚಿಯಿಂದ ಪರಮೇಶ್ವರನು ಮಾಡಿದ ಗಜಾಸುರ ಸಂಹಾರ, ತ್ರಿಪುರ ಸಂಹಾರಾದಿ ಕಾರ್ಯಗಳನ್ನು ಹೇಳಿಸಿ, ಸತೀ ದೇವಿಯು ತನ್ನ ತಂದೆಯ ಯಜ್ಞಕ್ಕೆ ಹೊರಡುವ ವಿಷಯವನ್ನೂ ನಾಟಕೀಯವಾಗಿ ತಂದಿದ್ದಾನೆ. ಒತ್ತಾಯಪೂರ್ವಕವಾಗಿ ಪತಿಯ ಅಪ್ಪಣೆ ಪಡೆದು ದಕ್ಷನ ಯಜ್ಞಶಾಲೆಗೆ ಹೋಗಿ ಸತೀದೇವಿ:-"ಪರಮೋತ್ಸವದಿಂ ಮಾತೃವಿಂಗೆರಗಿ ಸಹೋದರಿಯರಂ ಸಂಭಾವಿಸಿ, ಯಜ್ಞಮಂ ರಚಿಸುತ್ತಿರ್ಪ ನಿಜಜನಕನ ಸಮಾಪಮಂ ಸಾರ್ದು ನುಡಿಸಿದಪನೆಂದು ಸಮಯಮಂ ಹಾರೈಸಿ ನೋಡುತ್ತನಿಂದಿರಲ್ । ತನ್ನಂ ಮನ್ನಿಸದೇ ನೋಡದೇ ನುಡಿಸದೇ, ಕಂಡುಂ ಕಾಣದಂತಿರ್ಪ ತಂದೆ"ಯ ಭಾವವನಭೀಕ್ಷಿಸಿ....ರುದ್ರ ಭಾಗವನೀ ಯಧ್ವರಮಂ ನಡಸುತಿರ್ಪುದಂ ಕಂಡು, ಪತಿ ವಾಕ್ಯಂಪುಸಿಯಾದುದಲ್ಲೆನುತ್ತತ್ಯಂತ ಕೋಪೋದ್ರೇಕದಿಂ ಕಿಡಿಕಿಡಿ ಮಸಗಿ ದಕ್ಷಬ್ರಹ್ಮನೊಡನೆ, ವಾದಿಸಿ ಸೋತು ಅಪಮಾನಿತಳಾಗಿ ಯೋಗಾಗ್ನಿಯಲ್ಲಿ ದಹಿಸಿ ಹೋಗುತ್ತಾಳೆ.[116] ನಾಲ್ಕನೆಯ ಉಲ್ಲಾಸದಲ್ಲಿ ವೀರೇಶೋತ್ಪತ್ತಿ, ದಕ್ಷಭಂಗ, ದಕ್ಷನ ತೀರ್ಥಯಾತ್ರಾ ದರ್ಶನ, ಇತ್ಯಾದಿಗಳು ಚಿತ್ರಗೊಂಡಿವೆ. ಐದನೆಯ ಉಲ್ಲಾಸದಲ್ಲಿ ಮೇನಾದೇವಿಯ ತಪಸ್ಸು, ಸಿದ್ಧಿ, ಮನ್ಮಥದಹನ, ರತಿವಿಲಾಪ, ಗಿರಿಜಾಕಲ್ಯಾಣ ಇತ್ಯಾದಿಗಳನ್ನು ಸಂಕ್ಷಿಪ್ತವಾಗಿ ವಿವರಿಸಿ ಕಾವ್ಯವನ್ನು ಮುಗಿಸಿದ್ದಾನೆ. ಕವಿ ಲಿಂಗಣ್ಣನ ವರ್ಣನಾವೈಖರಿ ಮೆಚ್ಚುವಂಥದು. ದಕ್ಷನು ಶಿವನ ಒಡ್ಡೋಲಗಕ್ಕೆ ಬರುತ್ತಾ ದಾರಿಯಲ್ಲಿ ಕಂಡ ವಸ್ತುಗಳ ವರ್ಣನೆಯನ್ನು" ಯಿಂತತ್ಯುಚ್ಚವೃತ್ತಿಯಂ ಮನಂಗೊಳಿಸುತಿರ್ಪ ತತ್ಪರ್ವತಶಿಖರ ಪ್ರದೇಶಮಂ ಸಾರ್ದು ತದುಪರಿಭಾಗದೊಳ್ ಮಿಸುಗುತ್ತಿರ್ಪ ಮಿಸುನಿಯ ಕುಸುರಿಗೆಲಸದ ಕಂಡರಣೆಯಂ ಪೊಸಪೊಂಬೆಳಗಂ ದೆಸೆದೆಸೆಗೆ ಪಸರಿಸುತಿರ್ಪ ಪರುಷದ ಪಾಸರೆಗಳಿಂ ಪವಣಾಗಿ ಸಂದಿಕ್ಕಿ

---

[116] ದಕ್ಷಾಧ್ವರ ವಿಜಯದ ಉಲ್ಲಾಸ ಪದ್ಯ 284, ವಚನ 285 ಮತ್ತು 293 ಗಂ. 44.

ಸವೆದ ಪರಿಧಿಪ್ರಕಾರ ಗೋಪುರಾಟ್ಟಾಲಕಗಳಿಂ ಪುಲಿವೊಗದ ಕೊತ್ತಳಂಗಳಿಂ ಫಣಿ. ಗಳಾಧೀಶ್ವರನ ಫರಾಪಂಕ್ತಿಗಳಂ ಪಳಿವ ರನ್ನದೆನೆಗಳ ಸಾಲ್ಗಳ ಸಂದಣಿಯಂ ಸಮಸ್ತ ಶಶ್ತ್ರಾಸ್ತ್ರ ಸಮನ್ವಿತಾತ್ಯದ್ಭುತ ಪರಾಕ್ರಮಿಗಳಪ್ಪ ಪಟುತರ ಪ್ರಮಥಗಣಂಗಳ ಕಾಪ್ಪಿನಿಂ ಕಂಗೊಳಿಸುತ್ತಿರ್ಪುದಗ್ರ ಕೋಟಾವಲಯಮನೀಕ್ಷಿಸುತ್ತತ್ಯುತ್ಕೃಷ್ಟ ವಜ್ರ ಕವಾಟಾಭಿರಂಜಿತೋತ್ತುಂಗ ದ್ವಾರಮಂ ತಳಿದೊಳಪುಗುತ್ತಂ ಪೊಸಪಂನೀರ್ದಳಿತದಿಂ ಪಸರಿಸಿದ ಪಟವಾಸ ಚೂರ್ಣದಿಂ ಶೋಭಿಸುತ್ತಿರ್ಪ ಪಟ್ಟವೀಥಿಗಳಿರ್ಕೆಲದೊಳ್, ಮಗ ಮಗಿಸುತ್ತ....ಮೃಗಮದದ ಸಾರಣಿಯಿಂ, ಪದ್ಮರಾಗರತ್ನ ರಸದ ಕಾರಣಿಯಿಂ, ಪೊಸ ಮುತ್ತಿನ ರಂಗವಲ್ಲಿಯಂ, ನವನವರತ್ನಖಚಿತಮಕರದೋರಣ ಗುಡಿಕಳಸಕಂನಡಿ ಸಿಂಗರದಿಂ, ಮಂಗಲಕ್ಕೆಡೆಯಾದ ಪ್ರಮಥಾಧೀಶ್ವರರ ಭದ್ರಭವನಂಗಳನಭಿವೀಕ್ಷಿಸುತ್ತ ತ್ಯಂತ ತೇಜೋಮಯಮಾದ ಪುರಹರನರಮನೆಯಂ ಸಾರ್ದು"[117]—ಎಂಬ ಶಿವನ ಒಡ್ಡೋಲಗದ ವರ್ಣನೆಯನ್ನು ಗಮನಿಸಬಹುದು. ಅಲ್ಲಲ್ಲಿ ಶಿವನನ್ನು ಕುರಿತ ಪ್ರಾರ್ಥನಾ ಪದ್ಯಗಳು ಬರುತ್ತವೆ. ಇವೆಲ್ಲಾ ಉತ್ತಮ ಭಾವಗೀತೆಗಳು. ಸೊಗಸಾದ ತಾಳಲಯ ಬದ್ಧವಾಗಿ ಹಾಡಬಹುದಾದ ಹಾಡುಗಳು. ಕವಿ ಅಲ್ಲಲ್ಲಿ ಚಮತ್ಕಾರವನ್ನೂ ಮೆರೆದಿ ದ್ದಾನೆ. ಉದಾಹರಣೆಗೆ ಆದ್ಯಂತ ತಲಿಕಟ್ಟಿನ ಕಂದಪದ್ಯ—

ಸ್ಮರಮಥನ ಮುಗ್ಧ ಶಶಭೃ । ದ್ಧರ ಪುಸ್ತಕ ಭರ್ಗಭಕ್ತರಕ್ಷಕ ಭವಶಂ
ಕರ ಶರ್ವಸುರ ನೃಪಂ ನಗ । ವರ ಸಂಸ್ತುತ ರಕ್ಷ ರಕ್ಷ ಪುರಹರವರದ ॥

(3-93)

ಅದೇ ರೀತಿ—ನಿರೋಷ್ಠ್ಯ ಕಂದಪದ್ಯ—

ಶ್ರೀ ಕಂಠ ಸರಸಿಜಾಸನ । ನಾಕೇಶಾದ್ಯಖಿಲ ನಿರ್ಜರಾರ್ಚಿತ ಚರಣಾ ॥
ನೇ ಕಂಲೀಲಾತ್ತ ಕಫದ । ಯಾಕರ ಜಯಜಯ ಗಿರೀಶ ನಗಜಾಧೀಶಾ ॥

(3—136)

ಕವಿ ಲಿಂಗಣ್ಣ ಒಳ್ಳೆಯ ಭಾಗವತ :

"ಕಂಡನೀಶ್ವರನನ್ಮುದ ದಕ್ಷನೂ ।
ಚಿರಖಂಡ ತೇಜೋಮಯಾತ್ಮನನಖಿಲೇ ಶನಾ ॥ ಪ ॥

(2—71)

---

[117] ಅದೇ. ವಚನ—60.

ಈ "ನೆಚಗೌಳ" ರಾಗದ ಹಾಡು ಅವನ ಭಾಗವತಿಕೆಗೆ ಸಾಕ್ಷಿಯಾಗಿದೆ. ಯಕ್ಷ ಗಾನ ರಚಕನಾದ ಇವನಿಗೆ ಈ ಭಾಗವತ ಕಲೆಯೂ ಸಿದ್ಧಿಸಿದೆ ಎಂದು ಹೇಳಬಹುದು.

## ಈ) ಶಿವಕಲ್ಯಾಣ :

ಶಿವಕಲ್ಯಾಣ ದಕ್ಷಾಧ್ವರವಿಜಯದ ಮುಂದಿನ ಭಾಗ. ಇದು ಶುದ್ಧ ಯಕ್ಷಗಾನ. ಕವಿಯೂ ಹಾಗೆಂದೇ ಹೇಳಿದ್ದಾನೆ. ಇದುವರೆಗೂ ಇದರ ಹೆಸರು ಮಾತ್ರ ಸಿಕ್ಕಿತ್ತು. ಆದರೆ ಈಗ ಕೆಲವು ಭಾಗದಷ್ಟು ಓಲೆಪ್ರತಿ ದೊರೆತಿದೆ. ಇದು ಹದಿನೆಂಟು ಆಶ್ವಾಸ ಗಳಿಂದ ಕೂಡಿದ ಬಹು ದೊಡ್ಡ ಪ್ರಸಂಗ.[118] ಮೊದಲ ಪೀಠಿಕಾ ರಚನದಲ್ಲಿ ಇಷ್ಟ ದೇವತೆ ಹಾಗೂ ಇತರ ದೇವತೆಗಳನ್ನು ಸ್ತುತಿಸಿ, ಬಾಣ, ಮಯೂರಾದಿ ಕವಿಗಳನ್ನು ಭಕ್ತಿಯಿಂದ ಸ್ಮರಿಸಿ "ಶ್ರೀಮತ್ಕೆಳದೀ ಬಸವರಾಜೇಂದ್ರನೊಲ್ದಾಲಿಸಲ್ | ಸ್ಕಾಂದಾದಿ ಪುರಾಣಂಗಳೊಳ್ಪೇಳ್ದ! ಪಾರ್ವತೀ ದೇವಿಯ ವಿವಾಹೋತ್ಸವಪುಣ್ಯಕಥಾ ಪ್ರಸಂಗಮಂ ಸೂಕ್ಮರೂಪದಿಂ ಕ್ರೋಡೀಕರಿಸಿ | ಗೀರ್ವಾಣ ಕರ್ಣಾಟಕಾದಿ ಮಿಶ್ರ ಭಾಷೆಗಳಿಂದೊಡ ಗೂಡಿ | ಪದಪದ್ಯ ವಚನ ಪ್ರಚಯಗಳಿಂದ ರಚನೆಯಪ್ಪಂತು ತರವರಿದು ಸೇರುವೆ| ಗೊಳಿಸಿ ಶಿವಕಲ್ಯಾಣ ಯಕ್ಷಗಾನ ಪ್ರಬಂಧವೆಂದೀ ಕೃತಿಗೆ ನಾಮಾಂಕಿತಂಗೈದು | ಸಕಲಜನಶ್ರಾವ್ಯಮಪ್ಪಂತುಸುರ್ವೆನದೆಂತೆನೆ........" ಎಂದು ಕಾವ್ಯರಚನೆ ಮಾಡಲು ಕೈ ಹಾಕಿದ್ದಾನೆ.

ಮುಂದೆ ಎರಡನೆಯ ಆಶ್ವಾಸದಲ್ಲಿ,[119] "....ಪರ್ವತರಾಜವರ್ಣನಮಂಬಿಕಾವರ ಪ್ರಸಾದ ವರ್ಣನವೂ, ಮೂರನೆಯ ಆಶ್ವಾಸದಲ್ಲಿ, ಮೇನಾದೇವಿಯ ಗರ್ಭವರ್ಣನೆ, ಪಾರ್ವತೀಜನನ, ಬಾಲಲೀಲಾ ವಿವರಣ, ಯೌವನ ವರ್ಣನ, ಶಿವಸೇವಾ ಪರಿಚ ರ್ಯಾದಿ ವರ್ಣನವೂ. ನಾಲ್ಕನೆಯ ಆಶ್ವಾಸದಲ್ಲಿ ಮಾಯೋತ್ಪತ್ತಿ ಶೂರಪದ್ಮಾದಿ ಜನನ, ತಾರಕಕೃತ ದಿಗ್ವಿಜಯಾದಿ ವರ್ಣನವೂ, ಐದನೆಯ ಆಶ್ವಾಸದಲ್ಲಿ ಇಲ್ವಲ ವಾತಾಪಿ ಜನನ, ಅಗಸ್ತ್ಯಗಮನ, ತದಿಲ್ವಲವಾತಾಪಿ ಮರಣ, ಶಚೀದೇವಿ ಗ್ರಹಣ, ಅಜಮುಖಾಬಾಹುಖಂಡನ, ಜಯಂತಗ್ರಹಣ, ತಾರಕಾಸುರ ಸಂಗ್ರಾಮಾಭಿವರ್ಣ ನವೂ, ಆರನೆಯ ಆಶ್ವಾಸದಲ್ಲಿ ಶೂರಪದ್ಮಾದಿ ನಿಧನ, ಮಂತ್ರಾಳೋಚನ, ಮದನ

---

[118] ಆದರೆ ನಮಗೆ ಸಿಕ್ಕಿರುವುದು ಹತ್ತು ಆಶ್ವಾಸಗಳು ಮಾತ್ರ

[119] ಈ ದ್ವಿತೀಯಾಶ್ವಾಸದ ಅಂತ್ಯದಲ್ಲಿ ದ್ವಿತೀಯೋಲ್ಲಾಸ ಎಂದಿದೆ. ಆದರೆ ಮಿಕ್ಕ ಎಲ್ಲ ಕಡೆಗಳಲ್ಲೂ "ಆಶ್ವಾಸ" ಎಂದೇ ಇದೆ.

ಪ್ರಯಾಣ ವರ್ಣನ ತದ್ದಹನ, ಶಚೀದೇವಿಪ್ರಳಾಪ, ಪಾರ್ವತೀದೇವಿ ಪ್ರಸನ್ನತೆ, ತತ್ರ ಪೊ ವರ್ಣನವೂ, ಏಳನೆಯ ಆಶ್ವಾಸದಲ್ಲಿ ಪಾರ್ವತೀ ತಪಃ ಪ್ರಭಾವವರ್ಣನ, ಪರಮೇಶ್ವರ ಪ್ರಸನ್ನತೆ, ಮನ್ಮಥೋಜ್ಜೀವನಪಾರ್ವತೀಪುರ ಪ್ರವೇಶ, ಸಪ್ತರ್ಷ್ಯಾಗಮನ [120] ಹಿಮಾಚಲಪ್ರದೇಶ ಉಮಾವಿವಾಹೋತ್ಸವ ಪ್ರಸಂಗ [121] ಔಷಧಿಪ್ರಸ್ಥ ಪುರವರಾಲಂಕಾರ ವರ್ಣನ, ಪಾರ್ವತೀ ದೇವಿ ಪರಿಣಯೋಚಿತ ವಿಭಾವಾಲಂಕಾರಾದಿ ವರ್ಣನವೂ, ಎಂಟನೆಯ ಆಶ್ವಾಸದಲ್ಲಿ ಶಿವಕೃತ ಕಲ್ಯಾಣಯಾತ್ರಾ ಮಹೋತ್ಸವ ವರ್ಣನವೂ, ಒಂಬತ್ತನೆಯ ಆಶ್ವಾಸದಲ್ಲಿ ಪಾರ್ವತೀ ಪರಮೇಶ್ವರ ಕಲ್ಯಾಣ ವಿವರಣ ವರ್ಣನವೂ, ಹತ್ತನೆಯ ಆಶ್ವಾಶದಲ್ಲಿ ಪಾರ್ವತೀಪರಮೇಶ್ವರರ ವಿರಚಿತ ಚೂರ್ಣೋತ್ಸವ ವಿಲಾಸ, ರಜತಾಚಲ ಶಿಖರ ಮಂದಿರಪ್ರವೇಶನ, ಷಣ್ಮುಖೋತ್ಪತ್ತಿ, ಶೂರ ಪದ್ಮ ಸಿಂಹಾಸ್ಯ ತಾರಕಾದಿ ದೈತ್ಯ ನಿಧನ, ಬ್ರಹ್ಮೇಂದ್ರಾದಿ ದೇವತಾ ಸ್ವಸ್ವಪದ ಪ್ರೇಕ್ಷಣಾದಿ ವರ್ಣನವೂ ಬಿತ್ತರಿಸಲ್ಪಟ್ಟವೆ.

ಈ ಯಕ್ಷಗಾನ ಕಲಾತ್ಮಕವಾಗಿಯೇ ರಚಿತವಾಗಿದೆ. ಕವಿ ಒಳ್ಳೆಯ ಕತೆಗಾರನೂ ಹೌದು, ಉತ್ತಮ ಕಲೆಗಾರನೂ ಹೌದು. ಆದ್ದರಿಂದಲೇ ಸ್ಕಾಂದಪುರಾಣದ ಕಥಾವಸ್ತುವನ್ನು [122] ಬೃಹತ್ ಯಕ್ಷಗಾನ ಕಾವ್ಯವನ್ನಾಗಿ ಮಾರ್ಪಡಿಸಿದ್ದಾನೆ. ಅವನು ಕಥೆ ಹೇಳುವ ದಾಟಿ ಚೆನ್ನಾಗಿದೆ. ಕಾವ್ಯವೂ ಉತ್ತಮ ಮಟ್ಟದ್ದಾಗಿದೆ.

## ಉ) ಪಾರ್ವತೀ ಪರಿಣಯಂ :

ಪಾರ್ವತೀಪರಿಣಯ ಕಾವ್ಯ ಕವಿ ಲಿಂಗಣ್ಣನ ಕೊನೆಯ ಕೃತಿಯಾಗಿರಬಹುದು. ಬಹುಶಃ, ಕೆಳದಿ ಸಾಮ್ರಾಜ್ಯದ ಪತನಾನಂತರ (ಕ್ರಿ.ಶ. ೧೭೬೩) ಬದುಕಿದ್ದ ಈ ಕವಿ ಈ ಕೃತಿಯನ್ನು ರಚಿಸಿರಬಹುದು. ಈ ಕೃತಿ ರಚನೆ ಕಾಲದಲ್ಲಿ ಅವನಿಗೆ ರಾಜಾಶ್ರಯ ಇಲ್ಲವೆಂದು ಊಹಿಸಬಹುದಾಗಿದೆ. ಏಕೆಂದರೆ ತನ್ನ ಮಿಕ್ಕ ನಾಲ್ಕು ಕೃತಿಗಳಲ್ಲಿ ಬಸವಪ್ಪ

---

120 ಅಚ್ಚಾಗಿರುವ ಕೆ.ನೃ.ವಿ. (vi) ಪುಟದಲ್ಲಿ "ಸಪ್ತರ್ಷ್ಯಾಗಮನಕ್ಕೆ ಬದಲು "ಸರ್ವರ್ಷ್ಯಾಗಮನ" ಎಂದಿದೆ.

121 ಅದೇ ಗ್ರಂಥದಲ್ಲಿ "ಉಮಾವಿವಾಹೋತ್ಸವ"ಕ್ಕೆ ಬದಲು "ಉಮಾವಿವಾರೋತ್ಸ" ಎಂದಿದೆ.

122 ಸ್ಕಾಂದಪುರಾಣ, ಮಾಹೇಶ್ವರ ಖಂಡ I ಅಧ್ಯಾಯ 20—26.

ನಾಯಕನನ್ನು ಒಂದಲ್ಲ ಒಂದು ಕಡೆ ಸ್ಮರಿಸಿದ್ದರೆ ಇಲ್ಲಿ ಯಾವೆಡೆಯಲ್ಲಿಯೂ ಅವನ ಹೆಸರನ್ನು ಹೇಳಿಲ್ಲ. ಯಾವ ಆಶ್ವಾಸಾಂತ್ಯದಲ್ಲಿಯೂ ಕವಿಯ ಸ್ವವಿಷಯದ ಗದ್ಯ ಇಲ್ಲ. ಒಂದೇ ಒಂದು ಕಡೆ ಮಾತ್ರ—

ಪರಿಕಿಪೊಡೀಲಸತ್ಕೃತಿಯ ನಾಮಮುದಾವುದೆನಕ್ಕೆ ಪಾರ್ವತೀ ।
ಪರಿಣಯ ಮೊಪ್ಪುವೀಕೃತಿಗೆ ನಾಯಕನಾರೆನೆ ವಿಶ್ವಮೆಲ್ಲಮಂ ।
ಪೊರೆವ ಮಹೇಶನೀಕೃತಿಯನಾರಿಸಿ ಪೇಳ್ದವನಾರೆನಲ್ಕೆ ಭೂ ।
ಸುರವರ ಲಿಂಗಣಾಖ್ಯಬುಧನೆಂದೆನೆ ಮೆಚ್ಚದರಾರ್ಧರಿತ್ರಿಯೊಳ್॥ (1—19)

ಎಂದು ಹೇಳಿದ್ದಾನೆ. ಮಿಕ್ಕೆಲ್ಲೂ ಅವನ ಹೆಸರೂ ಸಹ ಸಿಗುವುದಿಲ್ಲ. ಮೇಲಾಗಿ ಕವಿಯ ಕವಿತಾಶಕ್ತಿಯು ಕುಗ್ಗಿ, ಯೌವನದ ಉತ್ಸಾಹವಿಲ್ಲದಿರುವುದು ಕಂಡುಬರುತ್ತದೆ. ಈ ಕಾರಣಗಳಿಂದ ಇದು ಕ್ರಿ.ಶ. ೧೭೬೩ರ ಅನಂತರದಲ್ಲಿ ಹುಟ್ಟಿದ ಕಾವ್ಯ ಎಂದು ಊಹಿಸಬಹುದಾಗಿದೆ.

ಕವಿಯೇ ಹೇಳುವಂತೆ ಇದು "ವಸ್ತುಕಕೃತಿ." ಅಂದರೆ ಚಂಪೂಕಾವ್ಯ. ಬಹುದೊಡ್ಡ ಕಾವ್ಯ. ೧೮ ಆಶ್ವಾಸಗಳು ಇವೆ. ಕವಿ ಮಹಾಕಾವ್ಯವನ್ನೇ ರಚಿಸುತ್ತಿರುವುದಾಗಿ ಭಾವಿಸಿ ಮಹಾಕಾವ್ಯದ ಎಲ್ಲ ಲಕ್ಷಣಗಳನ್ನೂ ಇಲ್ಲಿ ತಂದು ತುಂಬಿದ್ದಾನೆ. ಕವಿಯ ಪಾಂಡಿತ್ಯ ಪ್ರದರ್ಶನ ಆಗಿದೆಯೇ ಹೊರತು ಮಹಾಕವಿಯ ಪ್ರತಿಭೆ ಮಿಂಚಿಲ್ಲ.

ಶ್ರೀಮದ್ಭೂಧರ ಸಾರ್ವಭೌಮ ತನಯಾಪೀನಸ್ತನಾಲಂಕೃತೋ ।
ದ್ದಾಮಶ್ರೀಘನಸೃಣಾಂತನಪ್ರವಿಲಸದ್ವಕ್ಷಸ್ಥಲಾರಾಜಿತಂ ।
ಸೋಮೋತ್ತಂಸನ ಪಾರಭೂರಿ ಮಹಿಮಂ ಕಾರುಣ್ಯರತ್ನಾಕರಂ !
ಪ್ರೇಮಂಬೆತ್ತೆಮಗೀಗೆ ಸಾಂಬಶಿವನತ್ಯಾನಂದ ಸಂದೋಹಮಂ ॥ (೧—೧.)

ಎಂಬ ಶಿವಸ್ತುತಿಯಿಂದ ಕಾವ್ಯ ಆರಂಭವಾಗಿ ಶಿವ, ಗಣೇಶ, ಶಾರದೆ, ಷಣ್ಮುಖ, ನಂದಿಕೇಶ್ವರ, ಮೊದಲಾದ ದೇವತೆಗಳನ್ನು ಪ್ರಾರ್ಥಿಸಿ, ವಾಲ್ಮೀಕಿ, ವ್ಯಾಸ, ಕಾಳಿದಾಸ, ದಂಡಿ ಮೊದಲಾದ ಸಂಸ್ಕೃತ ಕವಿಗಳನ್ನೂ, ಚಾಮರಸ, ರಾಘವಾಕ, ಹಂಪೆಯ ಹರಿಹರದೇವ ಮೊದಲಾದ ಕನ್ನಡ ಕವಿಗಳನ್ನೂ ಅತ್ಯಂತ ಭಕ್ತಿಯಿಂದ ಸ್ಮರಿಸಿಕೊಂಡು, "ಸ್ಕಾಂದಾದಿ ಪುರಾಣಂಗಳೊಳ್ ಪೇಳ್ದ ಗಿರಿಜಾವಿವಾಹೋತ್ಸವ ಮಹಾಪುಣ್ಯ ಕಥಾಪ್ರಸಂಗಮಂ ಸೂಕ್ಷ್ಮರೂಪದಿಂ ಕ್ರೋಢೀಕರಿಸಿ ಪಾರ್ವತೀಪರಿಣಯಮೆಂದೀಕೃತಿಗೆ ನಾಮಾಂಕಿತಂಗೈದ"ನಂತೆ. ಕುಕವಿನಿಂದೆ ಮಾಡಿ ಕಾವ್ಯವನ್ನು ಆರಂಭಿಸಿದ್ದಾನೆ.

ದ್ವಿತೀಯಾಶ್ವಾಸದಲ್ಲಿ ಸಮುದ್ರ, ಜಂಬೂದ್ವೀಪ, ಅಮರಾಚಲ, ಕಾಂಚನಶೈಲ, ಹಿಮಗಿರಿ, ಇವುಗಳ ವರ್ಣನೆ ಸುದೀರ್ಘವಾಗಿದೆ. ಅಲ್ಲಿನ ಓಷಧಿಪ್ರಸ್ಥಪುರದ

ವರ್ಣನೆಯೂ ಸಾಕಷ್ಟು ದೀರ್ಘವಾಗಿಯೇ ಇದೆ. ಇವುಗಳ ವರ್ಣನೆಯಲ್ಲಿ ಸುಮಾರು ನೂರು ಪದ್ಯಗಳ ಒಂದು ಆಶ್ವಾಸ ಮುಗಿಯುತ್ತದೆ.

ಮೂರನೆಯ ಆಶ್ವಾಸದಲ್ಲಿ ಗಿರಿರಾಜ ಮತ್ತು ಮೇನೆಯರ ಪ್ರೇಮದಾಂಪತ್ಯವನ್ನು ಮೈನಾಕ ಮತ್ತು ವೃಷಭಕ್ರೌಂಚರೆಂಬ ಮಕ್ಕಳನ್ನು ಪಡೆದಿದ್ದರೂ ಮಗಳೊಬ್ಬಳನ್ನು ಪಡೆಯಬೇಕೆಂಬ ಮೇನೆಯ ಹಂಬಲವನ್ನು ವಿವರಿಸಿದ್ದಾನೆ.

ಎಳೆಯಂಚೆ ಸುಳಿಯದಿಹ ಪೂ।
ಗೊಳವರಗಿಳಿಯಿಲ್ಲದುಪವನಂ ಸಸಿಗೆರೆಯಂ॥
ತಳಿಯದ ಬಾನ್ನುತೆಯಿಲ್ಲದ।
ನಿಳಯಂ ಶೋಭಿಪುದೆ ಭೂಮಿಭೃತ್ಕುಲರಾಜಾ॥ (೩_೧೫)

ಈ ಪುತ್ರೀದೋಹದ ಚಿಂತಾಸಕ್ತೆಯಾದ ಮೇನಾದೇವಿಯು ತಪಸ್ಸನ್ನಾಚರಿಸಲು "ಸರ್ವಮಂಗಲೆ ಮೆಚ್ಚಿ ಕಾರುಣ್ಯದಿಂದಭೀಷ್ಟಮಂ ಸಲಿಸಬೇಕೆಂದು ಮನಂದಂದು ಮುನ್ನಂದಕ್ಷಾಧ್ವರದೊಳಡಂಗಿ, ಶಿವಕಲೆಯೊಳೊಂದಿದ ದಾಕ್ಷಾಯಿಣಿಯೈತಂದು ಮೇನಾದೇವಿಗಂ ಪ್ರಸನ್ನಳಾಗಿ ನಿಜಾಭೀಷ್ಟಮಂ ಸಲಿಸಿದಪೆನದೇನುಸುರೆಂದು ಮುಂದೆ ನಿಂದಿರ್ದಂಬಿಕೆಯ ದಿವ್ಯತರ ಮೂರ್ತಿಯನಭಿವೀಕ್ಷಿಸಿ" ಪ್ರಾರ್ಥಿಸುತ್ತಾಳೆ. ಸರ್ವಮಂಗಲೆ ಮೇನೆಯ ಇಚ್ಛೆಯಂತೆ ಅವಳ ಹೃದಯಾರವಿಂದ ನಿವಾಸಿನಿಯಾಗುತ್ತಾಳೆ. ಶರ್ವಾಣಿಯ ಜನನ, ಬಾಲ್ಯ "ಶಿವಕಥೆಯಲ್ಲದನ್ಯ ಕಥೆಯಂ ಶುಭಕೀರ್ತನೆಯಲ್ಲದನ್ಯ ಸಂಸ್ತವಗಳನ್ ಒಪ್ಪವೆತ್ತ ಶಿವಮೂರ್ತಿಯನಲ್ಲದೆ ಅನ್ಯಮೂರ್ತಿಯಂ ಶಿವಪದಮಲ್ಲದನ್ಯಪದಮಂ ಶಿವತತ್ವಮಲ್ಲದನ್ಯತತ್ವಮ ಉಮೆ ಕೇಳಲ್ ಓದಲ್ಲಿ ಅಭಿವೀಕ್ಷಿಸಲ್ ಅರ್ಚಿಸಲ್ ಐದೆ ಜಾನಿಸಲ್"—ಇಂತಹ ನಿಷ್ಠಾವಂತ ಪಾರ್ವತಿಯ ಚಿತ್ರಣವನ್ನು ಕೊಟ್ಟಿದ್ದಾನೆ. ನಾಲ್ಕನೆಯ ಆಶ್ವಾಸ ಕೇವಲ ಪುಷ್ಪವಾಟಿಯ ವರ್ಣನೆಗಾಗಿ ವಿನ್ಯಾಸಲಾಗಿದೆ. ಐದನೆಯ ಆಶ್ವಾಸದಲ್ಲಿ ಪಾರ್ವತಿಯ ಶಿವಪೂಜಾವರ್ಣನ ಬಹಳ ರಮ್ಯವಾಗಿ ಚಿತ್ರಿತವಾಗಿದೆ.

ಆರನೆಯ ಆಶ್ವಾಸದಲ್ಲಿ ಅದ್ರಿರಾಜನ ನಗರ ದರ್ಶನವನ್ನೂ, ಏಳನೆಯ ಆಶ್ವಾಸದಲ್ಲಿ ಸರ್ವಮಂಗಲೆಯ ಯೌವನೋದಯವನ್ನು, ಎಂಟನೆಯುದರಲ್ಲಿ ವೇಶ್ಯಾವಾಟಿಯನ್ನೂ ವರ್ಣಿಸಿದ್ದಾನೆ. ನಾರದನು ಪರಶಿವನಿಗಾಗಿ ಮಗಳನ್ನು ಬೇಡಲು ಅದ್ರಿರಾಜನ ಬಳಿಗೆ ಬರುವುದು, ಅವನಿಗೆ ತಿಳಿಯ ಹೇಳುವುದು ಇವೆಲ್ಲವೂ ಒಂಬತ್ತನೆಯ ಆಶ್ವಾಸದಲ್ಲಿಯೂ, ಪಾರ್ವತಿಯು ಶಿವನ ಸೇವೆಗೆ ನಿಂದುದು ಹತ್ತನೆಯ ಆಶ್ವಾಸದಲ್ಲಿಯೂ ವರ್ಣಿತವಾಗಿವೆ.

ಹನ್ನೊಂದನೆಯ ಮತ್ತು ಹನ್ನೆರಡನೆಯ ಆಶ್ವಾಸಗಳಲ್ಲಿ ಕಶ್ಯಪ ಮತ್ತು ಮಾಯೆಯರಿಂದ ಜನಿಸಿದ ರಾಕ್ಷಸರನ್ನೂ ತಾರಕಾಸುರನ ತಪಸ್ಸನ್ನೂ, ವರವನ್ನು

ಪಡೆದ ತಾರಕನ ಉಪಟಳವನ್ನೂ, ತಾರಕನ ತಂಗಿ ಅಜಮುಖಿಯು ದೂರ್ವಾಸನಿಂದ ಇಲ್ವಲ, ವಾತಾಪಿಯರನ್ನು ಪಡೆದದ್ದೂ; ಅಗಸ್ತ್ಯನಿಂದ ಈ ಇಬ್ಬರು ರಕ್ಕಸರು ಹಾಳಾದದ್ದೂ, ಶೂರಪದ್ಮನ ಪ್ರತಾಪ, ಶಚೀದೇವಿಯ ನಿಸ್ಸಹಾಯಕತೆಯನ್ನೂ, ಶೂರಪದ್ಮನ ಮಗ ಭಾನುಕೂಪನ ಹಾವಳಿಯನ್ನೂ, ಜಯಂತಾದಿಗಳ ಸೋಲನ್ನೂ ಚಿತ್ತರಿಸಿದ್ದಾನೆ.

ಹದಿಮೂರನೆಯ ಆಶ್ವಾಸದಲ್ಲಿ ಬ್ರಹ್ಮನು ದೇವತೆಗಳಿಗೆ ಅಭಯವಿತ್ತು—

ಮದನ ಬಹೂಕ್ತಿಗಳಿಂದೇಂ ।
ತ್ರಿದಶ ನರೋರಗ ಸಮೂಹಮುಳಿವುದು ನಿನ್ನಿಂ ॥
ಸದಮಳ ಕೀರ್ತಿಯನಾರ್ಜಿಪೊ ।
ಡಿದೆ ಸಮಯಂ ಕಾಯಮೆಂಬುದೇಂ ಸುಸ್ಥಿರಮೇ ॥ (೧೩-೩೮)

ಎಂದು ಮನ್ಮಥನನ್ನು ಪ್ರೋತ್ಸಾಹಿಸಿ ಆತ್ಮರತನಾದ ಯೋಗೀಶ್ವರನ ಬಳಿಗೆ ಅವನನ್ನು ಕಳಿಸಿಕೊಡುವುದು, ಮನ್ಮಥನ ಆಗಮನ ಮತ್ತು ದಹನವು ಚಿತ್ರಿತವಾಗಿವೆ. ರತಿವಿಲಾಪದೊಡನೆ ಹದಿನಾಲ್ಕನೆಯ ಆಶ್ವಾಸ ಆರಂಭವಾಗುತ್ತದೆ. ಇದರಲ್ಲಿ ಶಿವೆಯ ಭವ್ಯತಮ ತಪಸ್ಸು ಚಿತ್ರಿತವಾಗಿದೆ. ಕವಿ ಭಕ್ತಿಭರಿತನಾಗಿಯೇ ಈ ಭಾಗ ವನ್ನು ರಚಿಸಿದ್ದಾನೆ.

ಹದಿನೈದನೆಯ, ಹದಿನಾರನೆಯ ಮತ್ತು ಹದಿನೇಳನೆಯ ಆಶ್ವಾಸಗಳಲ್ಲಿ ಸಪ್ತ ಋಷಿಗಳು ಪತ್ನೀಸಮೇತರಾಗಿ ಓಷಧಿಪ್ರಸ್ಥಪುರಕ್ಕೆ ಬಂದು ಶಿವನಿಗಾಗಿ ಮಗಳನ್ನು ಬೇಡಿ ವಿವಾಹಕಾರ್ಯವನ್ನು ಆರಂಭಿಸುವ ಹಾಗೂ ಶಿವ-ಶಿವೆಯರ ವಿವಾಹವನ್ನು ಸುದೀರ್ಘವಾಗಿ ಕವಿ ವರ್ಣಿಸಿದ್ದಾನೆ. ವಧೂ-ವರರ ಓಕುಳಿಯಾಟ, ಕುಮಾರಸಂಭವ, ತಾರಕಸಂಹೃತಿಗಾಗಿ ಕವಿ ಹದಿನೆಂಟನೆಯ ಆಶ್ವಾಸವನ್ನು ಮೀಸಲಿಟ್ಟಿದ್ದಾನೆ.

ಪುರಾಣದ ಕಥೆಯನ್ನು ಸಾಕಷ್ಟು ಪ್ರಮಾಣದಲ್ಲಿ ಹಿಗ್ಗಿಸಿ, ಹಂಜಿ ಕವಿ ಕಾವ್ಯ ರಚನೆ ಮಾಡಿದ್ದಾನೆ. ಇದು ವರ್ಣನೆಗಾಗಿಯೇ ಮೀಸಲಾದ ಕಾವ್ಯ.

# XI ವೆಂಕಕವಿ (ಕ್ರಿ. ಶ. ೧೭೬೦-೭೦)

ಕೆಳದಿಯ ಕವಿ ಲಿಂಗಣ್ಣನ ಮಗ ವೆಂಕಕವಿಯು ಕೆಳದಿಯ ರಾಜಾಸ್ಥಾನದ ಸೌಖ್ಯವನ್ನು ಹೆಚ್ಚು ಅನುಭವಿಸಿದವನಲ್ಲ. ಆದರೂ ಕೆಲವು ದಿನಗಳು ಅಲ್ಲಿದ್ದುದರಿಂದ ಈತನು ಕೆಲವೇ ಕಿರು ಕಾವ್ಯಗಳಿಂದ ತನ್ನ ರಾಜಋಣವನ್ನು ತೀರಿಸಿಕೊಂಡಿದ್ದಾನೆ. ಇವನ ಕಾಲ ಕ್ರಿ. ಶ. ಸುಮಾರು ೧೭೬೦-೭೦. ಕೆಳದಿಯು ಹಾಳಾದ ಮೇಲೆ ಕೆಳದೀ ಶ್ರೀ ರಾಮೇಶ್ವರನನ್ನು ಕುರಿತ ಸುಂದರ ಹಾಡುಗಳನ್ನು ಕಟ್ಟಿ ಹಾಡಿಕೊಂಡು ಕಾಲ ಯಾಪನೆ ಮಾಡಿದ್ದಿರಬೇಕು. ಇವನ ಕೃತಿಗಳು :

ಅ) ಗಣಸಹಸ್ರನಾಮ

ಆ) ಪಾರ್ವತೀವಲ್ಲಭಶತಕ,

ಇ) ನರಹರಿ ವಿಜಯ

ಈ) ಕೆಳದೀ ರಾಮೇಶ್ವರನನ್ನು ಕುರಿತ ಹಾಡುಗಳು

ಇವುಗಳನ್ನು ಅವಲೋಕಿಸೋಣ.

## ಅ) ಗಣಸಹಸ್ರನಾಮ :

ವಾರ್ಧಕ, ಭಾಮಿನಿ, ಪರಿವರ್ಧಿನಿ ಈ ಷಟ್ಪದಿಗಳು ೧೦೦ ಮತ್ತು ೧ ವಚನ ಒಟ್ಟು ೧೦೧ ಪದ್ಯ ಸಂಖ್ಯೆಯುಳ್ಳ ಕಿರುಕೃತಿ. (ಕೆಲವೇ ಓಲೆಗರಿಗಳ ಹೊತ್ತಗೆ) ಇದನ್ನು ಕವಿ 'ಶ್ರೀ ರುದ್ರಗಣರ ಸಹಸ್ರನಾಮದ ಪದವ ಮಾರಹರನಾಡಿಸಿದ ರೀತಿಯಿಂದ' ಉಸುರಿದ್ದಾನಂತೆ. ಆರಂಭದಲ್ಲಿ ಕೆಳದಿಪುರದ ಶ್ರೀ ರಾಮೇಶ್ವರನಿಗೂ, ಬಸವೇಶ್ವರನಿಗೂ, ಪ್ರಭುದೇವನಿಗೂ, ಎಲ್ಲ ಗಣವರರಿಗೂ ನಮಸ್ಕರಿಸಿ –

ಪ್ರಮಥ ಗಣವರ್ಯರಂ, ರುದ್ರಗಣರಂ ಮತ್ತೆ । ಪ್ರಮುದದಿಂ ವೃಷಭಗಣರಂ ಪುರಾತನರನು ॥
ಕ್ರಮದಿ ಷೋಡಶಗಣರ, ತೆರಸರ ದಶಗಣರ ಪಾದಾಕಾನತನಾಗುವೆ ॥
ಅಮರಗಣವರರಂಘ್ರಿ ಕಮಲಮಂ ನೆನೆನೆನೆದು । ನಮಿಸುತಿಂತು ಸಹಸ್ರ ಸಂಖ್ಯೆಯಿಂದಂ ಮೇಲೆ ॥
ಸಮನಿಗಿಡ ಪಂಚದಿಂಶತಿ ಗಣಾಧೀಶ್ವರ । ರ ನಾಮವಗಂ ವಂದಿಸುವೆನು ॥

(ಪದ್ಯ ೩.)

ಅದೇ ರೀತಿ ಸಾವಿರದ ಇಪ್ಪತ್ತನಾಲ್ಕು ಗಣಧರರ ನಾಮಾವಳಿಯನ್ನೂ ಕೊಟ್ಟಿದ್ದಾನೆ.[123] ವಿವರಣೆ ಹೀಗಿದೆ :—

| | | |
|---|---|---|
| ೧. | ಪ್ರಮಥಗಣರು | ೪೨೧ |
| ೨. | ರುದ್ರಗಣರು | ೧೩೯ |
| ೩. | ವೃಷಭಗಣರು | ೨೦ |
| ೪. | ಪುರಾತನರು | ೬೩ |
| ೫. | ಷೋಡಶಗಣರು | ೧೬ |
| ೬. | ತೆರಸರು | ೧೩ |
| ೭. | ದಶಗಣರು | ೧೦ |
| ೮. | ಅಮರಗಣರು | ೩೫೨ |
| | ಅಂತೂ | ೧೦೨೪ |

ಕೃತಿಯ ಕಡೆಯಲ್ಲಿ ಈ ವಿವರಣೆಯನ್ನು ಕವಿಯೇ ನೀಡಿದ್ದಾನೆ. ಈ ಮೇಲಿನ ಗಣಧರರ ನಾಮಾವಳಿಯನ್ನುಳಿದು ಮತ್ತಾವ ಕಾವ್ಯಾಂಶವೂ ಈ ಕೃತಿಯಲ್ಲಿಲ್ಲ. ಆದರೆ ಕಿಂಚಿತ್ತು ಸ್ವವಿಷಯವನ್ನು—

ಧರಣಿದೇವ ಲಲಾಮನೆನಿಸಿದ
ವರ ಕೆಳದಿ ಲಿಂಗಾರ್ಯ ತನುಭವ
ಗರುವ ವೆಂಕಪನೀ ಗಣಾಧೀಶ್ವರರ ನಾಮಗಳು ||
ಹರುಷದಿಂ ಶಿವನಿತ್ತ ಮತಿಯಿಂ
ವಿರಚಿಸಿದನೀ ಪದವನನಿಶಂ
ಸರಸದಿಂ ಬರೆದೋದಿ ಕೇಳ್ವರ ಪೊರೆವನಾ ಶಿವನು ||

(ಪದ್ಯ ೫)

ಹೀಗೆ ಹೇಳಿಕೊಂಡಿದ್ದಾನೆ. ಸಾಂಪ್ರದಾಯಕ ಕಾವ್ಯರಚನೆ ಅವನ ಉದ್ದೇಶವಲ್ಲವಂತೆ, ಅದನ್ನೂ—

ವಾರಿನಿಧಿಯಂ ಮಹಾರಣ್ಯ ಪರ್ವತಗಳಂ
ನೀರಾಟವಮಂ ಬೇಟವಮಂ ಸೂಳೆಗೇರಿಯಂ
ವಾರನಾರೀ ಜನರ ವಿಟವಿದೂಷಕನುರೆಕೊಂಡಾಡಿ ಬೆಂಡಾಗದೇ ||

123. ಕಾವ್ಯ ಮುಗಿದ ಮೇಲೆ ಪ್ರತ್ಯೇಕವಾದ ಒಂದು ಗರಿಯಲ್ಲಿದೆ.

ಧಾರಿಣಿಯೊಳುಳ್ಳಖಿಲ ಶಿವಭಕ್ತರಂ ಮತ್ತೆ
ಶ್ರೀ ರುದ್ರಗಣರ ಸಹಸ್ರನಾಮದ ಪದವ
ಮಾರಹರನಾಡಿಸಿದ ರೀತಿಯಂದುಸುರ್ವೆನಿದನಾಲಿಪುದು ಸುಜನರ್ಕಳು ||

(ಪದ್ಯ ೬)

ಎಂದು ಈ ಪದ್ಯದಲ್ಲಿ ಸ್ಪಷ್ಟಪಡಿಸಿದ್ದಾರೆ. ಕಾವ್ಯದ ಫಲನನ್ನು ನಮೂದಿಸಿ, ಕಡೆಯಲ್ಲಿ,

ಗುರುವಿನಿಂದತ್ಯಧಿಕ ದೇವತೆಯಿಲ್ಲ
ವರಷಡಕ್ಷರಿಯ ಜಪಕಿಂದಧಿಕ ಜಪಮಿಲ್ಲ
ಮಿರುಗುತಿಹ ಭಸ್ಮರುದ್ರಾಕ್ಷಗಂಧಾದಿಯೊಳ್ಸಾಮ್ಯವಹ ವಸ್ತುವಿಲ್ಲ ||
ಗರುವಗಣಸಹಸ್ರನಾಮಕಿಂತತ್ಯಧಿಕ
ತರ ಮಂತ್ರಮಿಲ್ಲವೀ ಗಣರ ಮಹಾತ್ಮೆಯಂ
ವರ ಕೆಳದಿ ಪುರದರಸ ರಾಮೇಶ್ವರನೆ ಬಲ್ಲನವನಭಕ್ತರೆ ಬಲ್ಲರು ||

(ಪದ್ಯ ೧೦೧)

ಎಂದು ಹೇಳಿ ಮಂತ್ರದ ಮಹತ್ವವನ್ನು ನಿರೂಪಿಸಿದ್ದಾನೆ. ಇದು ಕವಿ ವೆಂಕಣ್ಣನು ಶಿವಭಕ್ತರಿಗಿತ್ತ ಗಣಧರ ಪದಾವಳಿ.

### ಆ) ಶ್ರೀ ಪಾರ್ವತೀವಲ್ಲಭಶತಕ:

ಇದು ಕವಿ ವೆಂಕಣ್ಣನ ನೀತಿಕಾವ್ಯ. ನೀತಿಶತಕವೆಂದು ಹೇಳಿದರೂ ಹೇಳಬಹುದು. ಕೆಳದಿಯ ವೆಂಕವಿಬುಧನ ಕೃತಿಯಂತೆ ಬೇರೊಂದು ಪಾರ್ವತೀವಲ್ಲಭ ಶತಕ ಕನ್ನಡದಲ್ಲದೆ.[124] ಆದರೆ ಅದಕ್ಕೂ ಇದಕ್ಕೂ ರಚನೆಯಲ್ಲಲ್ಲದಿದ್ದರೂ ವಸ್ತು ನಿರೂಪಣೆಯಲ್ಲಿ ತುಂಬಾ ವ್ಯತ್ಯಾಸವಿದೆ. 'ಪಾರ್ವತೀವಲ್ಲಭಾ'ಎಂದು ಪ್ರತಿಪದ್ಯದ ಅಂತ್ಯದ ಅಂಕಿತದಲ್ಲಿ ಮಾತ್ರ ಇವೆರಡಕ್ಕೂ ಸಾಮ್ಯ ಇದೆ. ಆರಂಭದ ಪದ್ಯಗಳಲ್ಲಿ ಕವಿ ವೆಂಕಣಾರ್ಯನು ಓದುಗರ ರಂಜನೆಗಾಗಿ ಹಲವು ಶೃಂಗಾರ ಪದ್ಯಗಳನ್ನು ಹೆಣೆದು, ಹಂತಹಂತವಾಗಿ ಭಕ್ತಿವೈರಾಗ್ಯಗಳ ಕಡೆಗೆ ಮನಸ್ಸು ಓಲುವಂತೆ ಮಾಡಿದ್ದಾನೆ—

ಉದಾಹರಣೆಗೆ—

ನಗಯಂ ಪುಟ್ಟಿಸಿ ಲಲ್ಲೆದೋರಿ ತುಟಿಯಂ ಕರ್ಚುತ್ತೆ ತೋಳಿಂಬ ಪಾ
ಶಗಳಿಂ ಬಂಧಿಸಿ ಮೇಲಡರ್ದುರವನೊತ್ತುತ್ತಂ ಸ್ತನದ್ವಂದ್ವದಿಂ

---

124 ವೀರಭದ್ರರಾಜಕೃತ 1530 ; ಕ.ಕ.ಚ. II, 217, 219, 220.

ಸೊಗಸಂ ಬೀರುವ ನಲ್ಲಳಂ ನೆರವ ಸೌಖ್ಯಂ ಪೂರ್ವಜನ್ಮಂಗಳೋ
ಳ್ಮಿಗೆ ನಿಂನರ್ಚಿಸದರ್ಗೆ ತಾಂ ದೊರವುದೇಂ ಶ್ರೀ ಪಾರ್ವತೀವಲ್ಲಭಾ ||

(ಪದ್ಯ ೮)

ಈ ಪದ್ಯದ ಪ್ರಥಮ ಪಾದಗಳನ್ನೂ ಕಡೆಯ ಪಾದವನ್ನೂ ಗಮನಿಸಿ—

ಧನಮುಳ್ಳಾತನೇ ಭಾವಿಸಲ್ಸಕಲವಂ ಬಲ್ಲಾತನಂತಾತನೇ
ಘನವಿದ್ವಾಂಸರೊಳಗ್ಗಳಂ ಗುಣಯುತಂ ಸರ್ವಜ್ಞನಂತಾತನೇ
ವಿನಯಜ್ಞಂ ಸುಕುಲೀನನೆಂದುಃಸುರುವಲೋರ್ಕಂಗಳಂ ಸಂತತಂ
ಧನದೊಳ್ಬದ್ಧರಮಾಡಿ ನೀ ಕುಣಿಸುವೈ ಶ್ರೀ ಪಾರ್ವತೀವಲ್ಲಭಾ ||

(ಪದ್ಯ ೨೩)

ಎಂಬಲ್ಲಿ ಲೌಕಿಕ ರೀತಿ, ಅದರಲ್ಲೂ ಗುಣಕ್ಕಿಂತ ಹಣಕ್ಕಿರುವ ಮಾನ್ಯತೆಯನ್ನೂ, ಇದನ್ನು ದಯಪಾಲಿಸಿ ಆಟವಾಡುತ್ತಿರುವ ಸೂತ್ರಧಾರಿ ಪರಶಿವನನ್ನೂ ಸ್ಮರಿಸಿ—

ಸತಿಯಿರ್ಪಾತಗೆ ಪುತ್ರರಿಲ್ಲವೆನುತಂ ಸತ್ಪುತ್ರರಿರ್ಪಾತಗಂ
ಸತಿತಾನಿಲ್ಲವೆನುತ್ತೆಯಾ ಸತಿಸುತರ್ನೈತಿರ್ಪಗಂ ದ್ರವ್ಯಸಂ
ತತಿಯೊಳ್ದ್ರವ್ಯಗಳಿರ್ಪಗಂ•ಸತಿಯೊಳಂ ಸತ್ಪುತ್ರರೊಳ್ಚಿಂತೆಯು
ನ್ನತಿಯಂ ಪುಟ್ಟಿಸಿ ಲೋಕವಂ ಕುಣಿಸುವೈ ಶ್ರೀ ಪಾರ್ವತೀವಲ್ಲಭಾ ||

(ಪದ್ಯ ೫೮)

—ಎಂದು ಅಲ್ಲೂ ಆ ಶಿವನ ಲೀಲೆಯನ್ನೇ ಬಿತ್ತರಿಸಿದ್ದಾನೆ.

ಹರನೆಂಬಾತಗೆ ಕೋಟಿಜನ್ಮಕೃತಪಾಪಂ ಪಿಂಗದೇ ನಿಲ್ಪುದೇ
ಹರನೆಂಬಾತಗೆ ಶೈವಲೋಕಮರಿಯಲ್ತಾಂ ದೂರವೇನಪ್ಪದೇ
ಹರನೆಂಬಾತಗೆ ಮುಕ್ತಿ ಮಾನಿನಿಯಣಂ ತಾಂ ದೂರಮಂಸಾರ್ವಳೇ
ಹರನಾಮಕ್ಕೆಣೆಯಾದ ನಾಮವಿಹುದೇ ಶ್ರೀ ಪಾರ್ವತೀವಲ್ಲಭಾ ||

(ಪದ್ಯ ೮೧)

—ಎಂದು ಹರನಾಮದ ಹಿರಿಮೆಯನ್ನು ಹೇಳಿದ್ದರೂ—

ನೀನೇ ಬ್ರಹ್ಮನುವಾಗಿ ಸರ್ವಜಗಮಂ ಮೇಣೀಸೃಷ್ಟಿಯಂ ಮಾಡೆಯಾ
ನೀನೇ ವಿಷ್ಣುವೆಯಾಗಿ ಸರ್ವಜಗಮಂ ರಕ್ಷಣ್ಯಮಂ ಮಾಡೆಯಾ

ನೀನೇ ರುದ್ರನುಮಾಗಿ ಸರ್ವಜಗಮಂ ಸಂಹಾರಮಂ ಮಾಡೆಯಾ
ನೀನೇ ಸರ್ವಕೆ ಕಾರಣಂ ತಿಳಿದೊಡಂ ಶ್ರೀ ಪಾರ್ವತೀವಲ್ಲಭಾ ||

(ಪದ್ಯ ೯೨)

—ಎಂಬಲ್ಲಿ ಸೃಷ್ಟಿ ಸ್ಥಿತಿ ಲಯ ಕರ್ತನೂ ಅವನೇ ಎಂಬ ಏಕತ್ವವನ್ನು ಸಾರಿದ್ದಾನೆ.

ಒಟ್ಟಿನಲ್ಲಿ, ದೈವಭಕ್ತಿ, ಗುರುಭಕ್ತಿ, ಗುರುಹಿರಿಯರಲ್ಲಿ ಶ್ರದ್ಧೆ, ಧರ್ಮದಲ್ಲಿ ಒಲವು, ಹಾಗೂ ನಿಷ್ಠೆಯ ನಿಲವನ್ನು ನಿರೂಪಿಸುವ ತಾತ್ವಿಕಗ್ರಂಥ ಈ ಪಾರ್ವತೀ ವಲ್ಲಭಶತಕ ಎಂದು ಹೇಳಬಹುದು.

ಗಣಸಹಸ್ರನಾಮದಂತೆ ಇದರಲ್ಲೂ ೧೦೧ ಪದ್ಯಗಳಿವೆ. ಅದು ಷಟ್ಪದಿಗಳ ರಚನೆ, ಇದು ವೃತ್ತಗಳ ರಚನೆ. ಶಾರ್ದೂಲ, ಚಂಪಕ, ಮತ್ತೇಭವಿಕ್ರೀಡಿತಗಳಿಂದ ಇದನ್ನು ಹೆಣೆದಿದ್ದಾನೆ. ಸೋಮೇಶ್ವರಶತಕದ ಪ್ರಭಾವವೂ, ಶಾಸನದ ಪ್ರಭಾವವೂ[125] ಈ ಕವಿಯ ಮೇಲೆ ಸಾಕಷ್ಟು ಪ್ರಮಾಣದಲ್ಲಿ ಆಗಿರುವಂತೆ ಕಾಣುತ್ತದೆ.

## ಇ) ನರಹರಿ ವಿಜಯ:

'ನರಹರಿ ವಿಜಯ'ದ ಮೊದಲ ಗರಿ ಸಿಕ್ಕಿಲ್ಲ. ಇದರಲ್ಲಿ ಸಿಕ್ಕಿರುವಷ್ಟುಮಟ್ಟಿಗೆ ೮೫ ಪದ್ಯಗಳು, ಒಟ್ಟು ೭ ಗರಿಗಳು ಮಾತ್ರ ಇವೆ. ಆದರೆ ಅಷ್ಟರಲ್ಲೇ 'ನರಹರಿ ವಿಜಯ' ವೆಂಬ ಹೆಸರಿಗೆ ಅನ್ವಯವಾಗುವಂತೆ, ಹಿರಣ್ಯಕಶಿಪುವಿನ ವಧೆಯೊಂದಿಗೆ ಕಾವ್ಯಮುಕ್ತಾಯಗೊಂಡಿದೆ. ಸಂಕ್ಷಿಪ್ತವಾಗಿ ಹೇಳಲ್ಪಟ್ಟ ಈ ಕೃತಿಯು ನರಸಿಂಹಾವ ತಾರದವರೆಗೆ ಮಾತ್ರ ಪರಿಮಿತಗೊಂಡಿದೆಯೋ ಅಥವಾ ಇನ್ನೂ ಬೇರೆ ಬೇರೆ ಆಖ್ಯಾಯಿಕೆಗಳಿಂದ ಸುದೀರ್ಘ ವ್ಯಾಪ್ತಿಯನ್ನು ಪಡೆದಿದೆಯೋ ತಿಳಿಯದು. ವೆಂಕಣ್ಣ ಬಹಳ ಸಂಗ್ರಹಶೀಲನಾದ ವ್ಯಕ್ತಿ. ಅಪ್ಪನಂತೆ ಅನಗತ್ಯ ವರ್ಣನೆಯಲ್ಲೇ ಕಾಲಹರಣ ಮಾಡುವವನಲ್ಲ. ಆದ್ದರಿಂದ ಅವನ ರಚನೆ ಕೇವಲ ೮೫ ಪದ್ಯಗಳ ಪರಿಮಿತಿಯುಳ್ಳದ್ದು ಇರಬೇಕು ಎಂದು ಊಹಿಸಿಕೊಳ್ಳಬಹುದು.

ನರಹರಿವಿಜಯ ಸಂಪೂರ್ಣವಾಗಿ ಭಾಮಿನಿಯಲ್ಲಿ ರಚಿತವಾಗಿದೆ. ಮೊದಲೇ ಹೇಳಿದಂತೆ ಇದು ಪ್ರಹ್ಲಾದ ಚರಿತ್ರೆ ಅಥವಾ ನರಸಿಂಹಾವತಾರದ ಕಥೆ. ಪ್ರಹ್ಲಾದನು ಹುಟ್ಟಿದ ದಿವಸ ಅವನ ತಂದೆ ಹಿರಣ್ಯಕಶಿಪು—

---

125 ಅದೇ. ಪದ್ಯ. 46 (ದಾವಣಗೆರೆ 59ನೆಯ ಶಾಸನ ಶಾಸನಪದ್ಯಮಂಜರಿ ಪುಟ 254ರ ಪದ್ಯ ನೋಡಿ.)

ಕುಲಪುರೋಹಿತರಿಂಗೆ ರತ್ನಾಭರಣ ಭೂಷಣವಿತ್ತು ವರಮಂ
ಗಲಮುಹೂರ್ತದೆ ಸುತಗೆ ಪ್ರಹ್ಲಾದನುಯೆನುತ ಪೆಸರ
ನೆಳವಡಿಸಿ ವರಬಾಲದೊಡಿಗೆಯು ಚಲುವ ಭೂಷಣವಿ........ತ್ತನ
ನಲಿನಲಿದು ನೋಡುತ್ತ ನಸುನಗುತಿರ್ದನಸುರೇಂದ್ರ ||

(ಪದ್ಯ ೨೩)

ಇಂತಹ ಅಸುರೇಂದ್ರನು

ಸುರರ ಮೊದಲಾದಮರರೇ ಕಿಂ | ಕರರು ಮತ್ಸನ್ನಿಧಿಗೆ ಬರುವರು
ಸರಸಿರುಹ ಸಂಭವನು ಪ್ರತಿದಿನ ಬಂದು ಹರಸುವನು ||
ಹರನು ಭಿಕ್ಷವಬೇಡಿಯುದರವ | ಪೊರವನಾಶನಗೊಡವೆಯಾತಕೆ
ಸಿರಿಯುಮುದದಿಂದಾ ಮುರಾಂತಕನೊರ್ವ ಮಲೆತಿಹನು ||

(ಪದ್ಯ ೨೭)

ಎಂದು ಶ್ರೀಮನ್‌ಮಹಾವಿಷ್ಣುವಿನ ಮೇಲೆ ಕಣ್ಣಿಟ್ಟು, ತನ್ನವರಿಗೆ ಧಾಳಿ ನಡೆಸಲು ಆಜ್ಞೆ ಮಾಡುತ್ತಾನೆ. ಆಗ ರಕ್ಕಸರು—

ಕಡಿದರರಳಿಯಮರನ ಯಜ್ಞವ | ಕೆಡಿಸಿದರು ಮಧುಘೃತವನೆಲ್ಲವ
ಕುಡಿದು ಥರ್‍ರನೆ ತೇಗಿದರು ಪಶುವಧೆಯನೆಸಗಿದರು |
ಕಡಿದರಾಹುತಿಗಳನು ಕೈಯೊಳೆ | ಪಿಡಿದಸ್ರುಕ್ಸ್ರುವಗಳನ್ ಸೆಳೆದರು ||
ಹುಡುಹುಡಿಯ ಮಾಡಿದರು ಮಂಟಪ ಕಲಶ ಕಂಸಡಿಯ ||

(ಪದ್ಯ ೩೧)

—'ಅಗ್ರಹಾರಗಳಿಗೆ ನುಗ್ಗಿ ವಿಪ್ರರನು ನಿಗ್ರಹಿಸಿ ಅವರ ಜನ್ನಿವಾರ ಜುಟ್ಟುಗಳನ್ನು ಹಿಡಿದೆಳೆದರು'. ಮೂರು ಕಾಲ ಇವರಿಗೆ ಸ್ನಾನವೇಕೆ ?

ಕುರಿಯಾ ಕೊರಳನು ಕೊಯ್ದು ಕರುಳ್ಗಳನುರಿಯೊಳು ಹಾಕುವರು
ಹುಲ್ಲನೆ | ಬೆರಳೊಳಗೆ ಸಿಕ್ಕುವರು ಬೂದಿಯು ಮುಂಣಹಚ್ಚುವರು ||
ಕೊರಳ್ಗೆ ನೂಲಿನ ಸರವ ಹಾಕುವದೊರಲುವರು ವೇದವನು
ಕಾಗೆಯು | ಕರದು ಕೂಳಿಗೆ ಚಲ್ಲುವರ ತೆಗೆಯೆಂದುದಸುರಗಣ ||

(ಪದ್ಯ ೩೯)

ಈ ಪದ್ಯಗಳಲ್ಲಿ ಕವಿಯ ವಿನೋದ ಭಾವನೆಯನ್ನು ಗ್ರಹಿಸಬಹುದು.

ಆಗ ವಿಪ್ರರು, ದೇವತೆಗಳೂ ಶ್ರೀ ವಿಷ್ಣುವಿಗೆ ಮೊರೆಯಿಡುತ್ತಾರೆ. ಶ್ರೀಮನ್ ಮಹಾವಿಷ್ಣುವು ಹಿರಣ್ಯಕಶಿಪುವಿನ ಮಗನನ್ನು ಸಲಹುವ ಸಲುವಾಗಿ ತಾನು ಅವತರಿಸಿ, ರಕ್ಕಸನನ್ನು ಸಂಹರಿಸಿ ಲೋಕಕಲ್ಯಾಣವನ್ನು ಮಾಡುವುದಾಗಿ ಅಭಯವಿತ್ತು ಕಳುಹಿಸುತ್ತಾನೆ.

ಮುಂದೆ ಪ್ರಹ್ಲಾದನ ಹಿಂಸೆಗೆ ಆರಂಭವಾಗುತ್ತದೆ. ಆತ ತನ್ನ ತಂದೆಗೆ-ಹರಿಯೆ ಸರ್ವಾತ್ಮಕನು; ಅವನೊಡನೆ ವೈರ ಬೇಡ ಬಿಡು ಎಂದು ಅನೇಕ ರೀತಿ ಹೇಳಿ, ಕಡೆಗೆ ಪರಮಾತ್ಮನ ನರಸಿಂಹ ಸ್ವರೂಪವನ್ನು ದರ್ಶಿಸಿ, ಅವನಿಂದಲೇ ಶೋಣಿತ ಪುರದ ಸಾಮ್ರಾಜ್ಯ ಪಟ್ಟವನ್ನು ಕಟ್ಟಿಸಿಕೊಂಡು ಲೋಕಪಾಲಕನಾಗುತ್ತಾನೆ. ಸುರರು ಹೂಮಳೆಗರೆಯುತ್ತಾರೆ.

ನರಹರಿಯ ವಿಜಯವನು ಕೇಳುವ |
ನರರಿಗಷ್ಟೈಶ್ವರ್ಯಸಿದ್ಧಿಯ |
ಸರಸದಿಂದಲಿ ಶತ್ರು ವಿಜಯವ ಪುತ್ರ ಪೌತ್ರನು ||
ಪರಮಸಂತೋಷದಲಿ ಮೋದುವ |
ಬರವ ಸ್ಮರಿಸುವವರಭಿಮತಂಗಳ |
ಕರುಣಿಸುವ ಲಕ್ಷ್ಮೀನೃಸಿಂಹನು ಪೂರ್ಣ ಕೃಪೆಯಿಂದ ||

(ಪದ್ಯ ೮೫)

ಶ್ರೀ ಶ್ರೀ ಶ್ರೀ—ಎಂದು ಕಾವ್ಯ ಮುಗಿವು ಪಡೆದಿದೆ.

### ಈ) ಶ್ರೀರಾಮೇಶ್ವರನನ್ನು ಕುರಿತ ಹಾಡುಗಳು:

ಕೆಳದಿ ವೆಂಕಣ್ಣನವೆಂದು ಊಹಿಸಬಹುದಾದ ಸುಮಾರು ೩೧ ಪದಗಳ ಸಂಕಲನ ವೊಂದು ಸಿಕ್ಕಿದೆ.[126] ಇದು ರಾಗತಾಳಗಳಿಂದ ಕೂಡಿದ ಪದಾವಳಿ. ವಿಷ್ಣ್ವೀಶ್ವರನ

126 ಕೆಳದಿಯ ವೆಂಕಭಟ್ಟನು ರಚಿಸಿದ ಗ್ರಂಥಗಳು—ಎಂಬ ಕಟ್ಟನಲ್ಲಿ ಸಿಕ್ಕಿದ ಪದಗಳು ಇವು ಯಾವ ಪದದಲ್ಲೂ ವೆಂಕಕವಿಯ ಹೆಸರಿಲ್ಲ. ಕೇವಲ "ಕೆಳದಿರಾಮೇಶ್ವರ" ಎಂಬ ಅಂಕಿತವಿದೆ. ಈತನು ತನ್ನ ಗಣಸಹಸ್ರನಾಮದ ಅಂತ್ಯದಲ್ಲಿ ಪದ್ಯ 101ರಲ್ಲಿ 'ವರ ಕೆಳದಿ ಪುರದರಸರಾಮೇಶ್ವರನೆಬಲ್ಲನೆ' ಎಂತಲೂ, ಪಾರ್ವತೀವಲ್ಲಭಶತಕದ ಆದಿಯಲ್ಲೂ (ಪದ್ಯ 1) ಅಂತ್ಯದಲ್ಲೂ (ಪದ್ಯ 101) ಕೆಳದಿ ರಾಮೇಶನನ್ನು ಸ್ಮರಿಸಿದ್ದಾನೆ. ಬಹುಶಃ "ಕೆಳದಿರಾಮೇಶ" ಎಂಬ ಅಂಕಿತ ವೆಂಕ ಕವಿಯದ್ದಿರಬೇಕು. ಈ ಅಂಕಿತವುಳ್ಳ ನಮಗೆ ದೊರೆತ 31 ಪದಗಳೂ ಅವನವೇ ಇರಬೇಕು ಎಂದು ಊಹಿಸಿದ್ದೇವೆ.

ಪ್ರಾರ್ಥನೆಯಿಂದ ಆರಂಭವಾಗುವ ಈ ಪದದ ಪುಸ್ತಕ ಸರಳಶೈಲಿಯ ಸುಂದರ ರಚನೆಯಾಗಿದೆ. ಪ್ರತಿಪದದ ಅಂತ್ಯದಲ್ಲೂ ಶ್ರೀ ಕೆಳದಿ ಪುರವರಾಧೀಶನಾದ ಶ್ರೀರಾಮೇಶ್ವರನ ಸ್ಮರಣೆ ಇದೆ.

ಕ್ರಮವಾಗಿ ಎರಡನೆಯ ಪದ್ಯದಲ್ಲಿ ಬಾಲಕರಾಶೀರ್ವಾದದ ಹಾಡನ್ನು ಹಾಡುವುದಾಗಿ ಹೇಳಿ—ಮೈಲಾರಲಿಂಗ, ಕೊಲ್ಲೂರ ಮೂಕಾಂಬಿಕೆ, ಚಂದ್ರಮೌಳಿ, ಹಂಪೆಯ ವಿರೂಪಾಕ್ಷಸ್ವಾಮಿ, ಕುಕ್ಕೆಯ ಸುಬ್ರಹ್ಮಣ್ಯ ಇವರನ್ನು ಭಕ್ತಿಯಿಂದ ಪ್ರಾರ್ಥಿಸಿದ್ದಾನೆ.

ಪುರಂದರದಾಸರ ಹಾಗೂ ಕನಕದಾಸರ ಕೀರ್ತನೆಗಳನ್ನು ಕವಿ ವೆಂಕಣ್ಣನ ಪದಗಳು ಸ್ಮರಣೆಗೆ ತರುತ್ತವೆ. ಅಷ್ಟೇಕೆ ಜನಪ್ರಿಯವಾದ ಪುರಂದರರ ಕೃತಿಗಳು, ಇವರ ಮೇಲೆ ಪ್ರಭಾವ ಬೀರಿದ್ದರೂ ಬೀರಿರಬಹುದು. ಉದಾಹರಣೆಗೆ

ರಾಗ ಕಾಂಬೋಧಿ :—

ಯಾಕಿಷ್ಟು ದಯವಿಲ್ಲ ಎಂನ ಮೇಲೆ
ನೀ ಕರುಣಿಸಿದ ರಾಗದ ಕಾರ್ಯವುಂಟೆ || ಪಲ್ಲ ||

ಬಾಲೆಗೊಲಿದು ಹಾಲ ಕುಡಿದವನೆಂದೆನೆ
ಸೂಳೆಯ ಮನೆಗೆ ನಾ ಹೋಗೆಂದೆನೆ
ಲೋಲಾಕ್ಷಿಯ ಕುಚದೊಳೆ ಮಾತಾಡೆಂದೆನೆ
ಚೋಳನಂತೆ ಹೊನ್ನಮಳೆಯ ಕರೆಯೆಂದೆನೆ ||

ಮಲ್ಲಗಾಳಗವನು ಮಾಡಿದನೆಂದೆನೇ
ಬಿಲ್ಲಿನಿಂ ಬಿಡಿಸಿಕೊಂಡವನೆಂದೆನೇ
ಎಲ್ಲರರಿಯೆ ತಿರಿದುಂಡವನೆಂದೆನೆ
ಕಲ್ಲುಮನವೆ ಕೆಳದಿಯ ರಾಮೇಶ್ವರಲಿಂಗ ||

(ಪದ. ೪)

ಇಂತಹ ಕೀರ್ತನೆಗಳಲ್ಲದೆ ಸತ್ಯಭಾಮಾ ಶ್ರೀಕೃಷ್ಣರ ಸಂವಾದ ಮತ್ತು ಶಿವ ಪಾರ್ವತಿಯರ ಸಂವಾದಗಳನ್ನು ತುಂಬಾ ಸರಳವಾಗಿ ಹೃದಯಂಗಮವಾಗಿ ರಚಿಸಿದ್ದಾನೆ.

ಕೆಳದಿಯ ಕವಿಮನೆತನದ ವೆಂಕನು ಹೊಗಳಿಸಿಕೊಳ್ಳುವಷ್ಟು ದೊಡ್ಡವನೇನಲ್ಲ. ತುಂಬಾ ಸಾಧಾರಣ ಮಟ್ಟದ ಕವಿ. ಇವನಲ್ಲಿ ಪಾಂಡಿತ್ಯದ ಕೊರತೆಯೂ ಇದೆ, ಪ್ರತಿಭೆಯ ದಾರಿದ್ರ್ಯವೂ ಇದೆ. ಆದರೂ 'ಕವಿ' ಮನೆತನದ ಗೌರವವನ್ನು ಉಳಿಸಿದ ಸಾತ್ವಿಕ ಸ್ವಭಾವದ ಕವಿ.

## XII ಕೆಳದಿಯ ಸುಬ್ಬ (ಕ್ರಿ. ಶ. ೧೭೬೦)

ಪ್ರಸಂಗಕಾರ ಕೆಳದಿಯ ಸುಬ್ಬನು ಕೆಳದೀ ಸಾಮ್ರಾಜ್ಯ ವೈಭವದ ಕಡೆಯ ದಿನಗಳಲ್ಲಿ ಬದುಕು ಮಾಡಿದವನು. ಸಾಮ್ರಾಜ್ಯ ಸೂರೆಯಾಗಿ, ತನಗೆ ರಾಜಾಶ್ರಯ ತಪ್ಪಿದ ವೇಳೆ, ಜನಾಶ್ರಯ ಪಡೆದು ಯಕ್ಷಗಾನ ಪ್ರಸಂಗಗಳ ರಚಕನಾಗಿ, ನಟನಾಗಿ ಇಲ್ಲವೇ ಭಾಗವತನಾಗಿ ಬದುಕು ಸಾಗಿಸಿರಬಹುದು. ತನ್ನೆರಡೂ ಯಕ್ಷಗಾನ ಕೃತಿಗಳಲ್ಲಿ ರುಕ್ಮಿಣೀ ಸ್ವಯಂವರವನ್ನು ಕೆಳದಿಯ ಅರಸು ಮನೆತನ ಅಸ್ತಿತ್ವದಲ್ಲಿದ್ದಾಗಲೂ ಪಾರಿಜಾತವನ್ನು ಆ ಮನೆತನದ ಪತನಾನಂತರವೂ ರಚಿಸಿದ್ದಿರಬಹುದು. ಏಕೆಂದರೆ ರುಕ್ಮಿಣೀ ಸ್ವಯಂವರ ಪ್ರಸಂಗದಲ್ಲಿ ಸ್ವವಿಷಯವನ್ನು ಹೇಳಿಕೊಳ್ಳುವಾಗ ತನ್ನ ತಂದೆಯ ಆಶ್ರಯದಾತನಾದ "ಭೂರಮಣ ಬಸವೇಂದ್ರ" ಅಂದರೆ ಕಿರಿಯ ಬಸವಪ್ಪ ನಾಯಕನನ್ನು ಸ್ಮರಿಸಿದ್ದಾನೆ. ಆದರೆ ಆ ಸ್ಮರಣೆ ಪಾರಿಜಾತ ಪ್ರಸಂಗದಲ್ಲಿಲ್ಲ. ಆ ಕಾರಣ ಇವನ ಕಾಲವನ್ನು ಕ್ರಿ.ಶ. ೧೭೬೦ ಎಂದು ನಿರ್ಧರಿಸಿ ಹೇಳಬಹುದಾಗಿದೆ.

ಈ ಪ್ರಸಂಗದ ಕರ್ತೃ ತನ್ನೆರಡೂ ಕೃತಿಗಳಿಗೆ ಭಾಗವತದಿಂದಲೆ ವಸ್ತುವನ್ನಾಯ್ದಿದ್ದಾನೆ. ಎರಡೂ ಕೃತಿಗಳಲ್ಲಿ ಶೃಂಗಾರಕ್ಕೆ ಸಮ ಪ್ರಮಾಣದಲ್ಲಿ ವೀರರಸ ಸಮಾವೇಶಗೊಂಡಿದೆ. ಇಲ್ಲಿ ರುಕ್ಮ, ಚೈದ್ಯಪತಿ ಮೊದಲಾದವರ ಗರ್ವಭಂಗವಾಗಿದ್ದರೆ, ಅಲ್ಲಿ ದೇವೇಂದ್ರನ ಅಹಂಕಾರ ಅಳಿದಿದೆ. ನರಕಾಸುರನ ಸಂಹೃತಿಯಾಗಿದೆ. ಅಂತೂ ಕಾಳಗದ ಕಲಿತನದಲ್ಲಿ ಪ್ರೇಮಿಗಳ ಪ್ರಣಯ ಸಿದ್ಧಿಸಿದೆ. ಆದರೂ ರುಕ್ಮಿಣೀ ಸ್ವಯಂವರಕ್ಕಿಂತ ಪಾರಿಜಾತ ಉತ್ತಮ ಕಲಾಕೃತಿ. ಕವಿಯ ಕೈ ಅಲ್ಲಿ ಹೆಚ್ಚು ಪಳಗಿರುವುದು ಕಂಡು ಬರುತ್ತದೆ.

### ರುಕ್ಮಿಣೀ ಸ್ವಯಂವರ :

ಈ ಯಕ್ಷಗಾನ ಕೃತಿಯ ಆರಂಭದಲ್ಲಿ ಗಣಪ, ಶಿವ, ಶಿವೆ (ಮೂಕಾಂಬಿಕೆ) ವಿಷ್ಣು, ಲಕ್ಷ್ಮಿ, ಬ್ರಹ್ಮ, ಶಾರದೆ ಮೊದಲಾದ ದೇವ ಗುರು ಪ್ರಾರ್ಥನೆ ಮಾಡಿ ಸತ್ಕಥಾ ಪ್ರಸಂಗಕ್ಕೆ ಕೈ ಹಾಕಿದ್ದಾನೆ. ದ್ವಾರಕಿಯ ಕೃಷ್ಣ ತನ್ನ ಅಣ್ಣ ಬಲರಾಮನ ನೆರವಿನಿಂದ ಕುಂಡಿನಪುರಕ್ಕೆ ಬಂದು, ಅಲ್ಲಿನ ಅರಸುಗುವರಿ ರುಕ್ಮಿಣಿಯನ್ನು ಕೊಂಡೊಯ್ದು ಲಗ್ನವಾಗುತ್ತಾನೆ. ರುಕ್ಮಿಣಿಯ ತಂದೆ, ಭೀಷ್ಮಕನು ತನ್ನ ಮಗಳ ಇಚ್ಛೆ ಪೂರ್ಣವಾಗಲು ನೆರವಾಗುತ್ತಾನೆ. ಕೃಷ್ಣನೊಡನೆ ಅವಳ ಲಗ್ನವನ್ನು ವಿರೋಧಿಸಿದ ಅವಳಣ್ಣ ರುಕ್ಮ ಚೈದ್ಯರಾಜನಿಗೆ ಕೊಡಲು ಯತ್ನಿಸಿ ವಿಫಲನಾಗುತ್ತಾನೆ. ಕೃಷ್ಣನಿಂದ ರುಕ್ಮನ ಗರ್ವಭಂಗವಾಗುತ್ತದೆ.

ಇದು ಕಥಾಭಿತ್ತಿ. ಇಲ್ಲಿ ಕುಂಡಿನಪುರದಿಂದ ಕನ್ಯೆ ರುಕ್ಮಿಣಿಯ ದೌತ್ಯವನ್ನು

ಹೊತ್ತು ದ್ವಾರಕಿಗೆ ಬಂದ ವಿಪ್ರನೊಬ್ಬನ ಪಾತ್ರ ಸೃಷ್ಟಿ ಚೆನ್ನಾಗಿದೆ. ಅವನು ತಂದೊಪ್ಪಿಸಿದ ಪತ್ರಸಾರ ಹೀಗಿದೆ—

ರಾಗ : ಕೇದಾರ ಗೌಳ, ಝಂಪೆ ತಾಳ :

ಶ್ರೀ ರಮಣಿಯರಸ ಸುವಿ | ಚಾರಿ ಸನ್ನುತ ತೋಷ | ಮಾರನಯ್ಯನೆ ನಿನ್ನ ಪದಕೆ ||
ಭೂರಮಣ ಭೀಷ್ಮಕ ಕು | ಮಾರಿ ರುಕ್ಮಿಣಿಯೆಂಬ | ನಾರಿ ಮಾಡುವ
ಬಿನ್ನಹವನು || ೧ ||

ಲಾಲಿಸು ಕೃಪಾಂಬುನಿಧಿ | ಬಾಲತನದಲಿ ನಾನು | ಶೀಲಗುಣಗಳ ಕೇಳಿ ನಿನ್ನ ||
ಮೇಲೆ ಮನವಿರಿಸಿಯನು | ಕೂಲೆಯಾಗಿರಲಣ್ಣ | ಖೂಳತನದಲಿ ನೆನೆದನೊಂದ || ೨ ||

ತಂದೆ ತಾಯಿಗಳು ನೆರೆ | ಬಂಧುಗಳು ನಿನಗೀವೆ | ವೆಂದು ನಿಶ್ಚಯ ಮಾಡೆ ಕೇಳಿ ||
ಮಂದಮತಿಯಲಿ ಚೈದ್ಯ | ನಿಂಗೀವೆನೆನುತ ಭರ | ದಿಂದ ಕರೆಸಿದನು
ಭೂಮಿಪರ || ೩ ||

ಕೊಡುವ ನಾಳಿನಲಿ ಕಂ | ಗೆಡಿಕೆ ಬಂದಿದೆ ಬಾಯ ಬಿಡುತಿಹೆನು ಬಹಳ ಮಾತೇನು ||
ಒಡೆಯ ನೀನಿಹೆಯೆಂದು | ಪಿಡಿದಿಹೆನು ಜೀವವನು | ತಡೆಯದಯ್ತರಬೇಕು
ಜವದಿ || ೪ ||

ಗಿರಿಜೆಯನು ಪೂಜಿಪಡೆ | ಪುರಬಾಹೆಗಯ್ತಹೆನು | ಭರದೊಳಲ್ಲಿಗೆ ಬಂದು ಎನ್ನ ||
ಕರಗ್ರಹಣವನು ಮಾಡಿ | ದುರುಳರನು ಸದೆದು ನಿಜ | ಚರಣದಾಸಿಯ
ಪಾಲಿಸುವುದು || ೫ ||

ಮುನ್ನ ತವ ಪಾದಾಬ್ಜವನ್ನು ನಾ ಭಜಿಸಿದ್ದ | ಡಿನ್ನು ನೀ ಕರುಣದಿಂದೊಲಿದು
ಮನ್ನಿಸುವಡಭಿಮಾನ | ನಿನ್ನದೈಸಲೆ ಸುಗುಣ | ರನ್ನ ಚಿತ್ತವಿಸು ಬಿನ್ನಪವ || ೬ ||

—ಇಂತಹ ಮಧುರಭಾವದಿಂದ ಬೆಡಗುವಡೆದ ಕಾವ್ಯ ಇದರಲ್ಲಡಗಿದೆ.

### ಪಾರಿಜಾತ :

ರುಕ್ಮಿಣೀ ಸ್ವಯಂವರದಂತೆಯೇ ಇದರಲ್ಲೂ ಆರಂಭದಲ್ಲಿ ತನ್ನ ಇಷ್ಟದೇವತೆಯಾದ ದೇವಕಿಯಣುಗನ ಪ್ರಾರ್ಥನೆಯ ನಂತರ ಗಣಪ, ಶಿವ, ಶಿವೆ ಮೊದಲಾದವರನ್ನು ಸ್ಮರಿಸಿ,

ದ್ವಿಪದಿ—

ಪಾರಿಜಾತವ ತಂದು ರಂಜಿಸಿದ ಕಥೆಯಾ।
ಸಾರವನು ಕುಟಜಾದ್ರಿ ಸದನ ವಾಸಿನಿಯಾ ॥
ಕೃಪೆಯಿಂದ ಪೇಳ್ವೆ ನಾ ಯಕ್ಷಗಾನದಲಿ।
ವಿಪುಳಮತಿಯುತರಿದನು ಕೇಳಿ ಲಾಲಿಸಲಿ ॥

—ಎಂದು ತನ್ನ ವಿನಯವನ್ನು ಮೆರೆದಿದ್ದಾನೆ.

ಕಥೆ ಆರಂಭವಾಗುತ್ತದೆ.

ಕೃಷ್ಣ ದ್ವಾರಕಿಯಲ್ಲಿದ್ದಾಗ ಒಂದು ದಿನ ನಾರದನ ಆಗಮನವಾಗುತ್ತದೆ. ಅರ್ಘ್ಯ ಪಾದ್ಯಾದಿಗಳನ್ನಿತ್ತ ಕೃಷ್ಣ, "ಎತ್ತಣಿಂದ ಬಂದಿರಿ? ಲೋಕವೃತ್ತಾಂತವೇನು?" ಎಂದು ಕೇಳುತ್ತಾನೆ.

ಆಗ—

ಧರೆಯ ಭಾರವ ಕಳೆಯಲೆನುತವ
ತರಿಸಿ ನರನಾಟಕದಿ ರಂಜಿಪ
ಪರಮ ಪುರುಷನೆ ಪದ್ಮನಾಭನೆ ವಿಶ್ವವಂದಿತನೆ ॥
ಅರಿಯದವನಂತೆನ್ನ ಕೇಳುವೆ
ಬರಿದೆ ನೀನ್ಯಾಕೆನುತ ಕೋಮಲ
ತರದ ನಿರುಪಮ ಪಾರಿಜಾತವನಿತ್ತನಾ ಮುನಿಪ ॥

ದೇವಮುನಿಯಿಂದ ಪಡೆದ ಪಾರಿಜಾತವನ್ನು ಕೃಷ್ಣ ರುಕ್ಮಿಣಿಗೆ ಮುಡಿಸುತ್ತಾನೆ. ದೂತಿಯೊಬ್ಬಳು ಸತ್ಯಭಾಮೆಗೆ ಈ ಸುದ್ದಿ ಮುಟ್ಟಿಸುತ್ತಾಳೆ. ಸತ್ಯಭಾಮೆಯಲ್ಲಿ ಸವತಿ ಮಾತ್ಸರ್ಯ ಬುಸುಗುಟ್ಟುತ್ತದೆ. ಕೃಷ್ಣ ಬರುವ ವೇಳೆಗೆ ಸಕಲಾಸ್ತ್ರಗಳನ್ನೂ ಸಿದ್ಧಪಡಿಸಿಕೊಳ್ಳುತ್ತಾಳೆ ಭಾಮೆ. ಉಡದೆ, ಉಣ್ಣದೆ, ಬರಿದೆ ಮಂಚದಲ್ಲಿ ಮಲಗಿದ್ದ ಪತ್ನಿಯನ್ನು ಸಂತೈಸಿ, ಅವಳ ಮುಳಿಸಿನ ಕಾರಣವ ತಿಳಿದ ಜಾಣ ಕೃಷ್ಣ—

ನಿನಗೆ ಸುಮವೊಂದಾನೀವುದಾವ ಚಂದ ಎನುತವಳಿಗಿತ್ತೆ ;
ನಿನಗೆ ವೃಕ್ಷವನೆ ತಂದೀವೆ — ಎನ್ನುತ್ತಾನೆ.

ಅಷ್ಟರಲ್ಲಿ ನರಕಾಸುರನ ಹಾವಳಿ ಹೆಚ್ಚಿ, ಅವನ ಉಪಟಳವನ್ನು ಇಲ್ಲಗೈಯಬೇಕೆಂದು ದೇವೇಂದ್ರ ಶ್ರೀ ವಿಷ್ಣುವಿನಲ್ಲಿ ಬಿನ್ನಹ ಮಾಡಿಕೊಂಡಿರುತ್ತಾನೆ. ಕಾಕತಾಳೀಯವಾಗಿ ಎರಡೂ ಕಾರ್ಯಗಳು ಒಮ್ಮೆಲೇ ಕೂಡಿದಂತಾಗಿ ಕೃಷ್ಣ ಗರುಡನ

ಬೆನ್ನೇರಿ ಭಾಮೆಯೊಡನೆ ಇಂದ್ರಲೋಕದತ್ತ ಧಾವಿಸುತ್ತಾನೆ. ಹಾದಿಯಲ್ಲಿ ಪ್ರಾಗ್ಜ್ಯೋತಿಷಪುರ ಗೋಚರಿಸುತ್ತದೆ. ಅಲ್ಲಿ ಒಳಹೊಕ್ಕು ಮುರ, ನರಕಾಸುರ ಮೊದಲಾದ ರಕ್ಕಸರನ್ನು ಸಂಹರಿಸಿ ಕಂಟಕನಿವಾರಣೆ ಮಾಡುತ್ತಾನೆ ಮುರಾರಿ.

ದೇವಲೋಕದಲ್ಲಿ ದೇವದಂಪತಿಗಳಿಗೆ ಅಭೂತಪೂರ್ವ ಸ್ವಾಗತವೇನೊ ಲಭಿಸುತ್ತದೆ. ಆದರೆ ಸತ್ಯಭಾಮೆ ಕೃಷ್ಣನ ಮಾತನ್ನೂ ಲೆಕ್ಕಿಸದೆ, ಅಲ್ಲಿದ್ದ ಪಾರಿಜಾತದ ವೃಕ್ಷವನ್ನು ಬೇರು ಸಹಿತ ಕಿತ್ತು ಗರುಡನ ಹೆಗಲಿಗೇರಿಸುತ್ತಾಳೆ. ಅದರ ಸಲುವಾಗಿ ಇಂದ್ರನೊಡನೆ ಯುದ್ಧ ನಡೆದು ಇಂದ್ರನ ಗರ್ವಭಂಗವಾಗುತ್ತದೆ; ಲೋಕಕಲ್ಯಾಣವಾಗುತ್ತದೆ.

ಇಂತಿಷ್ಟು ಕಥಾವಸ್ತುವನ್ನೆತ್ತಿಕೊಂಡು ರಸವತ್ಕೃತಿಯೊಂದನ್ನು ರಚಿಸಿದ್ದಾನೆ ಕೆಳದಿ ಸುಬ್ಬ. ಅವನ ಸಂಭಾಷಣಾ ಸ್ವಾರಸ್ಯವನ್ನು ನಾವಿಲ್ಲಿ ಸವಿಯಬಹುದು—

ರಾಗ : ಸೌರಾಷ್ಟ್ರ, ಏಕತಾಳ :

ಕೃಷ್ಣ : ವಾರಿಜಗಂಧಿನಿ ಕೀರಭಾಷಿಣಿ ಮುದ್ದು
ನೀರೆ ನೀ ಬಾಗಿಲ ತೆರೆಯೆ ॥

ಭಾಮೆ : ದ್ವಾರದಿ ದನಿಯನ್ನು ತೋರುವಾತನು ನೀನು
ಯಾರು ಪೈಳ್ಳೈ ನಿನ್ನ ಹೆಸರು ॥

ಕೃಷ್ಣ : ಪ್ರಾಣನಾಯಕಿ ನಾಗವೇಣಿ ಕೇಳೆಲೆ ನಾನು
ವೇಣುಗೋಪಾಲನು ಕಾಣೆ ॥

ಭಾಮೆ : –ವೇಣುಗೋಪಾಲ ನೀನಾದರೊಳ್ಳಿತು ನಿನ್ನ
ಠಾಣದಿ ಪಶುವ ಕಾಯಯ್ಯ ॥

ಕೃಷ್ಣ : ಕ್ರೂರ ಕಾಳಿಂಗನ ಪಡೆಯ ತುಳಿದು ಬಂದ
ಧೀರ ಕಾಣೆಲೆ ಚಾರುಗಾತ್ರೆ ॥

ಭಾಮೆ : ಧೀರ ನೀನಾದರೆ ಪಾವನಾಡಿಸಿಕೊಂಡು
ಗಾರುಡಿಗಾರ ಹೋಗಯ್ಯ ॥

ಕೃಷ್ಣ : ಬಲ್ಲಿದರೊಳು ಬಲವಂತರೆನಿಸುವ
ಮಲ್ಲರ ಗೆಲಿದವ ಕಾಣೆ ॥

ಭಾಮೆ : ಮಲ್ಲರ ಗೆಲಿದವನಾದರೆ ಗರುಡಿಗೆ
ನಿಲ್ಲದೆ ಪೋಗು ಪೋಗಯ್ಯ ॥

ಕೃಷ್ಣ : ಕಾದಿದ್ದ ಕರಡಿಯ ಗೆಲಿದು ಕಾಮಿನಿಯ ವಿ
ನೋದದಿ ತಂದವ ಕಾಣೆ ||

ಭಾಮೆ : ಆದರೊಳ್ಳಿತು ಘೋರಾರಣ್ಯದೊಳಿಪ್ಪಂತ
ವ್ಯಾಧರ ಕೂಡಿ ಬಾಳಯ್ಯ ||

ಕೃಷ್ಣ : ಕಾಂತೆ ಕೇಳಾದರೇಳು ವೃಷಭವ ಕಟ್ಟಿ ನೀಲ
ಕಾಂತೆಯ ತಂದವ ಕಾಣೆ ||

ಭಾಮೆ : ಅಂತಾದರೊಳ್ಳಿತು ಹೇರಾಟವನು ಮಾಡಿ
ಸಂತುಷ್ಟನಾಗು ಹೋಗಯ್ಯ

ಕೃಷ್ಣ : ಕಮಲಕೋರಕ ಸನ್ನಿಭಕುಚಯುಗೆ ನಿನ್ನ
ರಮಣ ಕಾಣೆಲೆ ಮಂದಯಾನೆ ||

ಭಾಮೆ : ರಮಣನೆಂಬುದ ಕೇಳಿ ಕದವ ತೆಗೆದು ಮತ್ತೆ
ರಮಣಿಯು ಮಲಗಿದಳಾಗ ||

ಕೆಳದಿ ಸುಬ್ಬನ ಪಾಂಡಿತ್ಯ ಪ್ರದರ್ಶನಕ್ಕೆ ಇದೊಂದು ನಿದರ್ಶನ—

ಚೂರ್ಣಿಕೆ :

ಹೇ ಬಾಲೇ – ಸರಸಗುಣಶೀಲೆ ಸಂಗೀತಲೋಲೆ | ರೋಲಂಬ ನಿಕುರುಂಬಡಂಬರವಿಡಂಬಕ ನೀಲಕುಂತಲೆ – ನಿರ್ಮಲೆ – ಅರ್ಧೇಂದು ಸನ್ನಿಭಫಾಲೆ – ಸಕಲಗುಣಾಲವಾಲೇ[1] ಶಂಬರಾಂತಕ ಶರಾಸನ ಭ್ರೂಲತೇ – ಸನ್ಮತಿಯುತೇ – ಕುವಲಯ ಪತ್ರನೇತ್ರೇ – ಕಮನೀಯಪಾತ್ರೆ –

ವಿಲಸತ್ ಚಂಪಕ ಸುಮನಾಸಿಕೆ – ಸೀಮಂತಿನೀಜನ ಸುಖಮೌಕ್ತಿಕೇ | ಪದ್ಮರಾಗರಾಗ ಪ್ರಭಾ ಪ್ರಚಯ ಪ್ರಕಾಶಿತ ಶಾತಕುಂಭ ತಾಟಂಕಾಲಂಕೃತ ಕರ್ಣಯುಗಳೇ – ನಿತ್ಯ ಮಂಗಲೇ – ಮುಕುರಕಪೋಲೆ – ವಿಭ್ರಮಜಾತಿ | ರಾಕೇಂದುನಿಭವದನೆ – ಕಮನೀಯ ಕುಂದರದನೇ – ಚಾರುತರ ಬಿಂಬಾಧರೆ–ಅತಿಮೃದುಳ ಬಾಹುಲತೇ– ಆನಂದಭರಿತೇ – ಲಲಿತಾರುಣ ಪದ್ಮರೇಖಾನ್ವಿತೇ | ಪಲ್ಲವಪಾಣಿ – ಶುಕವಾಣಿ – ಜಂಭಾರಿ ಕುಂಭೇಂದ್ರ ಕುಂಭ ಸನ್ನಿಭ ಕುಚಯುಗೇ – ಮನೋನುರಾಗೇ | ಕಾಂಚೀಧಾಮ ವಿರಾಜಿತ ಹರಿಮಧ್ಯೇ – ಕಾಮಾಗಮವೇದ್ಯೆ | – ಪೃಥುಳ ಶೈತ್ಯ ನಿತಂಬೆ–ಭೂರಂಭೆ – ರಂಭಾಸುಂಭೋರು ಯುಗಳೇ – ಕೋಮಲೇ – ಕಲಧೌತಕೇತಕಿ ಕುಟ್ಮಳ ಜಂಘಾದ್ವಯೇ – ಸದಯಹೃದಯೇ | ಝುಣಝುಣತ್ಕಾರ ಮಂಜೀರ ರಂಜಿತ ಚರಣ ಸರಸಿಜೇ ಪರಿಜನ ಸುರಕುಜೇ– ಕಲಹಂಸನಿಭಯಾನೆ – ಮಂದಕೋಕಿಲಗಾನೆ – ಶಾರದಾಂಬುಜ

ರುಚಿರ ಲೀಲೇ – ಮಯೂರ ನೃತ್ಯ ಲೀಲೇ – ಸರ್ವಾಲಂಕಾರ ಭೂಷಣ ಭೂಷಿತೇ – ಚೌಷಷ್ಟಿಕಲಾ ಶೋಭಿತೇ – ಸತ್ಯಭಾಮೆ ನಿನಗೆನ್ನೊಡನೆ ಮುನಿಸೇನೇ ಪ್ರಾಣಕಾಂತೆ ಮಾತನಾಡೇ ||

ಕೆಳದಿ ಸುಬ್ಬನ ಪ್ರಸಂಗಗಳೆರಡರಲ್ಲೂ ಭಕ್ತಿಯ ಭಾಗೀರಥಿ ನಿರರ್ಗಳವಾಗಿ ಹರಿದಿದ್ದಾಳೆ. ಅಲ್ಲಿನ ಪ್ರಮುಖ ರಸಗಳಾದ ಶೃಂಗಾರ, ಹಾಸ್ಯ, ಕರುಣ, ವೀರಗಳ ಜೊತೆ ಜೊತೆಯಲ್ಲೇ ಭಕ್ತಿರಸವು ಪ್ರವಹಿಸಿದೆ. ತನ್ನ ಅಧಿಷ್ಠಾತ್ರಿದೇವತೆ ಕೊಲ್ಲೂರು ಮುಕಾಂಬಿಕೆಯನ್ನು ಕುರಿತ ಅವನ ಭಕ್ತಿಗೀತೆಯೊಂದಿಗೆ ಮಂಗಳ ಹಾಡಬಹುದು.

ಮಂಗಳಂ ಜಯ ಮಂಗಳಂ || ಪಲ್ಲ ||

ಅಜಸುರ ಮನು ಮುನಿ ವಂದಿತೆಗೇ |
ತ್ರಿಜಗತ್ಪಾಲೆಗೆ ಪಾರ್ವತಿಗೇ ||
ನಿಜಪದ ಭಜಕ ವ್ರಜಪನು ರಕ್ಷಿಪ |
ಭುಜಗಾಭರಣೆಗೆ ಶಾಂಭವಿಗೇ || ಮಂ || ೧ ||

ಅಗಣಿತ ಮಹಿಮೆಗೆ ಸುರನುತೆಗೆ |
ಮೃಗಧರ ವಕ್ತ್ರೆಗೆ ಮಂಗಲೆಗೇ ||
ಖಗಭಾಸೆಗೆ ನಿಗಮಾಗಮವೇದ್ಯೆಗೆ |
ಸುಗುಣಿ ಸುಶೀಲೆಗೆ ಚಂಡಿಕೆಗೇ || ಮಂ || ೨ ||

ಶಂಖಸುದರ್ಶನ ಧಾರಿಣಿಗೇ |
ಪಂಕಜಪಾಣಿಗೆ ಪಾವನೆಗೇ ||
ಕಿಂಕರನಿವಹವ ಸಂತತ ಸಲಹುವ |
ಶಂಕರಿ ಶ್ರೀಮೂಕಾಂಬಿಕೆಗೇ || ಮಂ || ೩ ||

ಕೆಳದಿಯ ಕವಿಗಳು ಕೇವಲ ಶೈವರು ಇಲ್ಲವೇ ವೀರಶೈವರು. ಅಲ್ಲಿ ಹುಟ್ಟಿದ ಆಸ್ಥಾನ ಸಾಹಿತ್ಯ ಧರ್ಮಭೂಯಿಷ್ಠವಾದುದಾದರೂ ಶಿವಮಯವಾದುದಾದರೂ ಶೈವಕವಿಗಳ ಕೈಯಲ್ಲಿ ಅದ್ವೈತದರ್ಶನರೂಪಿಯಾಗಿಯೂ ವೀರಶೈವ ಕವಿಗಳ ಕೈಯಲ್ಲಿ ಶಕ್ತಿವಿಶಿಷ್ಟಾದ್ವೈತ ಅಥವಾ ಶಿವಾದ್ವೈತದರ್ಶನ ದ್ಯುತಿಯುತವಾಗಿಯೂ ಜನ್ಮ ತಳೆಯಿತು. ಆದರೆ ಶೈವ ಕವಿಗಳ ಮೇಲೆ ಹರಿದಾಸರ ಕೀರ್ತನ ಸಾಹಿತ್ಯ ಪ್ರಭಾವ ಬೀರಿದಂತೆ ಕ್ರಾಂತಿಯುಗದ ಶರಣ ಸಾಹಿತ್ಯ ವೀರಶೈವ ಕವಿಗಳ ಮೇಲೆ ಅಷ್ಟಾಗಿ ಪ್ರಭಾವ ಬೀರಲಿಲ್ಲ. ಕಾರಣ ಕೆಳದಿಯ ವೀರಶೈವ ಕವಿಗಳನ್ನು ನಿರ್ದೇಶಿಸಿದವರು ಕೆಳದಿ ರಾಜರ ರಾಜಗುರುಗಳು. ಈ ರಾಜಗುರುಗಳು ರೇಣುಕಾದಿ ಜಗದ್ಗುರು ಪಂಚಪೀಠಗಳಿಗೆ ಸೇರಿದವರಾದ್ದರಿಂದ, ಬಹುಮಂದಿ ಪಂಚಪೀಠಗಳಲ್ಲಿ ಒಂದಾದ ಉಜ್ಜಯಿನಿ ಸದ್ಧರ್ಮ ಸಿಂಹಾಸನಕ್ಕೆ ಸಂಬಂಧಿಸಿದವರಾದ್ದರಿಂದ ಅಲ್ಲಿ ಶರಣರ ಅನುಭಾವ ಸಾಹಿತ್ಯದ ಪ್ರಚುರತೆಗೆ ಬದಲು ಆಚಾರ್ಯರ ಸೈದ್ಧಾಂತಿಕ ಸಾಹಿತ್ಯ ಪ್ರಕಾಶಕ್ಕೆ ಬಂತು. ಬಸವಾದಿ ಪ್ರಮಥರ ವಚನಗಳಿಗೆ ಬದಲು, ಶಿವಯೋಗಿ ಶಿವಾಚಾರ್ಯನ ಸಿದ್ಧಾಂತಶಿಖಾಮಣಿ ಪ್ರಮಾಣ ಗ್ರಂಥವಾಯಿತು. ಅಂದಿನ ರಾಜಗುರುಗಳು ಮಹಂತು, ಮಹಾಮಹಂತುಗಳೆಂಬ ವೀರಶೈವ ಸಂಸ್ಕೃತಿ ಹಾಗೂ ವಿದ್ಯಾಕೇಂದ್ರಗಳೆನಿಸಿದ ಮಹಾಮಠಗಳನ್ನು ರಾಜ್ಯದಾದ್ಯಂತ ಸ್ಥಾಪಿಸಿ, ಕೇವಲ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತರೂಪಿ ಶಿಕ್ಷಣ ನೀಡುತ್ತಿದ್ದರು. ಅಂದಿನ ದಿನಗಳಲ್ಲಿ ಗುರು–ವಿರಕ್ತರೆಂಬ ಭೇದಭಾವನೆಗಳಿರಲಿಲ್ಲವಾದ್ದರಿಂದ ಮಹಾಮಹಂತುಗಳು ನೀಡಿದ ಶಿಕ್ಷಣವನ್ನೇ ಎಲ್ಲ ಶಿಷ್ಯರೂ ವಿದ್ಯಾರ್ಥಿಗಳೂ ರಾಜಕುಮಾರರೂ ಸ್ವೀಕರಿಸ ಬೇಕಾಗಿತ್ತು. ಅಂತಹ ವಿದ್ಯಾಕೇಂದ್ರಗಳಲ್ಲಿ ತಯಾರಾದ ವಿದ್ವನ್ಮಣಿಗಳು ಮುಂದೆ ಅರಸರಾಗಿ, ಆಸ್ಥಾನದಲ್ಲಿ ಮಂತ್ರಿಗಳಾಗಿ, ಮುತ್ಸದ್ದಿಗಳಾಗಿ ಸೇರಿ, ತಮ್ಮ ಅಧಿಕಾರಾ ವಧಿಯಲ್ಲಿ ಅಂತಹ ಸೈದ್ಧಾಂತಿಕ ಸಾಹಿತ್ಯಕ್ಕೇ ವಿಶೇಷ ಪ್ರೋತ್ಸಾಹ ನೀಡಿದರು. ಗದಗಿನ ಜಗದ್ಗುರು ಶ್ರೀ ತೋಂಟದಾರ್ಯಮಠದ ಸಂಪರ್ಕವಿದ್ದರೂ ಕೆಳದಿಯ ಆಸ್ಥಾನ ನಿತ್ಯನಿರ್ಮಲ ಪರಂಜ್ಯೋತಿ ಜಗದ್ಗುರು ಶ್ರೀಯಡೆಯೂರು ತೋಂಟದ ಸಿದ್ದಲಿಂಗೇಶ್ವರರ ವಚನ ರಚನೆಗಳನ್ನೂ ಸಹ ನೋಡಿದಂತೆ ಕಾಣುವುದಿಲ್ಲ. ಇದು ನಿಜಕ್ಕೂ ಶೋಚನೀಯ ಸಂಗತಿ ಹಾಗೂ ಕೆಳದಿಯ ಆಸ್ಥಾನ ಸಾಹಿತ್ಯದಲ್ಲಿರುವ ಕೊರತೆ. ಕೆಳದಿಯ ಆಸ್ಥಾನ ವಿಶೇಷವಾಗಿ ಬಳಸಿದ್ದು ಹಾಗೂ ಬೆಳೆಸಿದ್ದು ವೈದಿಕ ಮತ್ತು ವೇದಾಂತ ಪ್ರತಿಪಾದಕ ಸಾಹಿತ್ಯ. ಅದನ್ನಿಲ್ಲಿ ಅವಲೋಕಿಸೋಣ —

ವೇದಋಷಿಗಳ ಪ್ರತಿಭಾದೀಪ್ತಿ ಅನ್ಯಾದೃಶವಾದುದು. ಅನಂತರದ ಭಾರತೀಯ ಸಾಹಿತ್ಯದ ಮೇಲೆ ಅದರ ಪ್ರಭಾವ ಒಂದಲ್ಲ ಒಂದು ರೀತಿಯಲ್ಲಿ ಆಗಿರುವುದು ಸತ್ಯ.

ಆದರೆ ಸೂರ್ಯನಿಗೂ ಮತ್ತು ಅವನ ಬೆಳಕು ಶಾಖಗಳಿಗೂ ಇರುವ ಸಂಬಂಧವೇ ವೇದಗಳಿಗೂ ಮತ್ತು ಅನಂತರದ ಪ್ರಾಚೀನ ಭಾರತೀಯ ಸಾಹಿತ್ಯಕ್ಕೂ ಇದೆ. ಅಂದರೆ ಸೂರ್ಯನ ಬಳಿ ಶಾಖ ಹೆಚ್ಚು, ಬೆಳಕಿನ ವ್ಯಾಪ್ತಿ ಕಡಿಮೆ; ಭೂಮಿ ಮೊದಲಾದ ಗ್ರಹಗಳ ಬಳಿ ಸೂರ್ಯನ ಶಾಖ ಕಡಿಮೆ, ಬೆಳಕಿನ ವೈಶಾಲ್ಯ ಬಹಳ. ಹಾಗೆಯೇ ವೇದಗಳ ರಚನೆಯಲ್ಲಿ ಮೂಲತಃ ತೀವ್ರತೆ ಹೆಚ್ಚು, ದಾರಿ ಕಿರಿದು. ಇದನ್ನು ಹೆಚ್ಚಿಸಿ ಬೆಳಗಿಸಿದವುಗಳೆಂದರೆ ಬ್ರಾಹ್ಮಣ, ಆರಣ್ಯಕ, ಉಪನಿಷತ್, ಇತಿಹಾಸ, ಪುರಾಣ, ಕಾವ್ಯ ಇತ್ಯಾದಿಗಳು. "ಪರ್ವತಾಗ್ರದಿಂದ ಮೊರೆಯುತ್ತಾ ಪ್ರವಹಿಸುವ ನಿರ್ಝರ ಪ್ರವಾಹಗಳಂತೆ ಋಷಿಗಳ ವಾಣಿ ಇಲ್ಲಿ ಅಕ್ಷಯವಾಗಿ ಪ್ರವಹಿಸಿದೆ. ಉಪನಿಷತ್ತುಗಳಂತೂ ಶ್ರುತಿ ಶಿಖರಗಳಾಗಿ ಮಾನವ ಜೀವನದ ಗೊತ್ತುಗುರಿಗಳನ್ನು ತೋರಿಸುವ ಶಾಶ್ವತ ಜ್ಞಾನದೀಪಗಳಾಗಿವೆ...."[1]

ಇಂತಹ ಸನಾತನ ಸಾಹಿತ್ಯದ ಸಾರವನ್ನು ಹೀರಿ ಬೆಳೆದ ಶೀರ್ಷಸಾಹಿತ್ಯ ಕೆಳದಿಯ ಆಸ್ಥಾನ ಸಾಹಿತ್ಯ. ಅದರ ಹೆಜ್ಜೆಗಳನ್ನು ಇಲ್ಲಿ ಗುರುತಿಸಬಹುದು.

### ಅ) ವೈದಿಕ ಸಾಹಿತ್ಯ :

ವಿಶ್ವದ ಅತಿ ಪ್ರಾಚೀನವೂ ಪ್ರಬುದ್ಧವೂ ಆದ ವೈದಿಕ ಸಾಹಿತ್ಯಕ್ಕೂ ಪ್ರಾತಿನಿಧ್ಯ ದೊರೆತಿದೆ ಕೆಳದಿ ಆಸ್ಥಾನದಲ್ಲಿ. ಪ್ರಭುಸಮ್ಮಿತವಾದ ವೇದವು ಬೀಸುವ ಗಾಳಿಯಂತೆ, ಹರಿಯುವ ನೀರಿನಂತೆ, ಉರಿಯುವ ಜ್ಯೋತಿಯಂತೆ, ಯಾವ ಮೂಲೆಯಲ್ಲಿ ದರ್ಶಿಸಿದರೂ ದಾರ್ಶನಿಕರಿಗೆ ತನ್ನ ದ್ಯುತಿಯನ್ನು ಬೀರಿವೆ; ಪ್ರಭಾವವನ್ನು ಮೆರೆದಿದೆ. ಇಂತಹ ದರ್ಶನವನ್ನು ಪಡೆದ ಕೆಳದಿಯ ಚೆನ್ನವೀರಮಾಹೇಶ್ವರನು ತಾನು ಕಂಡ 'ಕಾಣ್ಕೆ'ಯನ್ನು ವೇದಾಂತರ್ಗತವಾದ ಪುರುಷ ಸೂಕ್ತಕ್ಕೆ ಟೀಕು ಬರೆಯುವ ಮೂಲಕ ಬಿತ್ತರಿಸಿದ್ದಾನೆ. ಪರವಸ್ತುವಾದ ಪುರುಷನನ್ನು ಚೆನ್ನವೀರ "ನಿರಂಜನ ಜಂಗಮ"ವೆಂದು ಸಂಬೋಧಿಸಿ ಅದಕ್ಕನುಗುಣವಾದ ವೀರಶೈವ ಭಾಷ್ಯ ರಚಿಸಿದ್ದಾನೆ. ವಿರಾಟಪುರುಷ ದರ್ಶನಕ್ಕೆ ಚೆನ್ನವೀರ ಮಾಹೇಶ್ವರನ ಟೀಕು ಒಂದು ಯೋಗ್ಯಮಾರ್ಗ ಅಥವಾ ಬೆಳಕಿಂಡಿ ಎಂದು ಹೇಳಬಹುದು.

ಇವನ ರುದ್ರಾಧ್ಯಾಯಕ್ಕೆ ಸಂಬಂಧಿಸಿದ 'ಶ್ರೀರುದ್ರ ಅಥವಾ ನಮಕ-ಚಮಕ'ವೂ ಸಹ ವೇದೋಕ್ತವೇ. ಅದು ಮಂತ್ರದ ಮಹತ್ವವನ್ನೂ ಅನುಷ್ಠಾನ ವಿಧಾನವನ್ನೂ ತಿಳಿಸುತ್ತದೆ. ಔಪಾಸನೆಯಲ್ಲಿ ಆನಂದವನ್ನೂ ಪುರುಷನಲ್ಲಿ ವಿರಾಟ ದರ್ಶನವನ್ನೂ ಪಡೆಯುವ ಭಾಗ್ಯ ಇದರಿಂದ ಒದಗಿದೆ.

---

[1] ಎನ್. ಎಸ್. ಅನಂತರಂಗಾಚಾರ್, ವೈದಿಕ ಸಾಹಿತ್ಯ—ಚರಿತ್ರೆ—ಪೀಠಿಕೆ.

ಆ) ಆಗಮಿಕ ಸಾಹಿತ್ಯ :

ಸಮಾನ ಪ್ರಮಾಣವುಳ್ಳ ವೇದ ಮತ್ತು ಆಗಮಗಳನ್ನು ಶ್ರುತಿಯೆಂದು ಕರೆಯುತ್ತಾರೆ. "ಅಥಾತೋ ಧರ್ಮಂ ವ್ಯಾಖ್ಯಾಸ್ಯಾಮಃ । ಶ್ರುತಿಪ್ರಮಾಣಕೋ ಧರ್ಮಃ । ಶ್ರುತಿಶ್ಚ ದ್ವಿವಿಧಾ ವೈದಿಕೀ ತಾಂತ್ರಿಕೀ ಚ ॥"—ಹಾರೀತನ ಹೇಳಿಕೆಯಂತೆ ಶ್ರುತಿಯು ವೈದಿಕವೆಂದೂ ತಾಂತ್ರಿಕವೆಂದೂ ಎರಡು ವಿಧ. ಮೊದಲನೆಯದು ವೇದವಾದರೆ ಎರಡನೆಯದು ಆಗಮ. ಶಿವಾಗಮಗಳು ಸಂಖ್ಯೆಯಲ್ಲಿ ಇಪ್ಪತ್ತೆಂಟು. ಇವುಗಳಲ್ಲಿ ಶಿವಭೇದವಾದವುಗಳು ಹತ್ತು; ರುದ್ರಭೇದವಾದವುಗಳು ಹದಿನೆಂಟು ಎಂಬುದಾಗಿ ಶಿವಜ್ಞಾನಿಗಳು ತಿಳಿಸಿದ್ದಾರೆ. ಇವುಗಳ ಬಗ್ಗೆ ತಿಳಿಯುವುದು ಸ್ವಲ್ಪ ಮಾತ್ರ.

"Hither to little is known about the Saiva" Agamas. There are 28 Agamas, which are said to have been proclaimed by Siva himself after the creation of the world, and each Agama has a number of Upagamas. As we know scarcely anything of the contents of those works, we are not in a position to determine their date."

ವಿಂಟರನಿಟ್ಸ್‌ರವರ ಅಂದಿನ ಈ ಹೇಳಿಕೆ[2] ಇಂದಿಗೂ ಸತ್ಯವಾಗಿದೆ.

ಭಾರತದಲ್ಲಿ ಶಿವಾಗಮಗಳು ಉಳಿದಿದ್ದರೆ ಆ ಗೌರವವು ಕಾಳಾಮುಖ ಯೋಗಿಗಳಿಗೆ ಸಲ್ಲುತ್ತದೆ. ಏಕೆಂದರೆ ವಿಶೇಷವಾಗಿ ಆಗಮಗಳನ್ನು ಅಧ್ಯಯನ ಮಾಡಿ ಆಗಮೋಕ್ತ ವಿಚಾರಗಳನ್ನು ಅನುಷ್ಠಾನಕ್ಕೆ ತಂದವರು ಅವರೇ. ಈ ಸಕಲಾಗಮಗಳಲ್ಲೂ ಕ್ರಿಯಾಪಾದ, ಚರ್ಯಾಪಾದ, ಯೋಗಪಾದ ಮತ್ತು ಜ್ಞಾನಪಾದಗಳೆಂದು ನಾಲ್ಕು ಪಾದಗಳಿವೆ. ಇವು ಎಷ್ಟೇ ಇರಲಿ, ಏನೇ ಇರಲಿ ಶಿವಾಗಮಗಳು ಕ್ರಿಯಾಶೀಲವಾದವುಗಳು; ಅನುಷ್ಠಾನ ಬೋಧಕಗಳು. ಈ ರೀತಿಯ ಆಗಮೋಕ್ತ ವಿಧಿವಿಧಾನಗಳು ನಿಷ್ಠೆಯಿಂದ ಆಚರಣೆಗೆ ಬಂದಿರುವುದು, ಅದರಲ್ಲೂ ಕನ್ನಡದಲ್ಲಿ ನಿರೂಪಿತವಾಗಿರುವುದು ಕಂಡು ಬರುತ್ತದೆ ಕೆಳದಿಯ ಆಸ್ಥಾನ ಸಾಹಿತ್ಯದಲ್ಲಿ. ಅಲ್ಲಿ ಪ್ರಕಾಶಗೊಂಡ ಧಾರ್ಮಿಕ ಸಾಹಿತ್ಯವೂ ಶೈವ, ವೀರಶೈವಪರವಾದುದು. ಕವಿ ಲಿಂಗಣ್ಣನ ಶಿವಪೂಜಾದರ್ಪಣದಲ್ಲೂ ತಿರುಮಲಭಟ್ಟನ ಶಿವಗೀತೆಯಲ್ಲೂ ಆಗಮೋಕ್ತ

---

[2]M. Winternitz: A History of Indian Literature, Vol. I. P. 588. Translated by Mrs. S. Kotkar, 1927.

ಶಿವಾರ್ಚನೆಯು ಬಿತ್ತರಗೊಂಡಿದೆ. ರುದ್ರಾಭಿಷೇಕ, ಪುರುಷಸೂಕ್ತಾಭಿಷೇಕ, ಶಿವ ಸೂಕ್ತಾಭಿಷೇಕ, ಬ್ರಹ್ಮಸೂಕ್ತಾಭಿಷೇಕ, ಪವಮಾನಾಭಿಷೇಕ, ಪ್ರಣವಾಭಿಷೇಕ, ಪಂಚಬ್ರಹ್ಮಾದ್ಯುರುತರ ಮಂತ್ರೋದಕಾಭಿಷೇಕ, ಪಂಚಾಕ್ಷರಿ ವಿರಚಿತಾಭಿಷೇಕ, ಮೊದಲಾದ ಅಭಿಷೇಕಾವಳಿಗಳಿಂದಲೂ ಸಕಲ ಸುಪುಷ್ಪ ಪತ್ರಗಳಿಂದಲೂ ನಾನಾವಿಧ ಧೂಪ, ದೀಪ, ನೈವೇದ್ಯಗಳಿಂದಲೂ ಶಿವಸಿದ್ಧಾಂತೋಕ್ತವಾದ ವೈಭವದ ಶಂಭುಪೂಜೆಯು ಕ್ರಮವರಿತು ಪಾಲನೆಗೊಂಡಿರುವುದು ಕಂಡು ಬರುತ್ತದೆ. ಬಸವಲಿಂಗನು ರಚಿಸಿದ ವೀರಮಾಹೇಶ್ವರಾಚಾರ ಸುಧಾವಾರ್ಧಿ ಟೀಕು ಹಾಗೂ ಸಂಗನಬಸವಪ್ಪನ ವೀರಶೈವ ಸುಧಾನಿಧಿ ಟೀಕು–ಇವುಗಳು ವೀರಶೈವ ಸಿದ್ಧಾಂತಗಳನ್ನು ಪ್ರತಿಪಾದಿಸುತ್ತವೆ. ಷಟ್ಸ್ಥಲ, ಅಷ್ಟಾವರಣ ವಿವರಣೆಯನ್ನೂ ಲಿಂಗಾಂಗಸಾಮರಸ್ಯದ ಅನುಭಾವವನ್ನೂ ಕುರಿತು ಸುಸ್ಪಷ್ಟ ವಿವೇಚನೆ ನಡೆದಿದೆ. ತಿರುಮಲಭಟ್ಟನ ಶಿವ ಗೀತೆಯು ವೈದಿಕ ಮತ್ತು ಆಗಮಿಕ ವಿಧಿ ವಿಧಾನಗಳನ್ನು ಅಳವಡಿಸಿಕೊಂಡಿದೆ.

## ಇ) ವೇದಾಂತ ಪ್ರತಿಪಾದಕ ಕೃತಿಗಳು :

(ಪೌರಾಣಿಕ ಸಾಹಿತ್ಯ : ನೀತಿಸಾಹಿತ್ಯ ಮತ್ತು ಶತಕ ಸಾಹಿತ್ಯ:)

ನಮ್ಮ ಭಾರತೀಯ ಸಾಹಿತ್ಯವು ವೇದಗಳಲ್ಲಿ ಪ್ರಾರ್ಥನಾರೂಪಿಯಾಗಿ, ಉಪನಿಷದಾದಿ ವೇದಾಂತಗಳಲ್ಲಿ ಆತ್ಮಾನ್ವೇಷಣೆಗೆ ತೊಡಗಿ, ಪುರಾಣಗಳಲ್ಲಿ ತತ್ತ್ವೋಪದೇಶಕ್ಕಿಳಿಯುತ್ತದೆ. ನಮ್ಮ ಪ್ರಾಚೀನ ಪುರಾಣಗಳು ಮಾನವ ಪೂರ್ವಾವತಾರದ ಕಥಾಪ್ರತಿಮೆಗಳು. ಇವು ಚರಿತ್ರೆ ಸತ್ಯಗಳಲ್ಲ. ಮಾನವನು ಅತೀತ ವಿಚಾರಗಳನ್ನು ಕುರಿತು ಚಿಂತನೆ ನಡೆಸಿ, ಅನಂತರ ತನ್ನ ಊಹೆ, ಕಲ್ಪನೆಗಳಿಂದ ರಚಿಸಿದ ಗಾಳಿಗೋಪುರಗಳು. ಇವು ವ್ಯಾಸಪ್ರಣೀತವೆಂದು ಹೇಳಿದರೂ ಏಕಕವಿ ಕೃತವಾದುವಲ್ಲ. ಅನೇಕರು ಕಟ್ಟಿದ ಕನಸಿನ ಕಟ್ಟಡಗಳು ಅಥವಾ ಕಥೆಗಳ ಗೊಂಚಲು. ಅವುಗಳ ಸತ್ಯಾಸತ್ಯಗಳ ನಿರ್ಣಯಕ್ಕೆ ತರ್ಕ ಮೂಕವಾಗುತ್ತದೆ. ಇಲ್ಲಿ ತೇಲಿ ಬರುವ 'ದರ್ಶನ'ವೇ ನಿಖರವಾದ ಬೆಲೆ. ಒಟ್ಟಿನಲ್ಲಿ, ಪುರಾಣಗಳು ನಮ್ಮ ಸಂಸ್ಕೃತಿಯ ನಿಕ್ಷೇಪಗಳು. ಪುರಾಣ ಕಥೆಗಳು ವಾಸ್ತವಿಕ ಘಟನೆಗಳಲ್ಲದಿದ್ದರೂ ಅವುಗಳಲ್ಲಿನ ತತ್ತ್ವನಿವೇದನೆಯು ಸಾರ್ವಕಾಲಿಕ ಸತ್ಯವಾಗಿರುತ್ತದೆ. ಕೆಳದಿಯ ಆಸ್ಥಾನದಲ್ಲಿ ಸರ್ವಶ್ರೇಷ್ಠವಾದ ಪುರಾಣಗಳು ಸರಳ ಸುಂದರಕಾವ್ಯರೂಪಿಗಳಾಗಿ ಕನ್ನಡದ ಕಣಜಗಳಲ್ಲಿ ಮಿನುಗುತ್ತಿದೆ. ತಿರುಮಲಭಟ್ಟನ ಶಿವಗೀತೆಯಲ್ಲಿ ಕಥೆಯಿಲ್ಲ. ಆದರೂ ಅದು ಭಗವದ್ಗೀತೆಯಂತೆ ತತ್ತ್ವೋಪದೇಶವನ್ನೇ ಪ್ರಧಾನವಾಗುಳ್ಳ ಕೃತಿ. ಮೋಹಜ್ವರ ಪೀಡಿತನಾದ ಅರ್ಜುನನಿಗೆ ಶ್ರೀ ಕೃಷ್ಣ ಪರಮಾತ್ಮನು ಉಪದೇಶ ನೀಡಿ ಅವನನ್ನು ಕ್ರಿಯಾಶೀಲನನ್ನಾಗಿಸಿದಂತೆ, ಇಲ್ಲಿ ಪತ್ನೀವಿರಹದಿಂದ ದಿಙ್ಮೂಢನಾದ

ಶ್ರೀ ರಾಮಚಂದ್ರನಿಗೆ ಪರಶಿವನ ಅನುಗ್ರಹ, ಆಶೀರ್ವಾದ, ಹಿತೋಪದೇಶಗಳಿಂದ ಕೃತಕೃತ್ಯತೆಯು ಲಭಿಸುತ್ತದೆ. ಗೀತೆಗಳಿರುವುದು ಅರ್ಜುನ, ರಾಮರಿಗಲ್ಲ; ವಿಶ್ವ ಮಾನವವರ್ಗಕ್ಕೆ. ಪಾಶುಪತವ್ರತಾನುಷ್ಠಾನ ಶಿವೋಪಾಸನಾ ವಿಧಾನವೇ ಮೊದಲಾದ ಶಿವರಾಜಯೋಗ ಲಕ್ಷಣಗಳನ್ನರಿತು ಮುಕ್ತಿಯ ಮಹಾಫಲವನ್ನು ಪಡೆಯುವುದೇ ಶಿವಗೀತೆಯ ಸಂದೇಶ. ಶಿವಪಾರಮ್ಯವು ಭವ್ಯವಾಗಿ ಚಿತ್ರಿತವಾಗಿದೆ ಇದರಲ್ಲಿ.

ಇದೇ ಕಥನರೂಪದ ಲಿಂಗಣ್ಣ ಕವಿಯ ದಕ್ಷಾಧ್ವರ ವಿಜಯ, ಪಾರ್ವತೀ ಪರಿಣಯ ಮತ್ತು ಶಿವಕಲ್ಯಾಣಗಳಲ್ಲಿ ಭಕ್ತಿಯ ಪರಾಕಾಷ್ಠತೆಯನ್ನೂ, ಶಿವಪಾರಮ್ಯವನ್ನೂ ಅರಿಯಬಹುದು. ಪುರಾಣದ ಒಂದೇ ವಸ್ತು ಇಲ್ಲಿ ಮೂರು ಕಾವ್ಯಗಳ ರೂಪು ತಳೆದಿದೆ. ಅನೇಕ ಪುರಾಣಗಳಿಗೂ ಕಾವ್ಯಗಳಿಗೂ, ನಾಟಕಗಳಿಗೂ ವಸ್ತುವಾಗಿ ಇಂದಿಗೂ ಅಚ್ಚಳಿಯದೆ ನಿತ್ಯನೂತನ ಚೆಲುವಿಕೆಯಲ್ಲಿ ಮೆರೆಯುತ್ತಿರುವ ಜಗನ್ಮಾತಾಪಿತೃಗಳಾದ ಶಿವಶಿವೆಯರ ಪ್ರೇಮ ದಾಂಪತ್ಯದ ಭವ್ಯಚಿತ್ರಣವು ಮೂರು ಕಾವ್ಯಗಳಲ್ಲಿ ಬಿತ್ತರ ಗೊಂಡಿದೆ. ಪುರಾಣದ ವಸ್ತು ಇಲ್ಲಿ ಕಾವ್ಯವಾಗಿ, ಕಲಾತ್ಮಕ ರಚನೆಯಾಗಿ ಕನ್ನಡಕ್ಕೆ ಕೊಡುಗೆಯಾಗಿ ಬೆಳಗಿದೆ.

ಲಿಂಗಣ್ಣನ ಕೃತಿಗಳಲ್ಲಿ ಶಿವನ ಸಾಕ್ಷಾತ್ಕಾರವಾದಂತೆ, ಅವನ ಮಗ ವೆಂಕನ ಕಾವ್ಯಗಳಲ್ಲಿ ನರಹರಿಯ ಅವತಾರವಾಗಿದೆ. ಕಾವ್ಯ ಚಿಕ್ಕದಾಗಿದ್ದರೂ ಸಹೃದಯ ಹೃದಯದ ಮೇಲೆ ಪ್ರಭಾವ ಬೀರುವಷ್ಟು ಶಕ್ತಿಯುತವಾಗಿದೆ. ಇದೇ ಪುರಾಣ ಕಾವ್ಯಗಳ ವರ್ಗದಲ್ಲಿ ಸೇರುವ ಮತ್ತೊಂದು ನೀತಿಕಾವ್ಯ ಶುಕಸಪ್ತತಿ. ಶರಜಾ ನಾಗಮಂತ್ರಿಯು ಕ್ಷುದ್ರ ಕಾಮಕ್ಕೆ ಭ್ರಮಿತನಾಗದೆ ಲೋಕಹಿತ ಸಾಧಕವಾದ ಮಹತ್ಕಾರ್ಯವನ್ನು ಸಾಧಿಸಿಕೊಟ್ಟಿದ್ದಾನೆ. ತನ್ನ 'ರಾಜನೀತಿ ಶುಕಸಪ್ತತಿ'ಯಲ್ಲಿ. ಬಣ್ಣನೆಯ ಬೆಲ್ಲ ಅಧರಕ್ಕೂ ತತ್ತ್ವದ ಬೇವು ಉದರಕ್ಕೂ ವಿಲಾಸಲಾಗಿದೆ ಇಲ್ಲಿ. ಈ ಕೃತಿಯು ನೀತಿಯನ್ನು ನಿವೇದಿಸಿದರೆ, ವೆಂಕ ಕವಿಯ 'ಪಾರ್ವತೀವಲ್ಲಭಶತಕ' ವು ಶಿವದ ಸಾಕ್ಷಾತ್ಕಾರ ಮಾಡಿಸುತ್ತದೆ. ಇಹಪರಗಳ ಸಾಧನೆ ಸಿದ್ಧಿಗಳಿಗೆ ಈ ಕೃತಿಗಳು ಪೂರ್ಣ ಸಹಕಾರಿಗಳಾಗಿವೆ.

ಈ ಪುರಾಣ ಕಥೆಗಳು ಮನೋಹರವಾದ ಕಾವ್ಯನಂದನಗಳು. ವಿಹರಿಸುವ ರಸಿಕನಿಗೆ ಅಲ್ಲಿ ಜೇನಿದೆ, ಜ್ಯೋತ್ಸ್ನೆಯಿದೆ. ಅಂತೆಯೇ ಬಯಸಿ ಬಂದವನು ಭಕ್ತಿಯ ಭಾಗೀರಥಿಯಲ್ಲಿ ರಸಯಾನ ಕೈಗೊಳ್ಳುವುದಕ್ಕೂ ಅವಕಾಶವಿದೆ.

**ಈ) ಗೇಯ ಗೀತೆಗಳು :**

ಪುರಂದರಾದಿ ಪುಣ್ಯಪುರುಷರ ಸತತ ಸಾಧನೆಯಿಂದ ಕರ್ನಾಟಕ ಸಂಗೀತವೆಂಬ ಸತ್ಫಲವನ್ನು ಪಡೆದ ನಮ್ಮ ನಾಡು ಆ ಗೇಯಮಾರ್ಗವನ್ನು ಉಳಿಸಿ ಬೆಳಸಿಕೊಂಡು

ಬಂದಿತು. ಕೆಳದಿಯೂ ಆ ಕೀರ್ತಿಗೆ ಭಾಗಿಯಾಗಿದೆ. ಅಪ್ಪಯ್ಯನು ಕೊಲ್ಲೂರ ಮೂಕಾಂಬಿಕೆಯನ್ನು ಕುರಿತು ಹಲವು ಸುಂದರವಾದ ಕನ್ನಡದ ಹಾಡುಗಳನ್ನು ಕಟ್ಟಿ ಭಕ್ತಿಯಿಂದ ಹಾಡಿದ್ದಾನೆ. ಅಂತೆಯೇ ವೆಂಕಕವಿಯೂ ಸಹ ಕೆಳದಿ ರಾಮೇಶ್ವರನನ್ನು ಭಕ್ತಿ ಭಾವ ಭರಿತನಾಗಿ ಭಜಿಸಿದ್ದಾನೆ.

ಶಿವಮಂತ್ರವ ಜಪಿಸೋ ! ಮೂಢ !
ಶಿವಮಂತ್ರವ ಜಪಿಸೋ
ಶಿವನೇ ನೀನಾಗುವೆಯೆಂದು ನಂಬುತ ॥ ಪಲ್ಲ ॥

ಸ್ನಾನ ಬೇಡ ಸಂಧ್ಯಾಕರ್ಮವು ಬೇಡ
ಧ್ಯಾನ ಬೇಡ ಧಾರಣೆ ಬೇಡ
ಮೌನ ಬೇಡ ಮಣಿಮಾಲಿಕೆ ಬೇಡ
ಧ್ಯಾನ ಬೇಡ ಪಶುವಧೆಗಳು ಬೇಡ ॥

ದೇಶಕಾಲ ಪಾತ್ರವ ನೋಡಬೇಡ
ಕಾಷಾಯಾಂಬರ ಧಾರಣೆ ಬೇಡ
ಭಾಸುರ ಜಡೆಯನು ಬೆಳೆಸಲು ಬೇಡ
ಈ ಶರೀರವನೇ ದಂಡಿಸಬೇಡ ॥

ಕಾಲನ ದೂತರು ಯಳೆಯದ ಮುಂನ
ನಾಲಿಗೆ ತಂನಾಧೀನವಾಗಿರುವಾಗ
ಏಳು ಕೋಟಿ ಮಂತ್ರಕೆ ಮಣಿಯಾದ ವಿ
ಶಾಲ ಕೆಳದಿ ರಾಮೇಶ್ವರನೇ ಗತಿಯಂದು ॥ ( ಪದ್ಯ 7 )

ಇದಲ್ಲದೆ ಕವಿ ಲಿಂಗಣ್ಣನ ದಕ್ಷಾಧ್ವರವಿಜಯದಲ್ಲಿ ವೈಭವೋಪೇತವಾದ ಶಿವನ ಒಡ್ಡೋಲಗಕ್ಕೆ ಆಗಮಿಸಿದ ನಾರದ ಭೃಂಗೀಶ್ವರರು —

" ವೀಣೆವಿಡಿದು ಪ್ರವಾಳ ತುಂಬಿ ಪದಮುಖ ಶಿಖೆಗಳನಾರೈದು ತಂತ್ರಿಗಳಂ ತೀಡಿ ಸರಿಗಮಪಧನಿಗಳೆಂಬ ಸಪ್ತಸ್ವರಂಗಳಂ ಕಳೆಯೇರಿಸಿ ಪರುಠವಿಸಿ ಸ್ವಸ್ಥಾನಂ ಬೊಂದಿಸಿ ಕಾಕಳಿಯೊಳ್ನಿರಿಸಿ ತ್ರಿಸ್ಥಾನ ಸಂಶುದ್ಧಿಯಂ ರಚಿಸಿ, ಜನ್ಯಜನಕ ಸ್ಥಾನಂಗಳ ಪರಿವಿಡಿದಪ್ಪದೆ, ಧಾತುರೀತಿ ಜಾತ್ಯಲಂಕಾರ ಭಾವರಸಂಗಳ್ ಹೃದ್ಯಮಾಗೆ, ಭಣಿತೆ, ಬಜಾವಣೆ, ಬೆಡಂಗು, ಬಿಂನಾಣ, ಗಮಕ, ಪಂಜ ರಾಯಿತ, ಘನ, ರಕ್ತಿ, ರಂಗು, ನಯ, ಸರಳ, ವಿರಳ, ಆವರ್ತ, ವಲಯ,

ವ್ಯಾಪ್ತಿ, ಧಾಟಿ, ಮೀಟುಜಾತಿ ಮುಂತಾದ ಕೈವಾಡಂಗಳೊಡಂಬಡರಿಂಪು ಸೊಂಪಂ ಬೀರೆ, ನಾನಾವಿಧ ವಿಚಿತ್ರತರ ರಚನಾಪ್ರೌಢಿಗಳಂ ತೋರುತ್ತಂ ಷಡ್ಜಗ್ರಾಮದೊಳ್, ತಾರಮಂದ್ರಾದಿ ಸಪ್ತ ಮೂರ್ಛನೆಗಳುಮಂ, ಮಧ್ಯಮಗ್ರಾಮದೊಳ್ ಸಂವೀರ ಕಳೋಪನತಾದಿ ಸಪ್ತ ಮೂರ್ಛನೆಗಳುಮಂ, ಕಿವಿಗೊಳಿಸಿ, ಛಾದ ಷೌಡವ ಸಂಪೂರ್ಣ ರಾಗಂಗಳನು ಕ್ರಮದಿಂ, ಸ್ಥಾಯಿ ಗಮಕಾರೋಹಣಾವಣ ಹಣಕ್ರಮಂ ಕೈ ಮಿರದೆ, ಚತುರ್ವಿಧ ವರ್ಣಂಗಳಂ ನಿರ್ಣೈಸಿ, ಪ್ರಸಂನಾದಿ ಪ್ರಸಂನಾನತ ಪ್ರಸಂನ ಮಧ್ಯಾದಿ, ಷಟ್ತ್ರಿಂಶದಲಾಕಾರಂಗಳಂ ವಿಭಾಗಿಸಿ, ಮತ್ತಂ, ಶುದ್ಧರೀತಿಯೊಳ್ ಶುದ್ಧ ಷಡ್ಜ ತಾರಕಾದಿ ಸಪ್ತರಾಗಂಗಳುಮಂ, ಗೌಡರೀತಿಯೊಳ್ ಗೌಡ ಪಂಚಮಾದಿ ರಾಗತ್ರಯಂಗಳುಮಂ, ವೈದರ್ಭರೀತಿಯೊಳ್, ಭೈರವ ಹಿಂದೋಳಾದ್ಯಷ್ಟ ರಾಗಂಗಳುಮಂ ಸಾಧಾರಣ ರೀತಿಯೊಳ್, ದೇವ ಗುಪ್ತಿನಕ್ತರಾಗಾದಿ ಸಪ್ತರಾಗಂಗಳುಮಂ, ಪಾಂಚಾಲ ರೀತಿಯೊಳ್ ||..................ರಾಗಂಗಳುಮನಿಂತು ರೀತಿ ಪಂಚಕಂಗಳಂ, ಪವಣಾಗಿ ಪಸುಗೆಗೊಳಿಸಿ, ಮತ್ತಂ ಯಕ್ಕರಾಗದೊಳ್ ಮಾಳವ ಲಲಿತಾದಿ ದ್ವಾದಶ ರಾಗಂಗಳುಮಂ, ಪಂಚಮದೊಳ್ ಬಂಗಾಳಿ ಸೈಂಧವಿ ಮೊದಲಾದಷ್ಟ ರಾಗಂಗಳುಮಂ, ಹಿಂದೋಳದೊಳ್ ಮಾಳವಕೇಸರಿ ಕಾಂಬೋಜ ಮುಂತಾದ ನಾಲ್ಕು ರಾಗಂಗಳುಮಂ, ಮಾಳವ ಕೌಶಿಕದೊಳ್ ಮಾಳವಕೇಸರಿ ಸೈಂಧವಿ ಮೊದಲಾದಾರು ರಾಗಂಗಳುಮಂ, ಬಿಂನಷಡ್ಜದೊಳೆ, ಬಂಗಾಳಿ ಶ್ರೀ ಕಂಠಿ ಮೊದಲಾದೇಳು ರಾಗಂಗಳುಮಂ, ಕಕುಭದೊಳ್, ಬಿಂನ ಪಂಚಮಿ ಮುಖ್ಯಮಾದ ತ್ರಿರಾಗಂಗಳುಮನಿಂತು ನಾಲ್ವತ್ತುರಾಗಂಗಳುಮಂ, ಪ್ರಕಟೀಕರಿಸಿ, ಮತ್ತಂ ಮಂಗಲಕೌಶಿಕೆ, ಶಂಕರಾಭರಣ, ಕಲ್ಯಾಣಿ, ಮಧು, ಮಾಧವಿ, ಸಾರಂಗ, ಮುಂತಾದ ರಾಗಂಗಳಂ ಕೇಳುವೆಗೊಳಿಸಿ, ಬಳಿಕಂ ಸ್ತುತಿರೂಪದಿಂ ಪಾಡುತ್ತಿದ್ದನದೆಂತೆನೆ"[3]— ಹೀಗೆ ರಾಗರಾಗಿಣಿಯರನ್ನು ಒಲಿಸಿಕೊಂಡ ಜಾಣರು ಕೆಳದಿಯುವರು.

**ಉ) ಶಾಸನ ಸಾಹಿತ್ಯ :**

ಕನ್ನಡ ನಾಡಿನ ರಾಜರುಗಳು ಕೊಡುಗೈದಾನಿಗಳು. ಅವರು ದಾನದಷ್ಟೇ ದಕ್ಷರು ; ದಯಾಳುಗಳು. ಈ ಅಂಶಗಳನ್ನೊಳಗೊಂಡ ಸಹಸ್ರಾರು ಶಾಸನಗಳು ಸಾಕ್ಷಿಯಾಗಿ ನಿಂತಿವೆ. ಉತ್ತಮ ಸಾಹಿತ್ಯಾಂಶಗಳನ್ನೊಳಗೊಂಡ ಹಲವಾರು ಶಾಸನಗಳು ಇಂದಿಗೂ ಕಲಾಪ್ರತಿಮೆಗಳಾಗಿ ಉಳಿದಿವೆ. ಆದರೆ ದೌರ್ಭಾಗ್ಯವಶಾತ್ ಕೆಳದಿಯ ಶಾಸನಗಳಲ್ಲಿ ಹೆಚ್ಚು ಸಾಹಿತ್ಯಾಂಶಗಳು ಸಿಗುವುದಿಲ್ಲ. ಕೆಳದಿಯುವರು ದಯೆಯಲ್ಲಿ, ದಾನದಲ್ಲಿ, ತಪದಲ್ಲಿ, ಶೀಲದಲ್ಲಿ, ಪರಾಕ್ರಮದಲ್ಲಿ, ಎಲ್ಲದರಲ್ಲೂ ಅದ್ವಿತೀ

---

[3] ದಕ್ಷಾಧ್ವರ ವಿಜಯ, ದ್ವಿತೀಯೋಲ್ಲಾಸ, ವಚನ 97.

ಯರು. ಅಲ್ಲಿನ ರಾಜ ರಾಣಿಯರ ನೂರಾರು ಶಾಸನಗಳು ಇತಿಹಾಸವನ್ನು ಹೇಳು ತ್ತವೆ. ಆದರೆ ತೀರ್ಥಹಳ್ಳಿಯ ಒಂದು ಶಾಸನದ[4] ಹೊರತು ಮಿಕ್ಕೆಲ್ಲವೂ ಬರೀ ಹೊನ್ನು, ವರ, ಗದ್ದೆ ಎತ್ತುಗಳ ಲೆಕ್ಕದ ಕಡತಗಳಾಗಿವೆ. ಕ್ರಿ. ಶ. ೧೫೩೦ರಲ್ಲಿ ಹಿರಿಯ ವೆಂಕಟಪ್ಪನು ಮೇಳಿಗೆ ಜೈನ ಚೈತ್ರಾಲಯಕ್ಕೆ ಹಾಕಿಕೊಟ್ಟ ಈ ದಾನಶಾಸನದ ಪೂರ್ವಾರ್ಧದಲ್ಲಿ ಹಿರಿಯ ವೆಂಕಟಪ್ಪನಾಯಕನ ಗುಣಕಥನವೂ, ಉತ್ತರಾರ್ಧದಲ್ಲಿ ಮೇಳಿಗೆ ಬೊಂಮಣನ ಗುಣಕಥನವೂ ಬಿತ್ತರಗೊಂಡಿದೆ. ಇದೊಂದು ಶಾಸನ ಮಾತ್ರ ತುಂಬಾ ಕಾವ್ಯಮಯವಾಗಿದೆ. ಇದಿಷ್ಟಾದರೂ ದೊರೆತು ಕೆಳದಿಯಲ್ಲಿ ಶಾಸನ ಸಾಹಿತ್ಯವೂ ಇದೆ ಎನ್ನಿಸಿದೆ.

### ಊ) ನಾಟಕ ಸಾಹಿತ್ಯ :

ಪ್ರಪಂಚದ ಯಾವುದೇ ಭಾಷೆಯದಾಗಿರಲಿ ನಾಟಕ ಎಂದರೆ ಸಾಕು, ಅದರ ಮೂಲವನ್ನು ನಾವು ಜಾನಪದ ಜೀವನದಲ್ಲೇ ಹುಡುಕಬೇಕಾಗುತ್ತದೆ. ಅದು ಹುಟ್ಟಿದ್ದು ಜನಪದದಲ್ಲಿ, ಬೆಳೆದು ಬಾಳಿದ್ದೂ ಜನಪದದಲ್ಲಿಯೇ. ಆದರೆ ಆಗಾಗ ಅಲ್ಲಲ್ಲಿ ಅದಕ್ಕೆ ರಾಜಾಶ್ರಯವೂ ಸಿಕ್ಕಿ ತನ್ನ ಶ್ರೀಮಂತಿಕೆಯನ್ನು ಹೆಚ್ಚಿಸಿಕೊಂಡಿದೆ. ಕೇರಳದ ಕೊಟ್ಟಾರಕರ ಮಹಾರಾಜನು ಈ ಜಾನಪದ ಕಲೆಗೆ ಮೊದಲು ಆಸ್ಥಾನದ ಪರಿಚಯ ಮಾಡಿಕೊಟ್ಟನೆಂದು ತಿಳಿಯುತ್ತದೆ. ಈತನು ಸ್ವಯಂ ಕಥಕ್ಕಳಿ ಕೃತಿ ಕರ್ತೃವಾಗಿ ಅನೇಕ ನಾಟಕಗಳನ್ನು ರಚಿಸಿದ್ದಾನೆ. ಆದರೆ ಕಾರಂತರು ಸುಬ್ಬನ ಪುತ್ರಕಾಮೇಷ್ಟಿ ಪ್ರಸಂಗ ಕಾಲ ಕ್ರಿ. ಶ. ೧೬೫೧ ಎಂದು ಹೇಳಿ, "ಆ ಕಾಲದಲ್ಲಿ ಕೊಟ್ಟಾರಕರ ದೊರೆಯೇ ಇದ್ದಿರಲಾರ" ಎಂದಿದ್ದಾರೆ.[5] ಆದರೆ ಕೊಟ್ಟಾರಕರ ಆ ವೇಳೆಯಲ್ಲಿದ್ದನೆಂದು ತಿಳಿಯಲು ಸಾಕಷ್ಟು ಮಾಹಿತಿ ಇದೆ.[6] ರಾಮನಾಟಂರಾಜ ಅಥವಾ ವೀರಕೇರಳವರ್ಮ (ಕ್ರಿ. ಶ. ೧೬೧೦-೬೨) ನ ಅಳಿಯ. "ವಂಚಿಕ್ಷ್ಮಾವರ ಬಾಲ ಕೇರಳ ವಿಭು"[7] ಎಂದು ಖ್ಯಾತನಾದ ಕೊಟ್ಟಾರಕರ ಮಹಾರಾಜನ ಕಾಲ ಕ್ರಿ. ಶ. ೧೬೫೦ ಅಲ್ಲದೆ ಪಾರ್ತಿಸುಬ್ಬನು ಕೊಟ್ಟಾರಕರನ ಮೂಲ ಕಥಕ್ಕಳಿ ರಾಮಾಯಣದಿಂದ ಹೀಗೆ ನೇರ ವಾಗಿ ವಸ್ತುವನ್ನೂ ರಚನೆಯನ್ನೂ ಆಯ್ದುಕೊಂಡಿದ್ದಾನೆಂಬುದನ್ನು ಯಕ್ಷಗಾನ

---

[4]E. C. VIII, TI, 166.

[5]ಯಕ್ಷಗಾನ ಬಯಲಾಟ, ಪು. 419.

[6]P. Krishnan Nayar, Attakatha, a critical study, P.70-72 (O. R. I. Madras)

[7]"ವಂಚಿಕ್ಷ್ಮಾವರವೀರ ಕೇರಳವಿಭೋಃರಾಜ್ಞಃ ಸ್ವಸೋಃ ಸೂನುನಾ" ಎಂದು ಕೊಟ್ಟಾರಕರ ಮಹಾರಾಜನು ರಾಮನಾಟಕ ಆರಂಭದಲ್ಲಿ ಸ್ವವಿಷಯವಾಗಿ ಹೇಳಿಕೊಂಡ ಪದ್ಯ ವಿದೆ. ಕೊಟ್ಟಾರಕರ ರಾಜ್ಯಕ್ಕೆ "ವಂಚಿಕ್ಷ್ಮಾ" "ವಂಚಿಧರಾ" (ವಂಚಿದೇಶ) ಎಂಬುದು ಚರಿತ್ರ ಪ್ರಸಿದ್ಧವಾದ ಹೆಸರು.

ಕಲೆಯಲ್ಲಿ ಪೂರ್ಣ ತಜ್ಞರೂ ಬಹು ಭಾಷಾ ವಿಶಾರದರೂ ಆದ ಶ್ರೀ ಕುಕ್ಕಿಲ ಕೃಷ್ಣ ಭಟ್ಟರು ತೋರಿಸಿಕೊಟ್ಟಿದ್ದಾರೆ.[8] ಆದ್ದರಿಂದ ಕೇರಳವಿಭು ಕೊಟ್ಟಾರಕರ ಮಹಾ ರಾಜನು ಈ ಕಲೆಗೆ ಸಾಕಷ್ಟು ಬೆಲೆಕೊಟ್ಟು ಮನ್ನಿಸಿದ್ದಾನೆಂಬುದು ಸ್ಪಷ್ಟವಾಗುತ್ತದೆ.

ಅದೇ ರೀತಿ ಈ ಕಲೆಗೆ ಆಶ್ರಯವಿತ್ತ ಭಾಗ್ಯ ಕೆಳದಿ ಆಸ್ಥಾನದ್ದಾಗಿದೆ.

ಯಕ್ಷಗಾನಕಲೆ ಕೇರಳದಿಂದ ವಲಸೆ ಬಂದಿರಲಿ ಅಥವಾ ಕನ್ನಡನಾಡಿನಲ್ಲೇ ಜನ್ಮ ತಳೆದಿರಲಿ, ಅದನ್ನು ಪೋಷಿಸಿದ ತಾಯಿ ಮನೆ ಎಂದರೆ ಮಲೆನಾಡು. ಅಲ್ಲದೆ, "ನಮ್ಮ ಬಯಲಾಟದ ಸಂಪ್ರದಾಯವು ಮಲೆನಾಡಿನ ಭಾಗಗಳಲ್ಲಿ ಎಷ್ಟು ವಿಶೇಷವಾಗಿ ಪ್ರಚಾರದಲ್ಲಿದೆಯೋ, ಅಷ್ಟೇ ಕರ್ನಾಟಕದ ಇನ್ನಿತರ ಭಾಗಗಳಲ್ಲಿರುವಂತೆ ಕಂಡು ಬರುವುದಿಲ್ಲ...."[9] ಕಾರಣ ರಾಜಾಶ್ರಯ ಕೆಳದಿಯಲ್ಲಿ ದೊರತದ್ದೇ ಇರಬೇಕು. ಪ್ರಸ್ತುತದಲ್ಲಿ, ರಾಜಾಶ್ರಯ ಪಡೆದದ್ದರಿಂದ ಈ ಕಲೆಯಲ್ಲಿ ಆದ ಮಾರ್ಪಾಟುಗಳನ್ನು ಗಮನಿಸೋಣ.

ಕೆಳದಿಯ ರಾಜರ ಪೋಷಣೆ ಪ್ರೋತ್ಸಾಹಗಳು ದೊರೆತ ಮೇಲೆ ಯಕ್ಷಗಾನ ಕಲೆಯಲ್ಲಿ ಗುರುತಿಸಬಹುದಾದಷ್ಟು ವ್ಯತ್ಯಾಸಗಳು ಕಂಡುಬರುತ್ತವೆ. ಇದು ಬಹಿರಂಗದಲ್ಲಿ ಬದಲಾವಣೆಯನ್ನೂ ಅಂತರಂಗದಲ್ಲಿ ಸುಧಾರಣೆಯನ್ನು ಪಡೆದಿದೆ. ಅಂದರೆ ಯಕ್ಷಗಾನ ನಾಟಕದ ವೇಷಭೂಷಣಗಳು ಬಹಳ ಮಟ್ಟಿಗೆ ಸುಧಾರಿಸಿರುವುದು ಕಂಡು ಬರುತ್ತದೆ. ತೆಂಕುತಿಟ್ಟಿನ ಆಟಗಳಲ್ಲಿ ಕೇರಳದ ಅನುಕರಣೆ ಇದ್ದು, ವೇಷಭೂಷಣ ಗಳಲ್ಲಿ ತುಂಬಾ ಆಧುನಿಕವಾಗಿರುವುದು ಕಂಡು ಬಂದರೆ, ಬಡಗುತಿಟ್ಟಿನ ವೇಷಗಳು ಅಲಂಕಾರಪೂರ್ಣವಾಗಿದ್ದು, ಹಲವು ಆಭರಣಗಳನ್ನು ಹೊಂದಿದ್ದು ತನ್ನ ವೈಶಿಷ್ಟ್ಯ ವನ್ನು ಮೆರೆದಿದೆ. ಉದಾಹರಣೆಗೆ ಶ್ರೀ ಕಾರಂತರ ಯಕ್ಷಗಾನ ಬಯಲಾಟದಲ್ಲಿನ ನಂ. 25ರಲ್ಲಿರುವ ತೆಂಕುತಿಟ್ಟಿನ ಸ್ತ್ರೀ ವೇಷದ ಅಲಂಕಾರವನ್ನೂ, ಇತರ ಬಡಗುತಿಟ್ಟಿನ ಸ್ತ್ರೀ ವೇಷದ ಅಲಂಕಾರ ಆಭರಣಗಳನ್ನೂ ಗಮನಿಸಬಹುದು. ಬಡಗುತಿಟ್ಟಿನ ಈ ಅಂದಚೆಂದದ ವೈಭವಕ್ಕೆ ಮಲೆನಾಡಿನ ಪ್ರತಿಭಾವಂತರಾದ ಗುಡಿಕಾರರೂ ಕಲಾ ಭಿಮಾನಿಗಳಾದ ಕೆಳದಿಯನ್ನಾಳಿದವರೂ ಕಾರಣವಿರಬಹುದು.

ರಾಜಾಸ್ಥಾನದ ಮೆಟ್ಟಿಲು ಹತ್ತಿದ ಮೇಲೆ ಯಕ್ಷಗಾನ ಆಂತರಿಕವಾಗಿ ಸುಧಾರಣೆ ಪಡೆದಿರಬೇಕು. ಜನಸಾಮಾನ್ಯರ ರಂಜನೆಗಾಗಿ ಹಾದಿ ಬೀದಿಗಳಲ್ಲಿ ಆಲಯುತ್ತಿದ್ದ

---

[8] ಕುಕ್ಕಿಲ ಕೃಷ್ಣಭಟ್ಟರು, ಕುಂಬಳೆ ಪಾರ್ತಿಸುಬ್ಬ ಕವಿಯ ಕಾಲ ಮತ್ತು ಕರ್ತೃತ್ವದ ನಿರ್ಣಯ—ಪು. 14 — 24.

[9] ಶಿವರಾಮ ಕಾರಂತ, ಯಕ್ಷಗಾನ ಬಯಲಾಟ, ಪು. 171.

ಯಕ್ಷಗಾನ ಎಲ್ಲ ವಿಧದಿಂದಲೂ ಒರಟಾಗಿರುವುದು ಸ್ವಾಭಾವಿಕ. ಆದರೆ ಅರಸರ ಓಲಗದಲ್ಲಿ ಅಂದರೆ ಪ್ರಭುಗಳ, ಪ್ರಭೃತಿಗಳ ಸಮ್ಮುಖದಲ್ಲಿ ಪ್ರದರ್ಶಿತವಾಗುವಾಗ ಸುಧಾರಿಸಿಕೊಳ್ಳುವುದು ಅನಿವಾರ್ಯ. ಹಾಗೆ ನೋಡಿದರೆ ಯಕ್ಷಗಾನ ಅಂತರಿಕವಾಗಿ ಭಾಷೆಯಲ್ಲಿ ಹೆಚ್ಚು ಸಂಸ್ಕಾರಗೊಂಡಿರುವಂತಿದೆ. ಕೆಳದಿಯ ಕವಿ ಲಿಂಗಣ್ಣನ ಶಿವ ಕಲ್ಯಾಣದಲ್ಲೂ, ಅವನ ಮೊಮ್ಮಗ ಕೆಳದಿಯ ಸುಬ್ಬನ ಪಾರಿಜಾತ ಮತ್ತು ರುಕ್ಮಿಣೀ ಸ್ವಯಂವರಗಳಲ್ಲೂ ಇದನ್ನು ಗುರುತಿಸಬಹುದು.[10] ಕಥಾಪ್ರಸಂಗಗಳಲ್ಲಿ ತಿಳಿಯಾದ ಹಾಸ್ಯವು ಅಂತರಿಕವಾಗಿ ಬೆಳೆದಿರುವುದೂ ಕಂಡುಬರುತ್ತದೆ. ಪಾತ್ರಧಾರಿಗಳು ಸ್ವಯಂ ವಿದ್ವಾಂಸರೂ ಆಶುಕವಿಗಳೂ ಆಗಿದ್ದುದರಿಂದ ಪಾತ್ರ-ಪಾತ್ರಗಳಿಗೆ ನಡೆಯುವ ವಾದ ವಿವಾದಗಳು ಅರಮನೆಯ ಗೌರವಕ್ಕೆ ತಕ್ಕಂತೆ ಪ್ರಕಟಗೊಂಡುವು. ಕರ್ಣಾಟಕ ಸಂಗೀತವು ಹೆಚ್ಚು ಪ್ರಚುರಗೊಂಡು, ರಚನೆಯಲ್ಲಿ ಭಾಮಿನಿ, ವಾರ್ಧಕಗಳು ಬಹಳ ಬಳಕೆಯಾದಂತೆ ಕಂಡುಬರುತ್ತದೆ. ಈ ರೀತಿಯ ಪ್ರಗತಿ ಪ್ರಸ್ಥಾನವನ್ನು ಕೆಳದಿ ರಾಜಾಸ್ಥಾನದಲ್ಲಿ ಸ್ಥಾಪಿಸಿಕೊಂಡಿದೆ ಜಾನಪದಯಕ್ಷಗಾನ ಕಲೆ.

ಒಟ್ಟಿನಲ್ಲಿ ಜಾನಪದ ಸಾಹಿತ್ಯದ ಬೆಳಸಿಗೆ ಕೆಳದಿಯ ಆಸ್ಥಾನ ನೀರೆರೆದು ಪೋಷಿಸಿದೆ ಎಂದು ಹೇಳಬಹುದು.

**೫೨) ಇತಿಹಾಸ ಗ್ರಂಥಗಳು :**

ಕಾವ್ಯಮಯವಾದ ಇತಿಹಾಸ ರಚನೆಯೂ ಆಸ್ಥಾನ ಸಾಹಿತ್ಯದ ವೈಶಿಷ್ಟ್ಯಗಳಲ್ಲಿ ಒಂದು. "ಭಾರತೀಯರಿಗೆ ಐತಿಹಾಸಿಕ ಪ್ರಜ್ಞೆ ಇಲ್ಲ; ಎನ್ನುವ ಮಾತು ಆಗಾಗ ಕೇಳಿಬರುತ್ತದೆ. ಆದರೆ ಇದು ಸರಿಯಲ್ಲ. ವೇದಕೃತಿ ರಚಕರ ಮತ್ತು ಮಹಾಭಾರತ, ಪುರಾಣಗಳಲ್ಲಿನ ಅನುವಂಶಿಕ ಚರಿತ್ರೆಯ ಪಟ್ಟಿಗಳು ನಮ್ಮ ಸಮರ್ಥನೆಗಿವೆ. ಪವಾಡ ಕಥೆಗಳನ್ನಷ್ಟೇ ಅಲ್ಲದೆ ಹಲವು ಐತಿಹಾಸಿಕ ಮಹತ್ವಗಳನ್ನೂ ಪುರಾಣಗಳು ಪಡೆದಿವೆ ಎಂಬುದು ನಿಸ್ಸಂದೇಹವಾದ ವಿಷಯ."[11] ಆದರೂ ಕ್ರಿ. ಶ. ೧೦೩೦ ರಲ್ಲಿ ಭಾರತಕ್ಕೆ ಬಂದು, ಅದರ ವಿಷಯದಲ್ಲೇ ಬರೆದ 'ಅಲ್ಬರೂನಿ' ಎಂಬ ಅರೇಬಿಯದ ಪ್ರವಾಸಿಗನು "ದುರದೃಷ್ಟವಶಾತ್ ಭಾರತೀಯರು ತಮ್ಮ ರಾಜರುಗಳ ಚಾರಿತ್ರಿಕ ಅನುಕ್ರಮಣಿಕೆಗೆ ಹೆಚ್ಚು ಗಮನ ಕೊಡುತ್ತಿಲ್ಲ. ಪಾರಂಪರ್ಯವಾಗಿ ಅಧಿಕಾರಕ್ಕೆ ಬಂದ

---

[10] ಶಿವರಾಮ ಕಾರಂತ, ಯಕ್ಷಗಾನ, ಪು. 137 – ಕೆಳದಿಯ ಸುಬ್ಬನ 'ಪಾರಿಜಾತ' ದಲ್ಲಿ ಬರುವ ಒಂದು "ಚೂರ್ಣಿಕೆ" ಯನ್ನು ಉದಾಹರಿಸಿದ್ದಾರೆ. ಕಾವ್ಯಶೈಲಿಯ ಪ್ರೌಢಿಮೆ, ಸಂಸ್ಕಾರಗಳನ್ನು ಗುರುತಿಸಬಹುದು.

[11] Winternitz, Indian Lit. Vol. III, P. 69-70.

ರಾಜರುಗಳ ಬಗ್ಗೆ ಬರೆದಿಡಲು ಅವರು ತುಂಬಾ ನಿರುತ್ಸಾಹಿಗಳು.... ಪ್ರಣಯದ ಕಡೆ ಹೆಚ್ಚು ಗಮನ ಹರಿಸುತ್ತಾರೆ."[12] ಎಂದಿದ್ದಾನೆ. ಆದರೆ ಇತಿಹಾಸವೊಂದೇ ಭಾರತೀಯ ಕವಿಯ ಗುರಿಯಾಗಿರಲಿಲ್ಲ. ಇತಿಹಾಸವಿದ್ದರೂ ಅದು ಅವನ ಕಾವ್ಯ ಕ್ಷೇತ್ರದ ಒಂದು ಅಂಗವಾಗಿರುತ್ತಿತ್ತೇ ಹೊರತು ಪ್ರಧಾನವಾಗಿರಲಿಲ್ಲ. - ಎಂದು ಸಮಾಧಾನ ಹೇಳಬಹುದಾಗಿದೆ ಈ ಆಕ್ಷೇಪಣೆಗೆ.

ಇತಿಹಾಸಕ್ಕೆಂದೇ ಮೀಸಲಾದ ಹತ್ತಾರು ಗ್ರಂಥಗಳಿವೆ ಕನ್ನಡದಲ್ಲಿ. ಅವುಗಳಲ್ಲಿ ಹಲವು ರೂಪಗಳನ್ನು ಕಾಣುತ್ತೇವೆ. ಪಂಪ, ರನ್ನರಂತೆ ಕಥಾನಾಯಕನನ್ನು ಪೌರಾಣಿಕ ವ್ಯಕ್ತಿಯೊಡನೆ 'ತಗುಳ್ದು' ಹೇಳುವುದು ಒಂದು, ಆಂಡಯ್ಯನಂತೆ ರಾಜಕೀಯ ಶ್ಲೇಷೆ, ಧಾರ್ಮಿಕ ವಿಡಂಬನೆಗಳನ್ನು ತುಂಬಿ ಹೇಳುವುದು ಎರಡು; ನಂಜುಂಡನ ಕುಮಾರರಾಮನ ಸಾಂಗತ್ಯದಂತೆ ಅಥವಾ ಗಂಗಾಂಬಿಕೆಯ ಕೆಳದಿ ರಾಜ್ಯಾಭ್ಯುದಯಮ್‌ನಂತೆ ಅಥವಾ ಗೋವಿಂದ ವೈದ್ಯನ ಕಂಠೀರವನರಸರಾಜ ವಿಜಯ ದಂತೆ ಕಾವ್ಯಾಂಶ ವಿಶೇಷವಾಗಿ, ಐತಿಹಾಸಿಕಾಂಶ ಕಡಿಮೆ ಇರುವುದು ಮೂರು; ನೇರವಾಗಿ ಕೆಳದಿಯ ಲಿಂಗಣ್ಣನಂತೆ ಒಂದು ಅರಸು ಮನೆತನದ ಆನುವಂಶಿಕ ಚರಿತ್ರೆ ಯನ್ನು ರಚಿಸುವುದು ನಾಲ್ಕು – ಹೀಗೆ ಹಲವು ರೂಪಗಳನ್ನು ಕಾಣುತ್ತೇವೆ. ಆದರೆ ಕುಮಾರರಾಮ ಸಾಂಗತ್ಯ, ಕಂಠೀರವನರಸರಾಜ ವಿಜಯ, ಕೆಳದಿ ನೃಪ ವಿಜಯ ಮೊದಲಾದ ಕೃತಿಗಳಲ್ಲಿ ವೀರ ಚರಿತಕಾವ್ಯದ ಹಲವು ಗುಣಗಳನ್ನು ಗುರುತಿಸಬಹುದು. ತಮ್ಮನ್ನಾಳಿದ ರಾಜರುಗಳ ಯುದ್ಧ ಜಯ, ಇತ್ಯಾದಿಗಳನ್ನು ಬಿತ್ತರಿಸುವುದೇ ಅವರ ಮುಖ್ಯ ಉದ್ದೇಶವಾಗಿರುತ್ತದೆ. ಹಲವು ವೇಳೆ, ಇದು ಇತಿಹಾಸ ಗ್ರಂಥವೆಂಬುದನ್ನೇ ಮರೆತು ಕಾವ್ಯಕ್ಷೇತ್ರದ ಮನೋಹರವಾದ ಬಣ್ಣನೆಯಲ್ಲಿ ಮೈಮರೆತು ವಿಹರಿಸುತ್ತೇವೆ. ಪ್ರಸ್ತುತ ನಿಬಂಧದ ಕೆಳದಿನೃಪವಿಜಯ ನಿಜಕ್ಕೂ ಉತ್ತಮ ಇತಿಹಾಸಕಾವ್ಯ. ಕನ್ನಡದಲ್ಲಿ ದೊರಕುವ ಒಂದು ಅರಸು ಮನೆತನದ ಸಮಗ್ರ ಇತಿಹಾಸವನ್ನುಳ್ಳ ಕೃತಿ. ಅತಿಶಯೋಕ್ತಿಯೆನಿಸದಿದ್ದರೆ 'ಕೆಳದಿನೃಪವಿಜಯ' ಕನ್ನಡದ ರಾಜತರಂಗಿಣಿ.

---

[12] E. C. Sachan, Alberunis: India, English Ed. II. PP. 10.

ಕೆಳದಿಯ ಆಸ್ಥಾನ ಸಾಹಿತ್ಯವು ಹೆಚ್ಚಾಗಿ ಆಧ್ಯಾತ್ಮಭೂಯಿಷ್ಠವಾದದ್ದು, ಅಲ್ಲಿನ ಬಹುಪಾಲು ಸಾಹಿತ್ಯ-ಕನ್ನಡವಾಗಿರಲಿ ಅಥವಾ ಸಂಸ್ಕೃತವಾಗಿರಲಿ-ಅದು ಧರ್ಮ ದ್ಯೋತಕ ಇಲ್ಲವೇ ನೀತಿ ಪ್ರಚಾರಕ. ಅಂದರೆ ಕಾವ್ಯದಲ್ಲಿ ಎಲ್ಲರೂ ಕೇಳುವ, ಕೇಳಲೇಬೇಕಾದ ರಸದ ಕಡೆಗೆ ಕೆಳದಿ ಕಣ್ಣು ಮುಚ್ಚಿಕೊಂಡಿದೆ ಎಂದರ್ಥವಲ್ಲ. ಅದೂ ಇದೆ;[1] ಅದರ ಜೊತೆಯಲ್ಲಿ ಇದೂ ಇದೆ. ಭಾರತೀಯರಲ್ಲಿ ಹೇಗೆ ಕಲೆಗಾಗಿ ಕಲೆ ಅಥವಾ ಕಾವ್ಯಕ್ಕಾಗಿ ಕಾವ್ಯ ಎಂಬ ತತ್ತ್ವವು ಮಾನ್ಯವಲ್ಲವೋ ಹಾಗೆಯೇ ಧರ್ಮ ಪ್ರಚಾರಕ್ಕಾಗಿ ಕಾವ್ಯ ಅಥವಾ ನೀತಿ ಬೋಧೆಗಾಗಿ ಕಾವ್ಯ ಎಂಬ ತತ್ತ್ವವು ಪ್ರಾಮಾಣ್ಯವಲ್ಲ; ಪ್ರಧಾನವೂ ಅಲ್ಲ. ನಮ್ಮವರು ಕಲೆಯಲ್ಲಿ ಕಂಡದ್ದು, ಅನುಭವಿಸಿದ್ದು ಆನಂದ ಅಥವಾ ರಸ. ಅದನ್ನು 'ಸಕಲ ಪ್ರಯೋಜನ ಮೌಲಿಭೂತಂ' ಎಂದರು. ಕಾವ್ಯಾನಂದ ಬೇರೆಯಲ್ಲ, ಬ್ರಹ್ಮಾನಂದ ಬೇರೆಯಲ್ಲ ಎಂಬ ಅಸಾಧಾರಣ ದೃಷ್ಟಿ ಅವರದು. ಅಂತೆಯೇ ಕಲೆಯ ಉದ್ದೇಶಕ್ಕೂ ಕಲೆಯಿಂದ ಸಿಗಬಹುದಾದ ಫಲಕ್ಕೂ ತಕ್ಕ ತಕ್ಕ ಸ್ಥಾನಗಳನ್ನು ಕೊಟ್ಟಿದ್ದಾರೆ. ಒಂದರ ಅಳತೆಗೋಲಿನಿಂದ ಮತ್ತೊಂದನ್ನು ಅಳೆಯ ಹೋಗಿಲ್ಲ. ಕಾವ್ಯದಲ್ಲಿ ಬಹು ಮೌಲ್ಯವುಳ್ಳದ್ದು 'ರಸ'. ಈ ರಸದಿಂದ ಆವೃತವಾಗಿರುವ ನೀತಿ, ಧರ್ಮ, ಅಧ್ಯಾತ್ಮ ವಿಚಾರಗಳು ಬಂದರೆ, ಶಿವೇತರಕ್ಷತವಾಗುವುದಾದರೆ, ಬಾಳಿಗೆ ಬೆಳಕು ನೀಡುವುದಾದರೆ ಅದಕ್ಕೆ ಎಂದೆಂದಿಗೂ ಸ್ವಾಗತ ಇದೆ. ಆನಂದದ ಜೊತೆಯಲ್ಲಿ ಆತ್ಮಸಾಕ್ಷಾತ್ಕಾರವೂ ಆದರೆ ಆ ಕಾವ್ಯದ ಘನತೆ ಹೆಚ್ಚಿತು ಎಂಬುದೇ ನಮ್ಮವರ ಭಾವನೆ. ಪಾಶ್ಚಾತ್ಯರಂತೆ 'ಕಾವ್ಯಕ್ಕಾಗಿ ಕಾವ್ಯ' ಎಂದು ಹೇಳುವ ಅಲ್ಪ ತೃಪ್ತಿ ಇವರದ್ದಲ್ಲ. ಆಲಂಕಾರಿಕನಾಗಿದ್ದರೂ ಅಪಾಯಕಾರಿಯಾದ, ಅವ್ಯಾಪ್ತಿ ದೋಷದಿಂದ ಕೂಡಿದ ಅಂತಹ ಹೇಳಿಕೆಯನ್ನು ಕೊಡುವುದು ನಮ್ಮವರ ಜಾಯಮಾನವಲ್ಲ. ಕಾವ್ಯವನ್ನು ಓದುವಾಗ ಸಹೃದಯನಿಗೆ ಮುಖ್ಯವಾಗಿ ಆಗಬೇಕಾದುದ್ದು ರಸಾನುಭವ; ಓದಿ ಮುಗಿಸಿದನಂತರ ಅದರ ಪ್ರಭಾವ ಅಥವಾ ಪರಿಣಾಮ ಬದುಕಿನ ಮೇಲೆ ಎಷ್ಟರ ಮಟ್ಟಿಗೆ ಆಗಿದೆ, ಯಾವ ರೂಪದಲ್ಲಾಗಿದೆ ಎಂಬುದನ್ನೂ ನಾವು ಗಣಿಸಬೇಕಾಗುತ್ತದೆ. ಅದರಿಂದ ಕಾವ್ಯದ ಘನತೆ ಕಡಿಮೆಯಾಯಿತು ಎಂದು ನಾವು ಎಂದೂ ಭಾವಿಸಿಲ್ಲ. ಏಕೆಂದರೆ ಎಲ್ಲ ಕಲೆಗಳಿಗಿಂತ ಶ್ರೇಷ್ಠವಾದ ಕಲೆ ಎಂದರೆ ಜೀವನಕಲೆ. ಈ ಜೀವನಕಲೆಯನ್ನು ಬೆಳಗಿಸುವುದಕ್ಕಾಗಿಯೇ ಇರುವುದು ಮಿಕ್ಕೆಲ್ಲ ಕಲೆಗಳು. ಅಂದಮೇಲೆ ಬಾಳನ್ನು ಬಂಗಾರವನ್ನಾಗಿಸುವ ಶಕ್ತಿ, ಸತ್ತ್ವಗಳನ್ನುಳ್ಳ ಕಲಾಕೃತಿಗಳಿಗೆ ನಮ್ಮಲ್ಲಿ ಸದಾ ಸ್ವಾಗತವಿದೆ.

---

[1]Supra ಕೆಳದಿಯ ಕನ್ನಡ ಕವಿಗಳು ಮತ್ತು ಅವರ ಕೃತಿಗಳು ವಿಭಾಗದಲ್ಲಿ ಬರುವ ಪ್ರತಿಯೊಬ್ಬ ಕವಿ ಕವಯಿತ್ರಿಯರ ಕೃತಿ ವಿಶ್ಲೇಷಣೆಯಲ್ಲಿನ ರಸವಿಮರ್ಶೆ ನೋಡಿ.

ಕೆಳದಿಯ ಆಸ್ಥಾನ ಸಾಹಿತ್ಯದ ಬಹುಭಾಗ ಈ ವರ್ಗಕ್ಕೆ ಸೇರಿದ್ದು. ನಮ್ಮ ಮನಸ್ಸನ್ನು ರಂಜಿಸುವ ರಮ್ಯ ಸನ್ನಿವೇಶಗಳನ್ನುಳ್ಳ ವಿಧವಿಧವಾದ ಕಥಾನಕಗಳನ್ನೂ, ಬಣ್ಣ ಬಣ್ಣದ ಬಣ್ಣನೆಗಳನ್ನೂ, ಚಿತ್ರವಿಚಿತ್ರವಾದ ಪಾತ್ರಗಳನ್ನೂ ಸಂದರ್ಶಿಸುತ್ತೇವೆ. ಶುಕಸಪ್ತತಿಯಲ್ಲಿ, ಕವಿ ಶರಜಾ ನಾಗಪ್ಪಯ್ಯನು ಶೃಂಗಾರದ ಬಲೆ ಬೀಸಿ, ಓದುಗನನ್ನು ಸೆರೆಹಿಡಿದು, ಪಾತಿವ್ರತ್ಯದ ಉಣಿಸಿತ್ತು ಕೈಬಿಡುತ್ತಾನೆ. ತತ್ತ್ವದ ಕಹಿಗುಳಿಗೆಗೆ ಕಾವ್ಯಾಂಶದ ಸಕ್ಕರೆ ಅಂಗಿ ತೊಡಿಸಿ ಓದುಗರ ಆಂತರಿಕ ಆರೋಗ್ಯವನ್ನು ಕಾಪಾಡಿದ್ದಾನೆ. ಕವಿ ಲಿಂಗಣ್ಣನು ತನ್ನ ದಕ್ಷಾಧ್ವರವಿಜಯ, ಶಿವಕಲ್ಯಾಣ, ಮತ್ತು ಪಾರ್ವತೀ ಪರಿಣಯ ಕೃತಿಗಳಲ್ಲಿ ಶಿವಪಾರಮ್ಯವನ್ನೂ ಅವನ ಮಗ ವೆಂಕನು ತನ್ನ ನರಹರಿವಿಜಯದಲ್ಲಿ ವಿಷ್ಣುಪಾರಮ್ಯವನ್ನೂ ಬಿತ್ತರಿಸಿದ್ದಾರೆ. ಅಂದರೆ ಅವರ ಕೃತಿಗಳಿಗೆ ಭಕ್ತಿಯೇ ಬೀಜವಾಗಿದೆ. ನಿರ್ಮಲವಾದ ಭಕ್ತಿಯು ಹೊನಲಾಗಿ ಹರಿದಿದೆ ಈ ಕವಿಪುಂಗವರ ಕಾವ್ಯಭೂಮಿಕೆಯಲ್ಲಿ. ಅಂದರೆ ಪಂಪನ ಕಲಿತನ, ರನ್ನನ ಶಕ್ತಿ, ಹರಿಹರನ ಆವೇಶ, ರಾಘವಾಂಕನ ನಾಟಕೀಯತೆ, ಕುಮಾರವ್ಯಾಸನ ಅಗ್ಗಳಿಕೆ ಕೆಳದಿಯ ಕವಿಗಳಲ್ಲಿಲ್ಲ. ಆದರೂ ತಮ್ಮಲ್ಲಿನ ಪ್ರಾತಿಭಜ್ಯೋತಿಯಿಂದ ಕಿಂಚಿತ್ತು ಭಾಗ ಕನ್ನಡದ ಕತ್ತಲನ್ನು ಹರಿಸಿದ್ದಾರೆ. ಭಕ್ತಿಯನ್ನೂ, ಶಕ್ತಿಯನ್ನೂ ಸಾಕಷ್ಟು ಪ್ರಮಾಣದಲ್ಲಿ ಪ್ರದರ್ಶಿಸಿದ್ದಾರೆ. ಒಟ್ಟಿನಲ್ಲಿ ಭಕ್ತಿ ಸಾಹಿತ್ಯದಲ್ಲಿ, ಧಾರ್ಮಿಕ ಸಾಹಿತ್ಯದಲ್ಲಿ, ನೀತಿ ಸಾಹಿತ್ಯದಲ್ಲಿ ಕೆಳದಿಯ ಆಸ್ಥಾನಕ್ಕೆ ಒಂದು ಸ್ಥಾನ ಮೀಸಲಿದೆ.

ಈಗ ಕೆಳದಿಯು ಕೊಟ್ಟ ಧಾರ್ಮಿಕ ಸಾಹಿತ್ಯದ ಕಡೆಗೆ ನಮ್ಮ ದೃಷ್ಟಿ ಹರಿಸೋಣ. ಕೆಳದಿಯ ಆಸ್ಥಾನ ಸರ್ವಧರ್ಮಗಳಿಗೂ ಸಮಾನವಾದ ವೇದಿಕೆಯಾಗಿದ್ದಿತು. ಅಲ್ಲಿ ಭಾರತೀಯ ಧರ್ಮಗಳಷ್ಟೇ ಅಲ್ಲದೆ ವಿದೇಶೀ ಧರ್ಮಗಳಾದ ಕ್ರೈಸ್ತ, ಇಸ್ಲಾಂ-ಇವುಗಳೂ ಪೋಷಣೆ, ರಕ್ಷಣೆ ಪಡೆದಿವೆ. ಆದರೆ ಕೆಳದಿಯ ಆಸ್ಥಾನದಲ್ಲಿ ಸೃಷ್ಟಿಯಾದ ಧಾರ್ಮಿಕ ಸಾಹಿತ್ಯ ಮಾತ್ರ ಶೈವ ಇಲ್ಲವೇ ವೀರಶೈವಪರವಾದದ್ದು. ಹೆಸರು ಯಾವುದೇ ಇರಲಿ ವಸ್ತು ಮಾತ್ರ ಒಂದೇ. ಗುರಿ ಮುಟ್ಟುವ ಮುನ್ನ ಅನ್ವೇಷಕರು ಹೊರಟ ಹಾದಿಗಳು ಬೇರೆ ಬೇರೆ; ಆದರೆ ಸೇರಿದ ಗುರಿ ಒಂದೇ. ಕೆಲವರದು ದ್ವೈತ ಮಾರ್ಗ, ಕೆಲವರದು ಅದ್ವೈತ ಮಾರ್ಗ, ಕೆಲವರದು ವಿಶಿಷ್ಟಾದ್ವೈತದ ದಾರಿ. ಕೆಲವರದು ಶಿವಾದ್ವೈತದ ಹಾದಿ. ಏನೇ ಇರಲಿ, ಅನೇಕತೆಯಲ್ಲಿ ಏಕತೆಯನ್ನು ಅಡಗಿಸಿಟ್ಟಿರುವುದೇ ಭಾರತೀಯ ಸಂಸ್ಕೃತಿಯ ಹಿರಿಮೆ. ಆದುದರಿಂದ ಎಲ್ಲ ಧರ್ಮಗಳ ಅಂತರ್ಯದಲ್ಲಿ ಹರಿಯುವ ಸೂತ್ರ ಒಂದೇ. ಭಕ್ತಿ, ಜ್ಞಾನ, ವೈರಾಗ್ಯಗಳಾಗಲೀ ದಯೆ, ಧರ್ಮ, ದಾನ, ತಪ, ಶೀಲಗಳಾಗಲೀ ಯಾವುದೇ ಧರ್ಮದ ಸ್ವಂತ ಆಸ್ತಿಯಲ್ಲ. ಎಲ್ಲ ಧರ್ಮಗಳಿಗೂ ಅವುಗಳಲ್ಲಿ ಪಾಲಿದೆ. ಅವು ಜಾತಿಯ ಕೆಸರಿನಿಂದ ಮಲಿನಗೊಂಡುವಲ್ಲ. ಸರ್ವರಿಗೂ, ಸಮಾನವಾದ ಮಾನವಧರ್ಮಗಳು. ಈ ಮಾನವ ಧರ್ಮಕ್ಕೆ ಕೆಳದಿ ಕೊಟ್ಟ ಕಾಣಿಕೆ, ಅದು ನೀಡಿದ ಸಾಹಿತ್ಯದಲ್ಲಿ ಅಡಗಿದೆ.

ಮೇಲೆ ತಿಳಿಸಿದ ದ್ವೈತ, ಅದ್ವೈತ, ವಿಶಿಷ್ಟಾದ್ವೈತಗಳನ್ನು ಬೆಳಗಿಸಿದ ದಾರ್ಶನಿಕರಲ್ಲಿ ಪರವಸ್ತು ಸ್ವರೂಪ ನಿರ್ಣಯದಲ್ಲಿ ಎರಡು ದೃಷ್ಟಿಗಳಿರುವುದು ಕಂಡುಬರುತ್ತದೆ. ಒಂದು ದೃಷ್ಟಿಯು ಪರವಸ್ತುವು ನಿರ್ಗುಣ, ನಿರಾಕಾರ, ನಿರಂಜನ, ನಿತ್ಯ. ಆದ್ದರಿಂದಲೇ 'ಬ್ರಹ್ಮ ಸತ್ಯಂ ಜಗನ್ಮಿಥ್ಯಂ' ಎಂದರೆ, ಮತ್ತೊಂದು ತಿಳಿಸುತ್ತದೆ ಪರವಸ್ತುವು ಸಾಕಾರರೂಪಿ, ಪರಮಾತ್ಮನಂತೆ ಜೀವಾತ್ಮನೂ ಸತ್ಯ, ಜಗತ್ತೂ ಸತ್ಯ ಎಂದು. ಆದರೆ ಶಿವಾದ್ವೈತ ಸಿದ್ಧಾಂತವು ಪರವಸ್ತುವಿನ ಸ್ವರೂಪ ನಿರ್ಣಯದಲ್ಲಿ ನಿರಾಕಾರವೊಂದನ್ನೇ ಅಥವಾ ಸಾಕಾರವೊಂದನ್ನೇ ಅಂಗೀಕರಿಸುವುದಿಲ್ಲ. ನಿರಾಕಾರ ಸ್ಥಿತಿಯೂ ಸಾಕಾರ ಸ್ಥಿತಿಯೂ ಶೂನ್ಯ ಸ್ಥಿತಿಯಲ್ಲಿ ಇರುವುದೆಂದು ಪ್ರತಿಪಾದಿಸುತ್ತದೆ. ಈ ದರ್ಶನದ ಪ್ರದರ್ಶನಕ್ಕೆ ಕೆಳದಿ ಸಾಹಿತ್ಯ ಒಂದು ಸಾಧನರಂಗವಾಗಿದೆ.

ವೀರಶೈವ ಸಿದ್ಧಾಂತ ಅಥವಾ ಶಿವಾದ್ವೈತ ಸಿದ್ಧಾಂತವು ಸಾಧಕನಿಗಾಗಿ ಸಮೆದು ಕೊಟ್ಟ ಮೆಟ್ಟಿಲುಗಳು ಆರು. ಅವೇ ಷಟ್ಸ್ಥಲಗಳು. ಜೀವ ದೇವನಾಗಬೇಕಾದರೆ ಈ ಆರು ಮಜಲುಗಳನ್ನು ಕ್ರಮವಾಗಿ ಏರಬೇಕಾಗುತ್ತದೆ. “ ವೀರಶೈವೀಯ ಧರ್ಮಾಂಗಳೆಲ್ಲವೂ ಈ ಷಟ್ಸ್ಥಲ ವಿದ್ಯೆಗೆ ಅಂಗವಾದವುಗಳು. ಮಾನವನಿಗೆ ಜೀವತ್ವವಳಿದು ಮುಕ್ತತ್ವವುಂಟಾಗಬೇಕಾದರೆ ಅವನು ಕ್ರಮಿಸತಕ್ಕ ಮಾರ್ಗವಾವುದೋ ಅದು ಕ್ರಮವಾಗಿ ಇದರಲ್ಲಿ ವಿವರಿಸಲ್ಪಟ್ಟಿರುವುದು. ಲಿಂಗ ( ಬ್ರಹ್ಮ ) ಅಂಗ ( ಜೀವ ) ಇವರಿರ್ವರ ಸಾಮರಸ್ಯ ಜ್ಞಾನವು ಈ ಷಟ್ಸ್ಥಲಾಚಾರಾನುಸರಣದಿಂದ ಸಿದ್ಧಿಸುವುದು. ಈ ಶಾಸ್ತ್ರೋಕ್ತವಾದ ಸಾಧನೆಯಿಂದ ಸಂಪನ್ನನಾದವನು ಆಚರಿಸತಕ್ಕ ಮಾರ್ಗಗಳೇ ಯೋಗ್ಯತಾನುಗುಣವಾಗಿ ಆರು ಭಾಗ ಮಾಡಲ್ಪಟ್ಟು, ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರುಸ್ಥಲಗಳೆಂದು ವ್ಯವಹರಿಸಲ್ಪಟ್ಟಿರುವುವು. ಆ ಸ್ಥಲಗಳೇ ಅಂತರ್ವಿಭಾಗಗೊಂಡು ಪಿಂಡಾದಿ ಜ್ಞಾನಶೂನ್ಯಾಂತಗಳಾದ ನೂರೊಂದು ಸ್ಥಲಗಳಾಗಿ ನಿರ್ಣಯಿಸಲ್ಪಟ್ಟಿರುವುವು. ಮುಕ್ತಿಗೆ ಸಾಧನವಾಗಿರುವ ಚಿರ ನಿರ್ವಾಣ ದೀಕ್ಷೆಯನ್ನು ಪಡೆಯುವುದಕ್ಕಾಗಿ, ಜನ್ಮ ಜನ್ಮಾಂತರಾರ್ಜಿತವಾದ ಸುಕೃತದ ಪರಿಪಾಕದಿಂದಲೂ ಶಿವಾನುಗ್ರಹದಿಂದಲೂ ಪ್ರಾಪ್ತವಾದ ಚರಮಶರೀರವನ್ನು ಹೊಂದಿರುವವನೇ ವೀರಶೈವ ಸಿದ್ಧಾಂತದ ಪ್ರಕಾರ ಮೊದಲನೆಯ ಪಿಂಡಸ್ಥಲ ಸಂಪನ್ನನೆಂದು ಹೇಳಲ್ಪಡುವನು. ಬಳಿಕ ಉತ್ತರೋತ್ತರ ಧರ್ಮಾನುಸರಣದಿಂದ ಮಹಾಲಿಂಗದಲ್ಲಿ ಮನೋಲಯವನ್ನೈದಿ, ಸ್ವಸ್ವರೂಪ ಸಾಕ್ಷಾತ್ಕಾರನನ್ನೈದಿದವನು ನೂರೊಂದನೆಯದಾದ ಜ್ಞಾನಶೂನ್ಯ ಸ್ಥಲವನ್ನೈದಿದವನಾಗಿ ಪರಮುಕ್ತನಾಗುವನು. ”[2] ಈ ಏಕೋ

[2] ಎನ್. ಆರ್. ಕರಿಬಸವಶಾಸ್ತ್ರಿ, ಷಟ್ಸ್ಥಲವಿದ್ಯಾ, ಪು. 3 ( 1910 )

ತ್ತರ ಶತಸ್ಥಲ[3] ವಿಚಾರವು ಶಿವಾಗಮಗಳಲ್ಲೂ, ಸಿದ್ಧಾಂತಶಿಖಾಮಣಿಯಲ್ಲೂ ಕೆಳದಿಯ ಆಸ್ಥಾನದಲ್ಲಿ ಹುಟ್ಟಿದ ಮರಿತೋಂಟದಾರ್ಯನ ವೀರಶೈವಾನಂದ ಚಂದ್ರಿಕೆಯಲ್ಲೂ ಬಿತ್ತರಗೊಂಡಿದೆ.[4] ಪರಶಿವನು ಸ್ವಶಕ್ತಿಯ ಸ್ವಭಾವಕ್ಕನುಸಾರವಾಗಿ ಆಕಾರ(ವ್ಯಕ್ತ) ನೂ ಹೌದು, ನಿರಾಕಾರ (ಅವ್ಯಕ್ತ) ನೂ ಹೌದು. ಇದು ಆತನ ಲೀಲೆ. ಈ ಬಗ್ಗೆ ಕೆಳದಿಯ ಹಿರಿಯ ಬಸವಪ್ಪ ನಾಯಕನ ಶಿವತತ್ತ್ವರತ್ನಾಕರವೆಂಬ ಸಂಸ್ಕೃತ ವಿಶ್ವಕೋಶದಲ್ಲಿ ಸಾಕಷ್ಟು ವಿವರಣೆ ದೊರೆಯುತ್ತದೆ. "ಸ್ಥಲಶಬ್ದವಾಚ್ಯನಾದ ಶಿವನು ಸ್ವಲೀಲೆಯಿಂದ ಲಿಂಗ ಅಂಗವೆಂಬ ಅಂದರೆ ಶಿವ-ಜೀವರೆಂಬ - ನಾಮದಿಂದ ದ್ವಿವಿಧನಾಗುವನು. ಲಿಂಗದಲ್ಲಿ-ಶಿವನಲ್ಲಿ-ಇರುವ ಅವಿನಾಭಾವ ಶಕ್ತಿಯೇ ಕಲೆಯೆಂಬ ನಾಮದಿಂದ,ಲಿಂಗ ತತ್ತ್ವವನ್ನು ಆಶ್ರಯಿಸಿರುವುದು. ಅಂಗನಲ್ಲಿ-ಜೀವನಲ್ಲಿ- ಅವಿನಾಭಾವದಿಂದಿರುವ ಶಕ್ತಿಯೇ ಭಕ್ತಿಯೆಂಬ ನಾಮದಿಂದ ಅಂಗತತ್ತ್ವವನ್ನಾಶ್ರಯಿಸಿರುವುದು-ಎಂದು ಸಿದ್ಧಾಂತದಲ್ಲಿ ಪ್ರತಿಪಾದಿಸುವುದರಿಂದ ಸ್ಥಲಪದವಾಚ್ಯನಾದ ಶಿವನು ಶಕ್ತಿ ವಿಶಿಷ್ಟನಾಗಿರುವನೆಂದು ಸಿದ್ಧವಾಗುವುದು. ಮತ್ತು ಅಂಗನಿಗೆ ಉಪಾಸ್ಯನಾದ ಲಿಂಗರೂಪಶಿವನು ಸಕಲ (ಇಷ್ಟಲಿಂಗ) ಸಕಲ ನಿಷ್ಕಲ (ಪ್ರಾಣಲಿಂಗ), ನಿಷ್ಕಲ (ಭಾವಲಿಂಗ) ವೆಂಬ ತ್ರಿವಿಧರೂಪವನ್ನು ಹೊಂದಿ, ಅಂಗನ ಸ್ಥೂಲ, ಸೂಕ್ಷ್ಮ ಕಾರಣ ಶರೀರಗಳಲ್ಲಿ ಉಪಾಸ್ಯನಾಗುವನೆಂದು ಅದೇ ಸ್ಥಲಸಿದ್ಧಾಂತವು ನಿರೂಪಿಸಿರುವುದರಿಂದ ಶಿವನು ಕೇವಲ ಸಾಕಾರ (ಸಕಲ) ಸ್ಥಿತಿಯಲ್ಲಿಯೂ ಸಾಕಾರನಿರಾಕಾರ (ಸಕಲನಿಷ್ಕಲ) ಸ್ಥಿತಿಯಲ್ಲಿಯೂ, ಕೇವಲ ನಿರಾಕಾರ (ನಿಷ್ಕಲ) ಸ್ಥಿತಿಯಲ್ಲಿಯೂ ಇರುವನೆಂದು ಸಿದ್ಧವಾಗುವುದು. ಹೀಗೆ ಸ್ಥಲಸಿದ್ಧಾಂತದಲ್ಲಿ ಶಿವನ ಸಾಕಾರನಿರಾಕಾರಗಳೆರಡೂ ಅಂಗೀಕೃತವಾಗಿರುವವೆಂಬುದನ್ನು ಗಮನಿಸಬೇಕು. ಇನ್ನು ಸ್ಥಲಸಿದ್ಧಾಂತಕ್ಕನುಸರಿಸಿದ ೩೬ ತತ್ತ್ವಗಳಲ್ಲಿ ೧ ಶಿವತತ್ತ್ವ, ೫ ಸಾದಾಖ್ಯಗಳು, ೫ ಕಲೆಗಳು - ಈ ೧೧ ತತ್ತ್ವಗಳು ಲಿಂಗತತ್ತ್ವಗಳೆಂತಲೂ, ೫ ಭೂತಗಳು, ೫ ತನ್ಮಾತ್ರೆಗಳು, ೧೦ ಜ್ಞಾನಕರ್ಮೇಂದ್ರಿಯಗಳು, ೪ ಅಂತಃಕರಣಗಳು, ೧ ಆತ್ಮತತ್ತ್ವ - ಈ ೨೫ ಅಂಗತತ್ವಗಳೆಂತಲೂ ಪ್ರತಿಪಾದಿಸಲಟ್ಟಿರುವುವು. ಶಿವನು ತನ್ನ ಶಕ್ತಿಯ ವಿಕಾಸಾವಸ್ಥೆಯಲ್ಲಿ ಶಿವಾದಿಭೂಮ್ಯಂತವಾದ ೩೬ ತತ್ತ್ವರೂಪದಿಂದ ಪರಿಣಮಿಸುವನು. ಈ ಪರಿಣಾಮವು ಕ್ಷೀರವು ದಧಿರೂಪವಾಗಿ ಪರಿಣಮಿಸುವ ವಿಕೃತ

---

[3] ಅಂಗಸ್ಥಲಗಳು 44, ಲಿಂಗಸ್ಥಲಗಳು – 57 – ನೋಡಿ – ಶ್ರೀ ಬಿ. ಚಂದ್ರಶೇಖರ ಶಾಸ್ತ್ರಿ ವಿರಚಿತ, ಏಕೋತ್ತರಶತಸ್ಥಲಸಾರ ಸಂಗ್ರಹಂ, ಪ್ರಕಟಣೆ : ಮೈಸೂರುಸ್ಟಾರ್‌ಪ್ರೆಸ್ 1904.

[4] ವೀರಶೈವಾನಂದ ಚಂದ್ರಿಕಾ, ವಾದಕಾಂಡ ನೋಡಿ.

[6] ಶಿವತತ್ತ್ವರತ್ನಾಕರ, IX.

ಪರಿಣಾಮವಲ್ಲ; ಸ್ವರ್ಣವು ಕಟಕವಾಗಿ ಪರಿಣಮಿಸುವಂತೆ ಅವಿಕೃತ ಪರಿಣಾಮವು. ಆದುದರಿಂದ ಶಿವನ ಮೂಲಸ್ವರೂಪಕ್ಕೆ ಚ್ಯುತಿಯುಂಟಾಗುವುದಿಲ್ಲ ; ಮತ್ತು ಸ್ಥಲ ಸಿದ್ಧಾಂತವು ಅದ್ವೈತಿಗಳ ವಿವರ್ತವಾದವನ್ನು ಅಂಗೀಕರಿಸದೆ ಪರಿಣಾಮವಾದವನ್ನೇ ಅಂಗೀಕರಿಸುವುದು. ಏಕೆಂದರೆ ವಿವರ್ತವಾದದಲ್ಲಿ ಜೀವ ಜಗತ್ತುಗಳು ಬ್ರಹ್ಮದಲ್ಲಿ ಆರೋಪಿತಗಳಾಗುವುದರಿಂದ ಮಿಥ್ಯೆಗಳೆನಿಸುವುವು. ಜೀವಪದವಾಚ್ಯನಾದ ಅಂಗನು ಮಿಥ್ಯಾಭೂತನಾದರೆ, ಸತ್ಯಸ್ವರೂಪವಾದ ಲಿಂಗದಲ್ಲಿ ಅವನಿಗೆ ಸಾಮರಸ್ಯವು (ಏಕತ್ವವು) ಘಟಿಸುವುದಿಲ್ಲ. ಎರಡು ಸತ್ಯವಸ್ತುಗಳಿಗೆ ಏಕತ್ವವು ಘಟಿಸುವುದಲ್ಲದೆ, ಸತ್ಯದೊಡನೆ ಮಿಥ್ಯಾವಸ್ತುವಿಗೆ ಏಕತ್ವ ಸಿದ್ಧಿಸುವುದಿಲ್ಲ. ಸಮುದ್ರದಂತೆ ನದಿಯೂ ಸತ್ಯವಾಗಿದ್ದರೆ ಸಮುದ್ರದೊಡನೆ ನದಿಯು ಸೇರಿ ಏಕರೂಪವನ್ನು ಹೊಂದಲಿಕ್ಕೆ ಬರುವುದಲ್ಲವೆ? ನದಿಯು ಮಿಥ್ಯೆಯಾದರೆ ಅದಕ್ಕೆ ಸಮುದ್ರದೊಡನೆ ಸಾಮರಸ್ಯವನ್ನು ಹೇಳುವುದೇ ಅಸಂಗತವೆಂಬುದು ಸುವಿಚಾರಗಳಿಗೆ ಹೊಳೆಯದಿರದು. ಈ ವಿಚಾರಕ್ಕನುಸರಿಸಿ, ಸ್ಥಲಸಿದ್ಧಾಂತವು ಶಿವನಂತೆ ಶಿವನ ಪರಿಣಾಮ ರೂಪವಾದ ಜೀವಜಗತ್ತುಗಳೂ ಸತ್ಯವಾದವುಗಳೇ – ಎಂದು ಪ್ರತಿಪಾದಿಸುವುದು "ಸತ್ಯಸ್ವರೂಪನಾದ ಶಿವನು ಕಾರಣಾವಸ್ಥೆಯಿಂದ ನಿತ್ಯನೂ ಕಾರ್ಯಾವಸ್ಥೆಯಿಂದ ಅನಿತ್ಯನೂ ಆಗಿ ಕ್ರೀಡಿಸುವನು; ಇದು ಆತನ ಲೀಲೆ ; ನಿತ್ಯಾನಿತ್ಯತ್ವವು ಸತ್ಯಸ್ವರೂಪಕ್ಕೆ ಬಾಧಕವಲ್ಲ. ಮಣ್ಣಿನ ಸತ್ಯಸ್ವರೂಪವು ಕಾರಣಾವಸ್ಥೆಯಲ್ಲಿ ನಿತ್ಯವಾಗಿಯೂ ಘಟಾದಿ ಕಾರ್ಯಾವಸ್ಥೆಯಲ್ಲಿ ಅನಿತ್ಯವಾಗಿಯೂ ಇರುವುದರಿಂದ ಅದರ ಸತ್ಯಸ್ವರೂಪಕ್ಕೆ ಬಾಧೆಯಿಲ್ಲವೆಂಬುದು ಅನುಭವ ಸಿದ್ಧವಲ್ಲವೆ?" [7]

ಈ ದಿವ್ಯದರ್ಶನದ ಭವ್ಯನಿರೂಪಣೆಯು ನಮಗೆ ಕೆಳದಿಯ ಹಿರಿಯ ವೆಂಕಟಪ್ಪನ ಆಸ್ಥಾನ ಕವಿ ತಿರುಮಲಭಟ್ಟನ 'ಶಿವಗೀತೆ' ಯಲ್ಲಿ ದೊರೆಯುತ್ತದೆ. ಅಗಸ್ತ್ಯ ಮಹರ್ಷಿಗಳಿಂದ ಅನುಗ್ರಹಿತನಾದ ಶ್ರೀರಾಮಚಂದ್ರನು ಅವರಿಂದಲೇ ವಿರಜಾ ದೀಕ್ಷೆಯನ್ನು ಅಥವಾ ಪಾಶುಪತವ್ರತವನ್ನು ಸ್ವೀಕರಿಸಿ ನಿರಾಕಾರ ಪರಶಿವನನ್ನು ಮೆಚ್ಚಿಸುತ್ತಾನೆ. ಆ ನಿರಾಕಾರ ಪ್ರಭುವೇ ದಿವ್ಯಮಂಗಳ ವಿಗ್ರಹದಿಂದ ಸಾಕಾರಮೂರ್ತಿಯಾಗಿ ಶ್ರೀರಾಮಚಂದ್ರನಿಗೆ ದರ್ಶನವಿತ್ತು, ವಿಭೂತಿ, ವಿಸ್ತರಯೋಗ, ವಿಶ್ವರೂಪಸಂದರ್ಶನ ಯೋಗ, ದೇಹೋತ್ಪತ್ತಿಕ್ರಮ, ದೇಹಸ್ವರೂಪ ವಿವೇಚನ ಜೀವಸ್ವರೂಪ ನಿರೂಪಣೆ, ಶಿವೋಪಾಸನಕ್ರಮ, ಮೋಕ್ಷಸ್ವರೂಪ, ಭಕ್ತಿಯೋಗ ಮೊದಲಾದ ವೇದಾಂತ ವಿಷಯಗಳನ್ನು ಉಪದೇಶಿಸಿ ಕೃತಾರ್ಥನನ್ನಾಗಿ ಮಾಡುತ್ತಾನೆ.[8] ಈ ಔಪಾಸನೆಗೆ

---

[7] ವೈ. ನಾಗೇಶಶಾಸ್ತ್ರಿ, ಪುರುಷಸೂಕ್ತ, ಪ್ರಸ್ತಾವನೆ xiv - xvi.

[8] ಶಿವಗೀತೆ – ಸಂಧಿ 4 ರಿಂದ 15 ರವರೆಗೆ.

ಭಕ್ತಿ ಅತ್ಯಂತ ಶ್ರೇಷ್ಠ ಸಾಧನ. ಸಾಧಾರಣನಿಗಂತೂ ಕರ್ಮ ಮತ್ತು ಜ್ಞಾನಮಾರ್ಗಗಳಿಗಿಂತ ಭಕ್ತಿಮಾರ್ಗ ಅತ್ಯಂತ ಅನುಕೂಲವಾದದ್ದು. ಬಸವಾದಿ ಪ್ರಮಥರು ತಿಳಿಸಿದ್ದುದೂ ಇದೇ ಹಾದಿಯನ್ನು. ಅದರಿಂದ ಲಭಿಸುವುದೇ ಸಚ್ಚಿದಾನಂದ ಸ್ವರೂಪವಾದ ಸ್ಥಿತಿ.

ಇಂತಹ ಹಲವು ಶಿವಾದ್ವೈತ ಸಿದ್ಧಾಂತದ ನಿರೂಪಣಾ ವಿಧಾನಗಳನ್ನೂ ದರ್ಶನವನ್ನೂ ಕೆಳದಿಯ ವೆಂಕಟಾದ್ರಿಭೂಪನು ಪುರಾಣಾಂತರ್ಗತವಾಗಿದ್ದರೂ ಪ್ರಜಾಕೋಟಿಗೆ ಕಾಣಿಕೆ ಕೊಡಿಸಿದ್ದಾನೆ. ಇದಿಷ್ಟೇ ಅಲ್ಲದೆ, ಅವನೇ ರಚಿಸಿದ ವೀರಮಹೇಶ್ವರಚಾರ ಸುಧಾವಾರ್ಧಿಯೂ, ಲಿಂಗಣ್ಣನ ಶಿವಪೂಜಾದರ್ಪಣವೂ ಸಂಗನಬಸವಪ್ಪನ ಕೃತಿಯೂ – ಈ ಶ್ರೇಷ್ಠ ಸಿದ್ಧಾಂತದ ಪ್ರತಿಪಾದಕಗಳಾಗಿವೆ. ಕೆಳದಿಯ ಆಸ್ಥಾನ ಸಾಹಿತ್ಯದಲ್ಲಿ ಬಹುಪಾಲು ಭಕ್ತಿ ಪ್ರತಿಪಾದಕವಾದ, ನೀತಿಬೋಧಕವಾದ, ಧರ್ಮಪರವಾದ, ಶುದ್ಧಸಾತ್ತ್ವಿಕತೆಯ ಮಂಗಳ ಸಾಹಿತ್ಯವು ನಿರ್ಮಾಣವಾಗಿದೆ. ಡಾ|| ಕಾಡದೇವರ ಮಠರವರು ಹೇಳಿರುವ ಮಾತುಗಳನ್ನು ಇಲ್ಲಿ ನೆನೆಯಬಹುದು.

"The Virashiva literature deals with the aspect of 'Bhakti' (Devotion) with a personal God. The Istalinga is god's form itself. Social equality, well being, solidarity, self-sufficiency, self-dignity, vegetarianism, in the strict sense of the word, the auspicious way of living and other virtues that appealed to a practical life, swayed over the masses and the rulers. The literature of the period is the voice of this new spirit both in form and content." [9]

ನಮ್ಮ ದೇಶದಲ್ಲಿ ಸಿಕ್ಕ ಪುಸ್ತಕಗಳಿಗಿಂತ ಸಿಕ್ಕದಿರುವ ಪುಸ್ತಕಗಳ ಸಂಖ್ಯೆಯೇ ಹೆಚ್ಚೆಂದು ತೋರುತ್ತದೆ. ಕೆಲವು ಗ್ರಂಥಗಳ ತುಣುಕು ಸಿಕ್ಕಿದರೆ, ಕೆಲವು ಮುಂದಿನ ಕವಿಗಳ ಹೇಳಿಕೆಗಳಲ್ಲಿ ತಮ್ಮ ಹೆಸರು ಉಳಿಸಿಕೊಂಡಿವೆ. ಮತ್ತೆ ಕೆಲವು ನಾಮಾವಶೇಷವೂ ಆಗಿವೆ. ಏನೇ ಇರಲಿ ಕೆಳದಿಯ ಆಸ್ಥಾನದಿಂದ ಹೊರಬಂದ ಹಲವಾರು ಕೃತಿಗಳಲ್ಲಿ ಕೆಲವಾದರೂ ಉಳಿದಿವೆ ಎಂದು ಹರ್ಷಿಸಬೇಕಾಗಿದೆ. ಕೆಳದಿಯ ಕೃತಿಗಳು ಮಹಾಕಾವ್ಯಗಳೆನಿಸಿಕೊಳ್ಳದಿದ್ದರೂ, ಕ್ಷುಲ್ಲಕವಾದವುಗಳಲ್ಲ; ಇಹ–ಪರಗಳ ಸೌಖ್ಯ–ಸಿದ್ಧಿಗಳಿಗೆ ಉಪಯುಕ್ತವಾಗುವಂತಹ ಕೃತಿರತ್ನಗಳು. ಒಟ್ಟಿನಲ್ಲಿ ವಿಪುಲವಾದ ಧಾರ್ಮಿಕ ಹಾಗೂ ನೀತಿಯುತ ಸಾಹಿತ್ಯವನ್ನಿತ್ತು, ಕೆಳದಿ ಕನ್ನಡಮ್ಮನ ಮಡಿಲು ತುಂಬಿದೆ; ಮುಡಿಯ ಸಿಂಗರಿಸಿದೆ.

---

[9] Kadadevara Math, Keladi, Literature.

ಆಸ್ಥಾನ ಸಾಹಿತ್ಯವು ಶ್ರೀಮಂತವಾಗಲು ಅಲ್ಲಿ ಆಗಾಗ ಸಮಾವೇಶ ಗೊಳ್ಳುತ್ತಿದ್ದ, ತನ್ನದೇ ಆದ, ಸಾಹಿತ್ಯ ಅಕಾಡಮಿಯೂ ಒಂದು ಕಾರಣವೆಂದು ಹೇಳಬಹುದು. ಗೊಟ್ಟಿ, ಅನುಭವ ಗೋಷ್ಠಿ, ಪರಿಷತ್, ಸತ್ಸಭೆ, ವಿದ್ವತ್ಸಭೆ, ಸಂಗಂ–ಇತ್ಯಾದಿ ಪರ್ಯಾಯನಾಮಗಳು ಅಂದಿನ 'ಅಕಾಡಮಿ'ಗೆ ಇದ್ದಿರಬೇಕು. ಪಂಡಿತ ರಿಗೆ, ವಿದ್ವಾಂಸರಿಗೆ, ಜ್ಞಾನ ಜಿಜ್ಞಾಸುಗಳಿಗೆ, ಅನುಭಾವಿಗಳಿಗೆ ಮೀಸಲಾದ 'ಅಕಾ ಡಮಿ'ಯು ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಅಸ್ತಿತ್ವದಲ್ಲಿತ್ತೆಂದು ತಿಳಿಯಲು ಹಲವು ಆಧಾರಗಳಿವೆ. ವಿದ್ಯಾ ವೈದುಷ್ಯದಲ್ಲಿ ಅತುಲನಾದ ಜನಕಮಹಾರಾಜನು ಪಂಡಿತೋತ್ತಮರಿಗೆ ಆಗಾಗ ಆತ್ಮಾನಾತ್ಮ ವಿಚಾರವನ್ನು ಕುರಿತು ಚರ್ಚಿಸುವ ವಾಡಿಕೆಯನ್ನಿಟ್ಟುಕೊಂಡಿದ್ದನು. ಇದು ಅಂದಿನ ಅಕಾಡಮಿಯಾಗಿದ್ದಿತೆನ್ನಬಹುದು. "ಕಾಶೀರಾಜನಾದ ಅಜಾತಶತ್ರುವು, ತಾನು ಮಹಾವಿದ್ಯಾವಂತನೂ, ಪಂಡಿತಾಶ್ರ ಯನೂ ಆಗಿರುತ್ತಿದ್ದರೂ, ಪಂಡಿತ ಪ್ರಕಾಂಡರೆಲ್ಲರೂ ಅವನನ್ನು ಬಿಟ್ಟು ಜನಕನ ಆಶ್ರಯವನ್ನು ಹೊಂದುತ್ತಿದ್ದುದಕ್ಕಾಗಿ ಕೊರತೆಪಟ್ಟುದು ಬೃಹದಾರಣ್ಯಕೋಪನಿಷತ್ತಿ ನಿಂದ ವ್ಯಕ್ತವಾಗುತ್ತದೆ."[1] ಇದರಿಂದ ವಿದೇಹದಲ್ಲಲ್ಲದೆ ಕಾಶಿಯಲ್ಲೂ ಒಂದು 'ಅಕಾ ಡಮಿ' ಇದ್ದಿತೆಂದು ತಿಳಿಯುತ್ತದೆ.

ಜನಕನ ಆಸ್ಥಾನದಲ್ಲಿ 'ಆಗಾಗ ಸಮಾವೇಶಗೊಳ್ಳುತ್ತಿದ್ದ ವಿದೇಹದ ವಿದ್ವನ್ಮಣಿ ಗಳನ್ನೊಳಗೊಂಡ' 'ಸಾಹಿತ್ಯ ಅಕಾಡಮಿ'ಯು ಆ ಕಾಲದ ಸಾಹಿತ್ಯ ಸಂಸ್ಕೃತಿಗಳನ್ನು ಸರಿಪಡಿಸಿಕೊಟ್ಟಿರುವುದು ಕಂಡುಬರುತ್ತದೆ. ಜನಕನ ಆಸ್ಥಾನದಲ್ಲಿ ಯಾಜ್ಞವಲ್ಕ್ಯ ವಾಜಸನೇಯನಿದ್ದುಕೊಂಡು ಆತನ ಕೀರ್ತಿಗೆ ಕಾರಣನಾಗಿದ್ದನು.[2] ಜನಕನ ನೆರವಿ ನಿಂದ ಈತನು ಯಜುರ್ವೇದವನ್ನು ತಿದ್ದುಪಡಿ ಮಾಡಿ, ಅದನ್ನು 'ಶುಕ್ಲ ಯಜುರ್ವೇದ' ಎಂದು ಕರೆದಿದ್ದಾನೆ.[3] 'ಶತಪಥ ಬ್ರಾಹ್ಮಣ'ದ ಬಹುಭಾಗವೂ ಈ ಯಾಜ್ಞವಲ್ಕ್ಯರ

---

[1] "ಜನರು ಜನಕನ ದಾನ ಶ್ರವಣೇಚ್ಛೆ ಮೊದಲಾದವುಗಳನ್ನು ಕೇಳಿ, ಅವನಿರುವಲ್ಲಿಗೆ ಓಡುತ್ತಾರೆ. ನನ್ನಲ್ಲಿಯೂ ಜನಕನ ಗುಣಗಳಿವೆ ಮತ್ತು ಅವುಗಳ ಪ್ರದರ್ಶನಕ್ಕೆ ಒಂದು ಅವಕಾಶವನ್ನು ಕಲ್ಪಿಸಿರುತ್ತೀಯೆ. ಆದುದರಿಂದ ಬ್ರಹ್ಮ ವಿಷಯವನ್ನು ಕೇಳುವುದಕ್ಕೆ ಮೊದಲೇ ಗೋಸಹಸ್ರವನ್ನು ಕೊಡುತ್ತೇನೆ" ಎಂದು ಅಜಾತಶತ್ರುವು ದುಪ್ತಬಾಲಾಕಿ ಎಂಬ ಹೆಸರಿನ ವಾಗ್ಮಿಯಾದ ಗಾರ್ಗ್ಯನಿಗೆ ಹೇಳಿದನು.

–ಬೃಹದಾರಣ್ಯಕೋಪನಿಷತ್, ಮಧುಕಾಂಡದ ಎರಡನೆಯ ಅಧ್ಯಾಯ, ಮೊದಲ ಬ್ರಾಹ್ಮಣ, ಮಂತ್ರ.1

[2] ಶತಪಥ XI.

[3] ಶುಕ್ಲ ಯಜುರ್ವೇದವನ್ನು ಈತನೇ ಪರಿಷ್ಕರಿಸಿ ಕ್ರಿ. ಪೂ. 3000ದ ಸುಮಾರಿನಲ್ಲಿ ಸಂಕಲನಗೊಳಿಸಿರಬಹುದೆಂದು ಶ್ರೀ ವೈದ್ಯರು ಅಭಿಪ್ರಾಯಪಡುತ್ತಾರೆ.

C. V. Vaidya, History of Sanskrit Literature, P. 135.

ರಚನೆ ಎಂದು ತಿಳಿದು ಬರುತ್ತದೆ.[4] ಜನಕನೂ ಯಾಜ್ಞವಲ್ಕ್ಯ ವಾಜಸನೇಯನೂ, ಶ್ವೇತಕೇತವೂ, ಸೋಮಸುಶ್ಮ ಮೊದಲಾದ ವಿದ್ವಾಂಸರೂ ವಿದೇಹದಲ್ಲಿ ಸೇರಿ, ಅಧ್ಯಾತ್ಮ ಸಾಹಿತ್ಯಕ್ಷೇತ್ರದಲ್ಲೂ ಕೃಷಿ ನಡೆಸಿದ್ದಾರೆಂದು ತಿಳಿಯುತ್ತದೆ.[5] ಇವರಷ್ಟೇ ಅಲ್ಲದೆ ಆಯಾಸ್ತುನ, ಸೌಲ್ವಾಯನ ಹಾಗೂ ಕವಸ ಮೊದಲಾದವರೂ ಗೋಷ್ಠಿಯಲ್ಲಿ ಭಾಗವಹಿಸುತ್ತಿದ್ದರೆಂದು ತಿಳಿಯುತ್ತದೆ.[6] ರಾಜರುಗಳಷ್ಟೇ ಅಲ್ಲದೆ, ಸ್ತ್ರೀಯರೂ ಸಹ ಸಾಹಿತ್ಯ, ಅಧ್ಯಾತ್ಮ ಹಾಗೂ ವಿಶಿಷ್ಟ ಜ್ಞಾನ ಇವುಗಳ ಬಗ್ಗೆ ಒಂದೆಡೆ ಕೂಡಿ ಜಿಜ್ಞಾಸೆ ನಡೆಸುತ್ತಿದ್ದರೆಂದು ಉಪನಿಷತ್ತುಗಳು ತಿಳಿಸುತ್ತವೆ. ಬೃಹದಾರಣ್ಯಕ ಉಪನಿಷತ್ತಿನಲ್ಲಿ ಬರುವ ವಚಕ್ನು ಪುತ್ರಿ ಗಾರ್ಗಿಯು ವಿಶ್ವಸೃಷ್ಟಿಯ ಮೂಲವನ್ನು ಕುರಿತು ಸುದೀರ್ಘವಾಗಿ ಪ್ರಶ್ನಿಸುತ್ತಾಳೆ ಯಾಜ್ಞವಲ್ಕ್ಯನನ್ನು. ಯಾಜ್ಞವಲ್ಕ್ಯನು ಆ ಬಗ್ಗೆ ಹೆಚ್ಚು ಪ್ರಶ್ನಿಸುವುದು ಉಚಿತವಲ್ಲ ಎನ್ನುತ್ತಾನೆ. ಆತನೆ ತನ್ನ ಪತ್ನಿ ಮೈತ್ರೇಯಿಗೆ ಆತ್ಮ ಜ್ಞಾನದ ಬಗ್ಗೆ ವಿವರಣೆ ನೀಡುತ್ತಿದ್ದನೆಂದೂ ತಿಳಿಯುತ್ತದೆ.[7]

ಜನಕನ ಆದರ್ಶ ಅನುಕರಣೆಗೆ ಯೋಗ್ಯವಾದುದು. ಆ ರಾಜರ್ಷಿ ತುಳಿದ ಮೆಟ್ಟಿಲುಗಳನ್ನೇ ಹಲವು ರಾಜರು ಮೆಟ್ಟಿ ಅಥವಾ ಮುಟ್ಟಿ ಖ್ಯಾತರಾದರು. ಅವನು ಆಗಾಗ ಸೇರಿಸುತ್ತಿದ್ದ ವಿದ್ವನ್ಮಣಿಗಳ ಸಭೆಯಂತೆ ಹಲವು ರಾಜರು ಜ್ಞಾನಗೋಷ್ಠಿಗಳನ್ನು ಸೇರಿಸುತ್ತಿದ್ದರು. ಅದು ಹಲವರಲ್ಲಿ ಪರಿಪಾಠವಾಗಿ ನಡೆದುಕೊಂಡು ಬಂದುದೂ ಉಂಟು. ಎಲ್ಲ ರಾಜರ ಆಸ್ಥಾನಗಳಲ್ಲೂ ಅಂತಹ ಗೋಷ್ಠಿ ಅಥವಾ ವಿದ್ವತ್‌ಸಭೆ ಸೇರುತ್ತಿದ್ದುದುಂಟು. ಜಯಾಪೀಡನೆಂಬ ರಾಜನು ದೇಶವಿದೇಶಗಳ ಪಂಡಿತರನ್ನು ಕರೆಸಿ, ಅವರಿಂದ ಮಹಾಭಾಷ್ಯಗಳನ್ನು ಬರೆಸುತ್ತಿದ್ದಾನೆಂದು ರಾಜತರಂಗಿಣಿ ತಿಳಿಸುತ್ತದೆ.[8] ಆದ್ದರಿಂದ, "ಕವಿಮೇಳವನ್ನೇರ್ಪಡಿಸುವುದು ರಾಜನ ಕರ್ತವ್ಯವಾಗಿದ್ದಿತು. ರಾಜನು ಕವಿಯೂ ಆಗಿದ್ದಲ್ಲಿ ಆವರಿಗಾಗಿ ಪ್ರತ್ಯೇಕ ಭವನವೊಂದನ್ನು

---

[4] 'ಶತಪಥ ಬ್ರಾಹ್ಮಣದ ಮೊದಲ ಐದು ಕಾಂಡಗಳು ಯಾಜ್ಞವಲ್ಕ್ಯ ಕಾಂಡವಾಗಿವೆ'- ಎನ್. ಎಸ್. ಅನಂತರಂಗಾಚಾರ್, ವೈದಿಕ ಸಾಹಿತ್ಯ ಚರಿತ್ರೆ, ಪು. 406.

[5] R. C. Dutt, Ancient India, Chptr, III, P. 141-146.

[6] M. Winternitz, Indian Lit. Vol. I, P. 228; ಐತ್ತರೇಯ ಬ್ರಾಹ್ಮಣ II, 19.

[7] ಬೃಹದಾರಣ್ಯಕ. III, 6 ; III, 8 ; II, 4 ಮತ್ತು IV. 5.

[8] ಕಲ್ಹಣ 'ರಾಜತರಂಗಿಣಿ' IV 488 (ಪು. 164) ಸಂ. ವಿಶ್ವಬಂಧು, 'ವಿಶ್ವೇಶ್ವರಾನಂದ ವೈದಿಕಶೋಧನ ಸಂಸ್ಥಾನ'-ಹೋಷಿಯಾರ ಪುರ, Part I, 1963 and Part II 1965.

ನಿರ್ಮಿಸುತ್ತಿದ್ದ. ಅಲ್ಲಿ ವಿದ್ವಾಂಸರೂ, ಸಂಗೀತಗಾರರೂ, ನಟರೂ, ನೃತ್ಯಕಾರರೂ ಸೇರುತ್ತಿದ್ದರು. ವಾಸುದೇವ, ಶಾಸವಾಹನ, ಶೂದ್ರಕ ಈ ರಾಜರುಗಳು ಪ್ರಾಯಶಃ ಅಂತಹ ಅಕಾಡಮಿಗಳನ್ನು ಪ್ರತಿಷ್ಠಾಪಿಸಿದ್ದಿರಬಹುದು. ಈ ಕಾರಣದಿಂದಲೇ ಮಹಾ ರಾಜರುಗಳಿದ್ದ ರಾಜಧಾನಿಗಳು ಮಹಾವಿದ್ವಾಂಸರನ್ನು ಪಡೆದು ಬೆಳಗಿದುವು. ಹೀಗೆಯೇ ಕಾಳಿದಾಸ ಮೇಂಠ, ಅಮರ, ರೂಪ, ಸೂರ, ಭಾರವಿ, ಭಟ್ಟಾರ, ಹರಿಚಂದ್ರ ಮತ್ತು ಚಂದ್ರಗುಪ್ತರುಗಳು ಉಜ್ಜನಿಯಲ್ಲಿ ಪ್ರಕಾಶಗೊಂಡುದು. ಅಂತೆಯೇ ಉಪವರ್ಷ, ವರ್ಷ ಪಾಣನಿ, ಪಿಂಗಳ, ವ್ಯಾಡಿ, ವರರುಚಿ, ಪತಂಜಲಿ ಮೊದಲಾದವರು ಪಾಟಲೀಪುತ್ರದಲ್ಲಿ ಬೆಳಗಿದರು.

ಮೌರ್ಯರು ಸಂಗೀತ, ನೃತ್ಯ, ಅಭಿನಯ ಮೊದಲಾದ ಕಲೆಗಳಿಗೆ ದೇಶದ ಕಂದಾಯದಿಂದ ತೆಗೆದು ಸಹಾಯಧನದ ರೂಪದಲ್ಲಿ ನೆರವು ನೀಡುತ್ತಿದ್ದರೆಂದು ಅರ್ಥ ಶಾಸ್ತ್ರ ಹೇಳುತ್ತದೆ. ರಾಜರು ಆಗಾಗ ದೊಡ್ಡ ದೊಡ್ಡ ವಿದ್ವಾಂಸರನ್ನು, ಕವಿಗಳನ್ನು ಒಂದೆಡೆ ಸೇರಿಸಿ, ಸ್ಪರ್ಧೆಯಲ್ಲಿ ಭಾಗವಹಿಸುವಂತೆ ಮಾಡಿ 'ರಾಷ್ಟ್ರಕವಿ' ಗಳೆಂದು ಗೆದ್ದವರನ್ನು ಸನ್ಮಾನಿಸುತ್ತಿದ್ದುದುಂಟು. ಜಯಚಂದ್ರನ ಆಸ್ಥಾನದಲ್ಲಿ ತನಗಾಗಿ ಒಂದು ಪೀಠವು ಮೀಸಲಿತ್ತೆಂದೂ, ರಾಜನಿಂದ ಅವನಿಗೆ ವೀಳ್ಯವಿತ್ತೆಂದೂ, ಶ್ರೀ ಹರ್ಷನು ಹೇಳಿಕೊಂಡಿದ್ದಾನೆ." [9] ಇದೇರೀತಿ, ಜಯಾಪೀಡನೂ ಕವಿಗಳಿಗೆ ಅತ್ಯಂತ ಮಹತ್ವದ ಸ್ಥಾನ ಕೊಟ್ಟಿದ್ದಕ್ಕೆ ಸಾಕಷ್ಟು ವಿವರಣೆ ಸಿಗುತ್ತದೆ. [10] ಕ್ಷೀರಾ ಎಂಬುವನಿಂದ ಶಬ್ದವಿದ್ಯೆಯನ್ನು ಕಲಿತು, ಜ್ಞಾನಿಯಾಗಿ ಜಯಾಪೀಡರಾಜ ಜಯಾಪೀಡಪಂಡಿತನೆನಿಸಿಕೊಂಡನಂತೆ. ಇಂತಹ ಪರಿಷತ್‌ಗಳಿಂದಲಭಿಸುತ್ತಿದ್ದ ಲಾಭ ಗಳಲ್ಲಿ ಇದೂ ಒಂದು.

ಇಂತಹ ಹಲವು ಪರಿಷತ್‌ಗಳು ಆಗಾಗ ಕಾಶ್ಮೀರದಲ್ಲೂ ಸೇರುತ್ತಿದ್ದುವೆಂದು ಪ್ರತೀತಿ ಇದೆ.

ಪ್ರಾಚೀನ ತಮಿಳನಾಡಿನ ಪ್ರಸಿದ್ಧ ಸಾಹಿತ್ಯ ಅಕಾಡಮಿ ಎಂದರೆ 'ಸಂಗಂ'. ಪ್ರಪಂಚದಲ್ಲೇ ಬಹುದೊಡ್ಡ ಅಕಾಡಮಿ ಎಂದು ಹೇಳಬಹುದು. ಇದು ಒಂದು ಸುವ್ಯವಸ್ಥಿತ ಸಂಸ್ಥೆಯಾಗಿದ್ದಿತೆಂದು ಕ್ರಿ. ಶ. ೧೦ನೆಯ ಶತಮಾನದ ಪಾಂಡ್ಯರಾಜ ರಾಜಸಿಂಹನ ಶಿನ್ನಮನ್ನೂರು ಶಾಸನವು [11] ತಿಳಿಸಿದರೂ ಆದರ ಜನನ ಮತ್ತು

[9] S. N. Dasgupta, A History of Sanskrit Literature Classicical period) Vol. I, introduction P. LVIII.

[10] ಕಲ್ಹಣ, ರಾಜತರಂಗಿಣಿ, 495 497.

[11] S. I. I. Vol. III, Pt. IV, P. 454.

ನಾಮಕರಣಗಳ ಬಗ್ಗೆ ಸರಿಯಾದ ಜಾತಕ ಸಿಕ್ಕಿಲ್ಲ. "ಸಂಗಂ" ಎಂಬರ್ಥದಲ್ಲಿ ತೊಗೈ, ಕೂದಲ್, ಅವೈ, ಕಲಗಮ್ ಮೊದಲಾದ ಪದಗಳು ಬಂದಿವೆ. ಮಣಿಮೇಖಲೈನಲ್ಲಿ ಗೋಷ್ಠಿ ಎಂಬರ್ಥದಲ್ಲಿ ಈ ಸಂಗಂ ಪದ ಬಳಕೆಯಾಗಿದೆ.[12] ಒಟ್ಟಿನಲ್ಲಿ ಸಂಗಂ ರಾಜ ಮಹಾರಾಜರುಗಳಿಂದ ಪ್ರೋತ್ಸಾಹಿಸಲ್ಪಟ್ಟ ಒಂದು ವಿದ್ವಾಂಸಗೋಷ್ಠಿ ಇಲ್ಲವೇ ಕವಿಮೇಳ ಅಥವಾ ಪಂಡಿತ ಪರಿಷತ್.[13]

ಕ್ರಿಸ್ತಪೂರ್ವದಿಂದಲೂ, ತಮಿಳುನಾಡಿನಲ್ಲಿ ಆಗಾಗ ಕೂಡಿ, ಬಹಳ ವರ್ಷಗಳ ವರೆಗೆ ನಡೆಯುತ್ತಿದ್ದ ಈ ಸಂಗಂ ಸಂಖ್ಯೆ ಆರು. ಆದರೂ ತಲೈಚ್ಚಂಗಂ (ಆದಿ), ಇಡೈಚ್ಚಂಗಂ (ಮಧ್ಯ), ಕಡೈಚ್ಚಂಗಂ (ಅಂತ್ಯ)–ಎಂದು ಮೂರು 'ಸಂಗಂ ಗೋಷ್ಠಿ' ಗಳು ಪ್ರಸಿದ್ಧವಾಗಿವೆ.

ಈ ಸಂಗಂನಂತೆ ತೆಲುಗಿನಲ್ಲಿ ಸತ್ಸಭೆಗಳೂ, ಕನ್ನಡದಲ್ಲಿ ಗೊಟ್ಟಿ ಅಥವಾ ಗೋಷ್ಠಿಗಳೂ ಇರುವುದು ಕಂಡುಬರುತ್ತದೆ. ತೆಲುಗಿನ ಆದಿಕವಿ ನನ್ನಯ್ಯನು 'ಸತ್ಸಭೆ' ಯನ್ನು ಹೆಸರಿಸಿದ್ದಾನೆ.[14] ಇದು ಶ್ರೀ ಕೃಷ್ಣದೇವರಾಯನು ವಿದ್ಯಾವಿನೋದಗಳಿಗಾಗಿ 'ಭುವನವಿಜಯ'ವೆಂಬ ವಿದ್ವಾಂಸರ ಗೋಷ್ಠಿಗಾಗಿಯೇ ಮೀಸಲಾದ ಸ್ಥಳವನ್ನೇರ್ಪಡಿಸಿ, ಅಲ್ಲಿ ಅಷ್ಟದಿಗ್ಗಜಗಳ[15] ಮಹಾಮೇಳವನ್ನು ನಡೆಸುತ್ತಿದ್ದನು. ಕನ್ನಡದ ಆದಿ ಕವಿ ಪಂಪನೂ ಸಹ 'ಚಾಗದ ಭೋಗದಕ್ಕರದ ಗೇಯದ, ಗೊಟ್ಟಿಯಲಂಪಿನಿಂಪುಗಳ್ಗಾಗರಮಾದ ಮಾನಸರೆ ಮಾನಸರ್....' ಎಂದು ಹೇಳುವಾಗ 'ಗೊಟ್ಟಿ' ಯನ್ನು ಹೇಳುತ್ತಾನೆ[16] ಇದು ಕವಿಕಲಾವಿದರ, ರಸಿಕರ, ವಿದ್ವಾಂಸರ ಗೋಷ್ಠಿ ಇದ್ದಿರಬೇಕು.

---

[12] V. R. R. Dikshitar, Tamil Studies, P. 22,

[13] ಪ್ರೊ. ‖ ಸುಂದರಂ ಪಿಳ್ಳೆಯವರ ಹೇಳಿಕೆಯನ್ನು ಉದ್ಧರಿಸುತ್ತಾ ಪೂರ್ಣಲಿಂಗಂ ಪಿಳ್ಳೆಯವರು ಈಗಿನ ಕಾಲೇಜುಗಳ ಮಾದರಿಯಲ್ಲಿತ್ತೆಂಬ ಅಭಿಪ್ರಾಯವನ್ನು ಒಪ್ಪದೆ ತಮ್ಮ ಸಂದೇಹವನ್ನು ವ್ಯಕ್ತಪಡಿಸಿದ್ದಾರೆ

Poornalingam Pillai, A Tamil Literature, PP. 14-15.

[14] ನನ್ನಯ್ಯ, ಶ್ರೀಮದಾಂಧ್ರಭಾರತಮ್, ಪು. 1, ಆರುದ್ರ, ಸಮಗ್ರಾಂಧ್ರ ಸಾಹಿತ್ಯಂ ಸಂಪುಟ I ಪು. 109.

[15] ಆಂಧ್ರ ಸಾಹಿತ್ಯ ವೃದ್ಧಿಯನ್ನು ಹೊತ್ತುಸಿಂದ ಅಷ್ಟದಿಗ್ಗಜಗಳು–1) ಅಲ್ಲಸಾನಿ ಪೆದ್ದನ, 2) ನಂದಿತಿಮ್ಮನ, 3) ಅಯ್ಯಲರಾಜು ರಾಮಭದ್ರಯ್ಯ, 4) ಧೂರ್ಜಟಿ, 5) ಮಾದೈಗಾರಿಮಲ್ಲನ, 6) ಪಿಂಗಳಸೂರನ್ನ, 7) ರಾಮರಾಜಭೂಷನ, ತೆನ್ನಾಲಿ ರಾಮಕೃಷ್ಣ–ಆದರೆ ಕಡೆಯ ಮೂವರೂ ಇವನ ಕಾಲದವರಲ್ಲ.

[16] ಪಂಪ, ವಿಕ್ರಮಾರ್ಜುನವಿಜಯ, ಆಶ್ವಾಸ 4, ಪುಟ. 29.

ಕಲ್ಯಾಣದಲ್ಲಿ ಅಣ್ಣನು ಸ್ಥಾಪಿಸಿದ 'ಅನುಭವ ಮಂಟಪ' ಲೋಕವಿಖ್ಯಾತವಾದ ಒಂದು ಅಕಾಡಮಿ. ಅನುಭವಮಂಟಪದಲ್ಲಿ ಕವಿ ಹೃದಯವುಳ್ಳ ಅನುಭಾವಿಗಳ ಗೋಷ್ಠಿ ನಿತ್ಯವೂ ನಡೆಯುತ್ತಿದ್ದಿತು. ಈ ರೀತಿ ರಾಜರ ಪೋಷಣೆಯಿಂದ ನಡೆಯುತ್ತಿದ್ದ ಗೋಷ್ಠಿಯೊಂದು ಕೆಳದಿಯಲ್ಲಿದ್ದುದು ಕಂಡುಬರುತ್ತದೆ.[17]

ಹಿರಿಯ ವೆಂಕಟಪ್ಪನಾಯಕನು ಇಕ್ಕೇರಿಯಲ್ಲಿ ಕಟ್ಟಿಸಿದ 'ನಾಟಕಶಾಲೆ' ಕೇವಲ ಒಂದು ನಾಟಕರಂಗಭೂಮಿಯಾಗಿರಲಿಕ್ಕಿಲ್ಲ. ನಾಟಕ, ನೃತ್ಯ, ಮೊದಲಾದ ಮನ ರಂಜನಾ ಕಾರ್ಯಕ್ರಮಗಳು ಅಲ್ಲಿ ನಡೆಯುತ್ತಿದ್ದರೂ ಅದು ವಿಶೇಷವಾಗಿ ಕವಿ, ಕಲಾ ವಿದರ, ಪಂಡಿತರ ಸಮಾವೇಶಕ್ಕಾಗಿ ಮೀಸಲಿದ್ದ ಮಹಾಮಂದಿರ ಎಂದು ಹೇಳ ಬಹುದು.[18] ಪ್ರಾಚೀನ ತಮಿಳಿನ ಅಕಾಡಮಿ ಸಂಗಂ ಸೇರುತ್ತಿದ್ದ ಸ್ಥಳ 'ಸಂಗಂಶಾಲೆ' ಯೆಂದೆನಿಸಿದಂತೆ, ಅನುಭಾವಿಗಳು ಕೂಡುವ ಮಂಟಪಕ್ಕೆ 'ಅನುಭವಮಂಟಪ' ಎಂದಂತೆ, ಆಂಧ್ರಭೋಜ ಕೃಷ್ಣದೇವರಾಯನ ಆಸ್ಥಾನದ ವಿದ್ವನ್ಮಂಡಳಿಯು ಸೇರುತ್ತಿದ್ದ ಭವನಕ್ಕೆ 'ಭುವನವಿಜಯ' ಎಂದು ಕರೆದಂತೆ, ಕೆಳದಿಯನ್ನಾಳಿದವರ ಆಶ್ರಯದಲ್ಲಿ-ಅದರಲ್ಲೂ ಕರ್ಣಾಟಕದ ನವಭೋಜನಾದ ಹಿರಿಯ ವೆಂಕಟಪ್ಪನಾಯಕನ ಆಳ್ವಿಕೆಯಲ್ಲಿ ಪಂಡಿತರು ಹಾಗೂ ವಿದ್ವನ್ಮಣಿಗಳು ಇಕ್ಕೇರಿಯಲ್ಲಿ ಸೇರುತ್ತಿದ್ದ ಸ್ಥಳವನ್ನು 'ನಾಟಕ ಶಾಲೆ' ಯೆಂದು ಹೆಸರಿಸಿರಬಹುದು. ಇದು ಒಂದು ಕಲಾಗಾರವಾಗಿದ್ದು, ಕನ್ನಡ ಕಲೆಗೆ ಚೈತನ್ಯಸ್ವರೂಪವಾಗಿದ್ದಿರಬಹುದು. ಅಂತೂ ಕೆಳದಿ ತನ್ನ ವೈಭವದ ದಿನಗಳಲ್ಲಿ ತನ್ನದೇ ಆದ ಒಂದು ಸಾಹಿತ್ಯ ಅಕಾಡಮಿಯನ್ನು ಹೊಂದಿದ್ದುದು ಪ್ರಶಂಸನೀಯವಾದ ವಿಷಯವಾಗಿದೆ.

ಕೆಳದಿಯ ಕಲಾಸೇವೆ ಸಾಹಿತ್ಯಕ್ಕೆ ಸೀಮಿತವಾಗಿಲ್ಲ. ಕೋಟೆಕೊತ್ತಲಗಳ ರಚನೆಯಂತಹ ಉಪಯುಕ್ತ ಕಲೆಯೂ, ನೃತ್ಯ, ಚಿತ್ರ, ಶಿಲ್ಪ, ಸಂಗೀತಾದಿ ಲಲಿತ ಕಲೆಗಳೂ, ವಿಶಿಷ್ಟಶೈಲಿಯ ವಾಸ್ತುಶಿಲ್ಪವೂ, ಹಲವು ವೈಜ್ಞಾನಿಕ ವಿಧಾನಗಳೂ, ಬೆಳಕು ಕಂಡಿವೆ. ಈಗಿನ ಹಳೇನಗರದ ಸಮೀಪದಲ್ಲಿರುವ 'ದೀಪಗಂಗಾ ಕೊಳಗಳೂ', ಘಳಿಗೆಬಟ್ಟಲೂ' ಕೆಳದಿಯವರ ವಿಜ್ಞಾನ ಪ್ರಗತಿಗೆ ನಿಂತ ಸಾಕ್ಷಿಯಾಗಿದ್ದರೆ, ಕೆಳದಿ

---

17 ಮೊದಿಯ ರುದ್ರನು 'ವಿರಕ್ತರ' ಕಾವ್ಯವನ್ನು ರಚಿಸಲು ಕೆಳದಿಯ ಶಿವಭಕ್ತ ಕೂಟ ಕಾರಣವೆಂದು ತಿಳಿಸುತ್ತಾನೆ. Supra, ಕೆಳದಿಯ ಕೆಲವು ಕವಿಗಳ ವಿಚಾರ : ಕೆಳದಿಯ ಇತರ ಕವಿಗಳು – ವಿಭಾಗ ನೋಡಿ.

18 ಶಿವತತ್ತ್ವರತ್ನಾಕರವು ವೆಂಕಟಾದ್ರಿಭೂಪನು 'ಆಶ್ಚರ್ಯಚಕಿತವಾದ ಅರಮನೆ ಯನ್ನೂ, ನಾಟಕಶಾಲೆಯನ್ನೂ ಕಟ್ಟಿಸಿದನೆಂದು VI, I, 4ನೇ ಶ್ಲೋಕದಲ್ಲಿ ಹೇಳಿ ಮುಂದಿನ 5ನೆಯ ಶ್ಲೋಕದಲ್ಲಿ 'ವಿದ್ವಾಂಸರಿಂದ ಸದ್ಗ್ರಂಥಗಳನ್ನು ಬರೆಸಿದ ಎಂದು ತಿಳಿಸುತ್ತದೆ. ನಾಟಕ ಪ್ರದರ್ಶನವಿತ್ತೆಂದು ಹೇಳುವುದಿಲ್ಲ. ಆದ್ದರಿಂದ ನಾಟಕಶಾಲಾ ನಾಟಕರಂಗಭೂಮಿ ಯಲ್ಲ; ಅದು ಒಂದು ಸಾಹಿತ್ಯ ಅಕಾಡಮಿ ಸೇರುತ್ತಿದ್ದ ಭವನ ಎಂದು ಊಹಿಸಲಾಗಿದೆ.

ಶ್ರೀ, ವೀರಭದ್ರಸ್ವಾಮಿ ದೇವಾಲಯದಲ್ಲಿರುವ ಗಂಡಭೇರುಂಡವೂ, ಇಕ್ಕೇರಿಯ ಅಘೋರೇಶ್ವರ ಸ್ವಾಮಿಯ ಮುಂಭಾಗದಲ್ಲಿ ಮಂಡಿತನಾಗಿರುವ ವೃಷಭನೂ, ಬಿದನೂರಿನ (ಹಳೇನಗರದ) ಕೆರೆ ಹಿಂಭಾಗದ ತೋಟದಲ್ಲಿಗುವ ಹಾಳು ಮಂಟಪದಲ್ಲಿ ಶೋಭಿಸುವ ಕಲಾಪ್ರತಿಮೆಗಳೂ ಅವರ ಶಿಲ್ಪ ಚಾತುರ್ಯದ ಹೆಗ್ಗುರುತುಗಳಾಗಿವೆ. ಅಂತೆಯೇ ಅವರು ಕಟ್ಟಿಸಿದ ಅರಮನೆ, ಛತ್ರ, ಮಠ ಮತ್ತು ದೇವಾಲಯಗಳು ಅವರ ವಾಸ್ತುಶಿಲ್ಪಕ್ಕೆ ನಿದರ್ಶನಗಳಾಗಿವೆ.

"ಕೆಳದಿ ನಾಯಕರು ಧಾರ್ಮಿಕ ಮತ್ತು ಲೌಕಿಕ ವಾಸ್ತುಶಿಲ್ಪದ (ರಕ್ಷಣಾ ಸಂಬಂಧವಾದ ಕಟ್ಟಡಗಳನ್ನೊಳಗೊಂಡು) ಅಭಿವೃದ್ಧಿಗೆ ಸಲ್ಲಿಸಿದ ಕೊಡುಗೆ ಸಾಮಾನ್ಯವಾದುದಲ್ಲ.... ಕೆಳದಿ ನಾಯಕರು ವಿಜಯನಗರದ ದೇವಾಲಯ ವಾಸ್ತುಶಿಲ್ಪದ ವೈಶಿಷ್ಟ್ಯಗಳನ್ನು ಉಳಿಸಿಕೊಂಡು ಬಂದರು. ವಾಯುಗುಣ ಮತ್ತು ಭೌಗೋಳಿಕ ಪರಿಸರಕ್ಕನುಗುಣವಾಗಿ ವಾಸ್ತುಶಿಲ್ಪದಲ್ಲಿ ಅವಶ್ಯವೆನಿಸಿದ ಬದಲಾವಣೆಗಳನ್ನು ಮಾಡಿದರು. ನವರಂಗವು ಸಾಮಾನ್ಯವಾಗಿ ಸಾದಾ ರೀತಿಯಲ್ಲಿ ಆಯತಾಕಾರವಾಗಿ (Rectangular) ಇರುವಂತೆಯೇ ಇದೆ. ಆದರೆ ನವರಂಗವು ಸ್ವಲ್ಪಮಟ್ಟಿಗೆ, ಇಲ್ಲವೆ ಸಂಪೂರ್ಣವಾಗಿ ತೆರೆದಿಡಲ್ಪಟ್ಟಿಲ್ಲ. ಅದು ಎಲ್ಲ ಕಡೆಗಳಿಂದಲೂ ಶಿಲಾಫಲಕಗಳಿಂದ ಆವೃತವಾಗಿದೆ. ಈ ತರಹದ ರಚನೆಯಿಂದಾಗಿ ಮಳೆ ನೀರು ಒಳಭಾಗದಲ್ಲಿ ಬರದಂತಾಗಿದೆ. ನವರಂಗಕ್ಕೆ ಹೋಗಲು ಮೂರು ದ್ವಾರಗಳನ್ನು ರಚಿಸಲಾಗಿದೆ. ಕಟ್ಟಡದ ಮುಂಭಾಗದ ಕೆಳಗಡೆಯಲ್ಲಿ ಚಿಕ್ಕ ಪ್ರಮಾಣದ ಶಿಖರದ ವಿನ್ಯಾಸ ಅಲಂಕಾರವಿದೆ. ಅಲ್ಲಿಯ ರಂಧ್ರಸಹಿತವಾದ ಕಿಟಿಕಿಗಳಿಂದ ಒಳಭಾಗಕ್ಕೆ ಬೆಳಕು ಬರುತ್ತದೆ. ಜಂಘವೂ ಸಹ ಹೂವಿನ ಮತ್ತು ವೃತ್ತಾಕೃತಿಗಳುಳ್ಳ ಚಿತ್ರ ಕೆಲಸದಿಂದ ಅಲಂಕೃತವಾಗಿದೆ. ಚಜ್ಜಕ್ಕೆ ಆಧಾರವಾಗಿರುವ ಕಲ್ಲಿನ ತೊಲೆಯು ಮರಗೆಲಸದ ಮಾದರಿಯಲ್ಲಿದೆ. ಇದು ಮಲೆನಾಡಿನಲ್ಲಿ ಸಾಮಾನ್ಯವಾಗಿ ರೂಡಿಯಲ್ಲಿದೆ.

ಗರ್ಭಗೃಹದ ಶಿಖರವು ದ್ರಾವಿಡ ಶೈಲಿಯಲ್ಲಿ ರಚಿಸಲ್ಪಟ್ಟಿದೆ. ಆದರೆ ನವರಂಗವು ಸಪಾಟಾದ ಮೇಲ್ಛಾವಣಿಯಿಂದ ಕೂಡಿದೆ. ವಿಜಯನಗರದ ದೇವಾಲಯಗಳನ್ನು ಗ್ರೆಸ್ಬೈಟ್ ಕಲ್ಲಿನಲ್ಲಿ ಕಟ್ಟಿದಹಾಗೆ ಕೆಳದಿ ಇಕ್ಕೇರಿಯ ದೇವಾಲಯಗಳನ್ನು ಸಹ ಅದೇ ಕಲ್ಲಿನಲ್ಲಿ ಕಟ್ಟಲಾಗಿದೆ.

ಶಿವಪ್ಪನಾಯಕನ ಅರಮನೆಯ ಕೆಲವು ಭಾಗ ಮರದಿಂದ ಮತ್ತು ಕೆಲವು ಭಾಗ ಲ್ಯಾಟರೈಟ್ ಕಲ್ಲಿನಿಂದ ಕಟ್ಟಲ್ಪಟ್ಟಿದೆ. ಇದು ಮಧ್ಯಯುಗದ ಗೃಹವಾಸ್ತು

ಶಿಲ್ಪದ ಒಂದು ನಮೂದರಿಯಾಗಿದೆ.[19] ಹೊಯ್ಸಳ ಮತ್ತು ದ್ರಾವಿಡ ಶಿಲ್ಪ ಶೈಲಿಗಳ ಸುಂದರ ಸಂಯೋಜನೆಯಿಂದ ಕೂಡಿದ 'ಇಕ್ಕೇರಿ ಶೈಲಿ' ಎಂಬ ತನ್ನದೇ ಆದ ಒಂದು ಕಲಾಪ್ರಸ್ಥಾನವನ್ನು ಸ್ಥಾಪಿಸಿದ್ದಾರೆ. ಅಂದಚಂದದ ಆಭರಣಗಳ ನಿರ್ಮಿತಿಯಲ್ಲಿ ಅವರ ಕಲಾಭಿಜ್ಞತೆಯನ್ನು ಮೆರೆದಿದ್ದಾರೆ.

ನೃತ್ಯ, ಚಿತ್ರ, ಸಂಗೀತ ಕಲೆಗಳಲ್ಲೂ ಕೆಳದಿಯವರು ತುಂಬಾ ಪಳಗಿದವರು. ಹಿರಿಯ ವೆಂಕಟಪ್ಪನ ಬಳಿಗೆ ಬಂದಿದ್ದ ಇಟಲಿಯ ಪ್ರವಾಸಿ ಪೀಟ್ರೊಡೆಲ್ಲಾವಲ್ಲಿಯು ದೇವಾಲಯಗಳಲ್ಲಿ ಸಂಗೀತ, ನರ್ತನಾದಿಗಳು ನಡೆಯುತ್ತಿದ್ದುವೆಂದು ತಿಳಿಸಿದರೆ,[20] ವೀರಭದ್ರನಾಯಕನ ಆಸ್ಥಾನಕ್ಕೆ ಬಂದಿದ್ದ ಪೀಟರ್ ಮುಂಡಿಯು ತಾಳಮೇಳಗಳಿಂದ ಕೂಡಿದ ಸ್ತ್ರೀ ಪುರುಷರು ಜೊತೆಯಲ್ಲಿ ಕುಣಿದ ಹಲವು ಬಗೆಯ ನರ್ತನರೂಪಗಳನ್ನು ಕಂಡುದಾಗಿ ಹೇಳಿಕೊಂಡಿದ್ದಾನೆ.[21] ಬಹುಶಃ, ಹಬ್ಬ ಹರಿದಿನಗಳಲ್ಲಿ, ಜಾತ್ರೆಗಳಲ್ಲಿ ಇದು ವಿಶೇಷವಾಗಿ ನಡೆಯುತ್ತಿದ್ದಿರಬಹುದು. ದೊಡ್ಡಸಂಕಣ್ಣನು ಪೈಠಣದಲ್ಲಿ ಅಘೋರ ಮೂರ್ತಿಯನ್ನು ಕಾಗದದಲ್ಲಿ ಚಿತ್ರಿಸಿಕೊಂಡು ಬಂದು,[22] ಅದರಂತೆಯೇ ಇಕ್ಕೇರಿಯಲ್ಲಿ ನಿರ್ಮಾಣ ಮಾಡಿಸಿದುದು ಕೆಳದಿ ಅರಸರ ಚಿತ್ರ ಕಲಾಚಾತುರ್ಯವನ್ನು ತಿಳಿಸುತ್ತದೆ. ಲಿಂಗಣ್ಣ ಕವಿಯ ದಕ್ಷಾಧ್ವರ ವಿಜಯದಲ್ಲಿ ಬರುವ ಸಂಗೀತದ ವರ್ಣನೆ ಹಾಗೂ ಅಪ್ಪಯ್ಯ, ವೆಂಕಟ ಇವರ ಮನೋಹರವಾದ ರಾಗ ರಾಗಿಣಿಯರಿಂದ ಕೂಡಿದ ಹಾಡುಗಳೂ ಕೆಳದಿಯವರ ಸಂಗೀತ ಪರಿಣತಿಗೆ ಸಾಕ್ಷಿಯಾಗಿವೆ.

ಧರ್ಮಪ್ರಭು ಹಿರಿಯ ಬಸವರಾಜನು ಪ್ರಸಿದ್ಧ ವೀಣಾವಾದನಪಟುವೂ ಆಗಿದ್ದಾನೆ. ಕೆಳದಿಯ ಕವಿ ಮರಿತೋಂಟದಾರ್ಯನು ತನ್ನ ವೀರಶೈವಾನಂದ ಚಂದ್ರಿಕಾ ಎಂಬ ಸಂಸ್ಕೃತ ಗ್ರಂಥದಲ್ಲಿ ಬಸವರಾಜನ ಗುಣಕಥನ ಮಾಡುತ್ತಾ – "ನಾನಾಧೀಶ ಸಮಾಗತಾನ್, ನೀತಿ ಕವಿವರಾನ್, ಷಟ್‌ಶಾಸ್ತ್ರವೇತ್ತ್ರನ್, ಬುಧನ್, ನೀತಿಜ್ಞಾನಂ ಅಪಿವೈಣಿಕಾನ್ – ಸಮುಚಿತೈಃ ವಾಚಾಂ ಪ್ರಪಂಚ್ಯೈಸ್ಸ್ವಯಂ ತತ್ತ್ವಚ್ಛಾಸ್ತ್ರ ರಹಸ್ಯ ತತ್ತ್ವಕಲನಾ ಸಂಚೂಚಕೈಃ ಪ್ರೀಣಯನ್ ಇಷ್ಟಾರ್ಥಪಣ

---

[19] 'ಲೋಥೆಲ್ ಭೂಉತ್ಖನನದಿಂದ, ಭಾರತೀಯರಿಗೆ – ಅತ್ಯಂತ ಪ್ರಾಚೀನ (ಅಂದರೆ ಹರಪ್ಪಾ, ಮೊಹೆಂಜದಾರೋಗಳಿಗಿಂತಲೂ ಪುರಾತನವಾದ) ಹಿರಿದಾದ ಸಂಸ್ಕೃತಿ ಇತ್ತೆಂದು ತೋರಿಸಿಕೊಟ್ಟ, ಭೂಸಂಶೋಧನತಜ್ಞ, ಇತಿಹಾಸಜ್ಞ ಶಿಕಾರಿಪುರದ ರಂಗನಾಥ ರಾವ್‌ರವರು 18 ಮೇ 1969 ರಂದು ಶಿವಮೊಗ್ಗೆಯಲ್ಲಿ ನಡೆದ ಕೆಳದಿ ಇತಿಹಾಸ ಸಮ್ಮೇಳನದ ಅಧ್ಯಕ್ಷ ಭಾಷಣದಿಂದ – ಪು. 26 – 28.

[20] Della Valle, Travels, II P. P. 283 – 284.

[21] Mundy, Travels, III, Pt. I, PP. 83 - 84.

[22] ಕೆ. ನೃ. ವಿ. ಪು. 61.

ರ್ಣತೋನಂದ ಬಸವಕ್ಷ್ಮಾಪಾಲ ಚೂಡಾಮಣಿ"[23] ಎಂದಿದ್ದಾನೆ. ಇಲ್ಲಿ ಬಸವರಾಜ 'ವೈಣಿಕ' ನೆನ್ನುವುದನ್ನು ಗಮನಿಸಬಹುದು.

ಕುಣಿತ, ಮೇಳ, ಮದ್ದಳೆ, ಎಂಬ ಶಬ್ದಗಳನ್ನು ಕೇಳಿದಕೂಡಲೇ ಯಾವನೇ ಕನ್ನಡಿಗ ಯಾವುದೇ ದೇಶದಲ್ಲಿರಲಿ, ಅವನ ಮನಸ್ಸು ಮಲೆನಾಡಿಗೆ ಓಡುತ್ತದೆ. ಏಕೆಂದರೆ ಮಲೆನಾಡು ತನ್ನದೇ ಆದ ಒಂದು ಜಾತಿಯ ನೃತ್ಯಕ್ಕೆ ಪ್ರಸಿದ್ಧವಿದೆ. ಅದೇ 'ಯಕ್ಷಗಾನ ಬಯಲಾಟ.' ಅದು ಮಲೆನಾಡಿಗೇ ಮೀಸಲಾದ ಒಂದು ವಿಶಿಷ್ಟ ಜಾನಪದ ಕಲೆ. ಈ ಜಾನಪದ ಕಲೆಯು ವಿಕಾಸಗೊಂಡು ಬೆಳೆಯುವುದಕ್ಕೆ ಬೇಕಾದಂಥ ಬಿತ್ತು, ಕ್ಷೇತ್ರ, ಆರೈಕೆ – ಎಲ್ಲವೂ ಹಿಂದಣಕಾಲದ ಮಲೆನಾಡಿನಲ್ಲಿ ಇತ್ತೆಂಬುದರಿಂದಲೇ ಈ ಭಾಗದಲ್ಲಿ ಅದಿನ್ನೂ ಜೀವಂತವಾಗಿ ಉಳಿದುಕೊಂಡಿದೆ.[24] ಇದಕ್ಕೆ ಕಾರಣ ಈ ಜಾನಪದ ಕಲೆಗೆ ರಾಜಾಶ್ರಯ ದೊರೆತದ್ದು. ಕೆಳದಿಯ ಪ್ರಭುಗಳು ಯಕ್ಷಗಾನ ಕಲಾವಿದರನ್ನೂ, ತಾಳಮದ್ದಳೆಯ ಭಾಗವತರುಗಳನ್ನೂ, ಪ್ರಸಂಗ ಕರ್ತೃಗಳನ್ನೂ ಪೋಷಿಸಿ ಪ್ರೋತ್ಸಾಹಿಸಿರಬೇಕು.[25] ಆದ್ದರಿಂದಲೇ ಈ ಕಲೆ ಮಲೆನಾಡಿನ ಭಾಗದಲ್ಲಿ ಹುಟ್ಟಿ, ಬೆಳೆದು ಇಂದಿನವರೆಗೂ ಬದುಕಿದೆ.

## ಯಕ್ಷಗಾನ ಒಂದು ಸಂಕೀರ್ಣ ಕಲೆ (Collective Art)

"ಈ ಕಲೆಯು ಒಂದೇ ಮುಖದ ಕಲೆಯಲ್ಲ. ಬ್ರಹ್ಮನಿಗಿರುವಂತೆ ನಾಲ್ಕು ಮುಖಗಳು ಅದಕ್ಕಿವೆ. ಅದು ಸಮ್ಮಿಶ್ರ ಕಲೆ. ನೃತ್ಯ, ನಾಟಕ, ಗೀತೆ, ಚಿತ್ರ – ಈ ನಾಲ್ಕು ಪ್ರಬಲ ಮಾಧ್ಯಮಗಳ ಸಮ್ಮಿಳನದಿಂದ ಬೆಳೆದುಬಂದ ಸಾಧನವದು. ನಾವು 'ಯಕ್ಷಗಾನ' ಎಂಬ ಪದವನ್ನು ಹೇಳುವಾಗಲೆಲ್ಲ, ಕೇಳುವಾಗಲೆಲ್ಲ 'ಗಾನ' ಎಂಬ ಪದವು ಪ್ರತ್ಯಕ್ಷ ಅರ್ಥದಲ್ಲಿ ಬೋಧೆಯಾದರೂ, ಪರೋಕ್ಷದಲ್ಲಿ ನೃತ್ಯ, ಚಿತ್ರ, ನಾಟಕಗಳೂ ಅದರಲ್ಲಿ ಅತಕವಾಗಿವೆ – ಎಂಬ ಅರಿವು ನಮಗಿರುತ್ತದೆ. ಮಲೆನಾಡಿನ ರಸಿಕ ಜೀವನಕ್ಕೆ ಯಕ್ಷಗಾನ ಹಿರಿಯ ಸಾಧನವಾಗಿದೆ. ಈ ರಸಿಕ ಜೀವನವು ವಿಲಾಸ ಮುಖಿಯಲ್ಲ;

---

23 ವೀರಶೈವಾನಂದ ಚಂದ್ರಿಕಾ, I ಶ್ಲೋಕ 57.

24 ಶಿವರಾಮ ಕಾರಂತ, ಯಕ್ಷಗಾನ ಬಯಲಾಟ, ಪು. 5

25 ವಿಸ್ತೃತ ಸಭಾಲಕ್ಷಣದ ಎರಡು ಕಡೆಗಳಲ್ಲಿ ಶ್ರೀರಾಮನ ದಾಸ ಹನುಮಂತನನ್ನು ಸ್ತುತಿಸುವುದು ಕಾಣಿಸುತ್ತದೆ. ನಿರೀಕ್ಷಿಸಬಲ್ಲೈ ಏ ಹನುಮ" ಎಂಬ ಹಾಡಿನಲ್ಲಿ "ಭಕ್ತರ ಒಡೆಯ ವೇಣುಪುರ ನಿಲಯ ಮುಖ್ಯ ಪ್ರಾಣನಲ್ಲೈ" ಎಂಬ ಹಾಡು ದಶಾವತಾರದ ಮೇಳದವರಿಗೆ ಬಿದನೂರು ಇಲ್ಲವೇ ವೇಣುಪುರದಲ್ಲಿ ಆಳಿದ ಕೆಳದಿಯ ಅರಸರುಗಳ ಆಶ್ರಯ ದೊರೆತಿರಬಹುದೆಂಬುದರ ಸೂಚನೆ."

— ಅದೇ. ಪು. 72.

ಉದಾತ್ತ ಜೀವನಕ್ಕೆ ಸಂಬಂಧಿಸಿದ್ದು, ಸೌಂದರ್ಯಮುಖಿಯಾದುದು."[26] ಇಂತಹ ಸೌಂದರ್ಯಮುಖಿಯಾದ ಕಲೆ ಸರ್ವಾಂಗಸುಂದರವಾಗಿ ಬೆಳೆಯಿತು ಮಲೆನಾಡಿನಲ್ಲಿ. ಅಂತೆಯೇ ಇತರಕಲೆಗಳನ್ನೂ ತನ್ನ ಜೊತೆಯಲ್ಲಿಯೇ ಬೆಳೆಸಿಕೊಂಡಿತು. ಅಂದರೆ ಇದರ ಜೊತೆಯಲ್ಲಿ ಕನ್ನಡ ದೇಶೀಯ ನೃತ್ಯ, ಗಾನ, ಶಿಲ್ಪಾದಿಗಳೂ ಬೆಳೆದುವು. ಮುಖ್ಯವಾಗಿ ಇವುಗಳಲ್ಲಿ ಗಮನಿಸಬೇಕಾದ ಕಲೆಯೆಂದರೆ ಶಿಲ್ಪ ಹಾಗೂ ಚಿತ್ರ. 'ಗಂಧದಗುಡಿ' ಯೆನಿಸಿದ ಮೈಸೂರು ಕುಸುರಿಗೆಲಸದ ಕಲಾ ಕೈವಾಡ ನಡೆಸುವ ಪ್ರಸಿದ್ಧ ಕಲಾವಿದರಿಗೂ ಜನ್ಮ ಕೊಟ್ಟಿದೆ. ಅವರೇ ನಮ್ಮ ಮಲೆನಾಡಿನ ಗುಡಿಕಾರರು. ವಿಶ್ವವಿಖ್ಯಾತವಾದ ಕುಸುರಿಗೆಲಸದ ಕೃತಿಗಳನ್ನು ನೀಡಿ ಧನ್ಯರಾಗಿದ್ದಾರೆ.

ಈ ಗುಡಿಕಾರರಿಗೆ ರಾಜಾಶ್ರಯ ದೊರೆಕಿತ್ತೆಂದು ಹೇಳಲು ಯಾವ ಹೆಚ್ಚಿನ ಆಧಾರಗಳೂ ಇಲ್ಲ. ಆದರೂ ಈ ಕಲೆ ರಾಜರ ಆಶ್ರಯದಿಂದಲೇ ವಿಶೇಷವಾಗಿ ಬೆಳೆದು ಬಂದಿರಲು ಸಾಧ್ಯ. "ಸಾಗರ, ಸೊರಬ, ಶಿಕಾರಿಪುರಗಳು ಗುಡಿಕಾರರ ನಾಡು. ಹಿಂದೆ ಇಕ್ಕೇರಿ, ಕೆಳದಿ, ಬಿದನೂರು, ಸ್ವಾದಿ, ಬೀಳಗಿ, ಗೆರಸೊಪ್ಪೆಯಂತಹ ಹಳೆಯ ರಾಜಧಾನಿಗಳು ಗುಡಿಕಾರರ ಸಾಂಪ್ರದಾಯಿಕ ಚಿತ್ರಕಲೆಗೆ, ಶಿಲ್ಪಕ್ಕೆ ಹೆಚ್ಚಿನ ಪ್ರೋತ್ಸಾಹ ಕೊಟ್ಟ ಕ್ಷೇತ್ರಗಳಾಗಿದ್ದುವು."[27]

ಯಕ್ಷಗಾನ ಕಲೆಯ ಒಂದು ಕೈ ಸಾಗರ, ಸೊರಬ, ಶಿಕಾರಿಪುರಗಳ ಗುಡಿಕಾರರ ಕಲೆಯನ್ನು ಪೋಷಿಸಿದ್ದರೆ, ಆದರ ಮತ್ತೊಂದು ಕೈ ಬೊಂಬೆಯಾಟವೆಂಬ ಕಲೆಯನ್ನು ಕೊಲೆಗೈದಿದೆ ಎಂದೂ ಊಹಿಸಬಹುದು. ಏಕೆಂದರೆ 'ಬೊಂಬೆಯಾಟ' ವೂ ಸಹ ಮಲೆನಾಡಿನಲ್ಲೇ ಬೆಳೆದು ಬೆಳಕು ಕಂಡ ವಿಶಿಷ್ಟ ಕಲೆ. ಅದು ಕ್ರಮೇಣ ಕ್ಷೀಣಿಸಿ, ನಾಮಾವಶೇಷವಾಗುವ ಸ್ಥಿತಿಗೂ ಬಂದಿದೆ. ಇದಕ್ಕೆ ಮುಖ್ಯವಾಗಿ ಯಕ್ಷಗಾನವು ಕೆಳದಿಯಲ್ಲಿ ರಾಜಾಶ್ರಯ ಪಡೆದು ವಿಶೇಷ ಪ್ರಚಾರಕ್ಕೆ ಬಂದು, ತನ್ನ ಪ್ರಭಾವವನ್ನು ಬೀರಿದ್ದರಿಂದ ಬೊಂಬೆಯಾಟಕ್ಕೆ ಬಲವಾದ ಪೆಟ್ಟು ಬಿದ್ದಿರಬಹುದು. ಅಂತೂ ಪುರಾತನವಾದ ಗೊಂಬೆಗಳ ಮೇಳ ಮಲೆನಾಡಿನಲ್ಲಿ ಕ್ರಮೇಣ ಮರತೇ ಹೋಗುತ್ತಾ ಬಂದಿರುವುದು ವಿಷಾದನೀಯ.

ಕೆಳದಿಯವರ ನಾಣ್ಯವೂ ಕಲಾಮಯವೇ. ಶಿವ-ಶಿವೆಯರ ಮೋಹಕಮೂರ್ತಿಗಳನ್ನುಳ್ಳ ಇಕ್ಕೇರಿಯ ವರಹಗಳು ಇಂದಿಗೂ ಪ್ರಸಿದ್ಧವಿವೆ; ಪೂಜಾರ್ಹವಾಗಿವೆ. ಕೆಳದಿಯ ಈ ಹೊನ್ನಿನ ನಾಣ್ಯವು ಒಂದು ಕಡೆ ಶಿವ-ಶಿವೆಯರನ್ನೂ, ಮತ್ತೊಂದು

---

[26] ಅದೇ. ಪು. 4-5

[27] ಅದೇ. ಪುಟ. 18.

ಕಡೆ 'ಶ್ರೀ ಸದಾಶಿವ' ಎಂಬ ದೇವನಾಗರಿಯ ಮುದ್ರಾಂಕಿತವನ್ನೂ ಪಡೆದಿದೆ. ಈ ಬಂಗಾರದ ನಾಣ್ಯ ಪದ್ಧತಿಯು ಕೆಳದಿಯವರ ಸ್ವಂತ ಟಂಕಸಾಲೆಗೆ ಸಂಬಂಧಿಸಿದ್ದು.

ಕಲೆಯ ಪ್ರಾಚುರ್ಯಕ್ಕೆ ಮತ್ತೊಂದು ಮಾಹಿತಿ ನಮಗೆ ಗದುಗಿನ ಜಗದ್ಗುರು ತೋಂಟದಾರ್ಯ ಮಹಾಸಂಸ್ಥಾನ ಮಠದಲ್ಲಿ ಇಂದಿಗೂ ದೊರೆಯುತ್ತದೆ. ಕೆಳದಿಯವರಿತ್ತ ಹಲವು ಭಕ್ತಿಪೂರ್ವಕ ಕಾಣಿಕೆಗಳು ಇಂದಿಗೂ ಅವರ ಕಲಾಭಿಜ್ಞತೆಗೆ ಸಾಕ್ಷಿಯಾಗಿವೆ.

"ಶ್ರೀ 108 ಜಗದ್ಗುರು ತೋಂಟದ ಸ್ವಾಮಿ ಪಾದಾನಾಂ ಮಠೇ ಅದ್ಯಾಪಿ ವಿದ್ಯಮಾನಾನಿ ಕೆಳದೀಶ್ವರೈರುಪ ಹೃತಾನಿ ಭೂಮಹೋದ್ಯಾನ ದಾನ ಶಾಸನ ಶತಾನಿ, ರಾಜಭೋಗ್ಯಾನಿ ಪ್ರಭೂತಾನಿ ಪುನರಾಭರಣಾನಿ, ಮಣಿಗಣಮರೀಚಿಚಯ ಚಿತ್ರಿತಾಶಾತಲಂ ಬಸವಪ್ಪ ದಾನವರ್ಣೋಜ್ವಲಂ ಸೌವರ್ಣ ಪಾದುಕಾಯುಗಲಂ, ಬಸವ ಭೂವಲ್ಲಭ ಜನನ್ಯಾ ಮಲ್ಲಾಂಬಯಾ ಸಮುಲ್ಲಿಖಿತ ನಿಜನಾಮವರ್ಣಂ ವಿಕೀರ್ಣ ಸಕಲ ಸೂಚಿಕಾ ಕಲಾಕಲಿತ ಕಾಚನಕಂಥಾ ಗದಗ ಪರಿಸರೇ ಡಂಬಳ ಕ್ಷೇತ್ರೇ ತೇಷಾಮೇನ ಶಾಸನವನುವರ್ತ ಮನೋ ಮಹಾನೇಕೋ ಮಠಶ್ಚ ಪ್ರಸ್ತುತಮರ್ಥ ಮೇನಂ ವಸ್ತುತಃ ಪ್ರಮಾಪಯಂತಿ."[28] ಇದರಿಂದ ಕೆಳದಿಯವರ ಕಲಾತ್ಮಕವಾದ ಆಭರಣ, ಪಾದುಕೆಗಳ ತಯಾರಿಕೆ, ಕಲಾಮಯವಾದ ಕಸೂತಿ ಕೆಲಸದ ಪರಿಣತಿ-ಇತ್ಯಾದಿ ಹಲವು ಹತ್ತೆಂಟು ಅಂಶಗಳು ವೇದ್ಯವಾಗುತ್ತವೆ.

ಕೆಳದಿಯ ಕಲಾಭಿರುಚಿಯು ಅವರ ಮೃಗಬೇಟೆಯಲ್ಲೂ, ಬೇಲಿ ಹಾಗೂ ಮನೆ ಮಠಗಳ ನಿರ್ಮಿತಿಯಲ್ಲೂ,[29] ಕುಸ್ತಿಯಲ್ಲೂ,[30] ಆನೆಕಾಳಗ ಮತ್ತು ಗೂಳಿ ಕಾಳಗಗಳಲ್ಲೂ,[31] ಮೆರೆದಿದೆ. ಯುದ್ಧಕಲೆಯಂತೂ ಕೆಳದಿಯವರಿಗೆ ಕರತಲಾಮಲಕ. 'ತುಮುಲ ಯುದ್ಧದಲ್ಲಿ ತುರಗಾರೂಢರಾಗಿ ಶತ್ರು ಸೈನ್ಯಕ್ಕಿದಿರ್ಚಿ ನಿಂದರ್'. ಅವರು ವೀರರಸದಿಂದ ಪೊರೆಯೇರುತ್ತಿದ್ದರಂತೆ.[32] ಈ ಯುದ್ಧೋತ್ಸಾಹದ ಜೊತೆಯಲ್ಲೇ ದೆಹಲಿಯ ಸುಲ್ತಾನನ ದರ್ಬಾರಿನಲ್ಲಿ ದೊಡ್ಡಸಂಕಣ್ಣನಾಯಕನು ಅಂಕುಶಖಾನನ ಕತ್ತಿಯನ್ನು ಇಕ್ಕಡಿಗಡಿದ ಚಾತುರ್ಯವನ್ನೂ ಇಲ್ಲಿ ಸ್ಮರಿಸಬಹುದು.

---

[28] ಸೋಮಶೇಖರ ಶಾಸ್ತ್ರಿ, ವೀರಶೈವಾನಂದ ಚಂದ್ರಿಕಾ, ಮೂರು ಸಾವಿರ ಮಠದ ಎಂಟನೆಯ ಪ್ರಕಟಣೆಗೆ ಬರೆದ ಭೂಮಿಕೆಯಲ್ಲಿ, ಪು. 2.

[29] Mundy, Travels, III, Pt. I, P.88.

[30] Della valle, Travels, II, P. 265.

[31] Op-cit. P. 85.

[32] ಕೆ. ನೃ. ವಿ. ಪು. 22.

ಇದಿರಾಂತಂಕುಶಖಾನನ
ಹದನಂ ನಿಟ್ಟಿಸಿ ಕರಾಸಿಯುಂ ಝುಳಪಿಸುತುಂ ।
ತುದಿವಿಮಾಸೆಯ ನೇವರಿಸು
ತ್ತಿದಿರ್ಚಿದಂ ಸಂಕಣೇಂದ್ರನವನಿಪಚಂದ್ರಂ ॥ [33]

ಸಂಕಭೂಪನಿಗೆ ಯುದ್ಧವೆನ್ನುವುದು ಒಂದು ಕ್ರೀಡೆಯಿದ್ದಂತೆ. ಸಮಾನ ಸ್ಕಂದನಾದ ಅಂಕುಶಖಾನನೊಡನೆ ಮಾಡಿದ ಯುದ್ಧ ಅದ್ಭುತವಾಗಿ ಚಿತ್ರಿತವಾಗಿದೆ.

ಝುಳಪಂ, ಚೂರಣಂ, ಅಂಕೆ, ಒಡ್ಡಣೆ, ತರುಪೇರು,
ವಾರೆ,ವೊಯ್ಲು,ಅಡ್ಡವೊಯ್ಲು,
ಎಳೆತಂ, ಕಂಡಣೆ, ಮಿಾಂಟು, ಚಾಲನಂ,
ಉದಗ್ರೋದ್ಧಾರಣಂ, ಚಾರುವೊಯ್ಲು, ಇಳಿತಂ,
ಸಿಕ್ಕು, ಸವರ್ಕೆ ಎಂಬ ಬಹು ಬಿನ್ನಾಣಂಗಳಿಂ
ಕೂರ್ತು ಕೈಚಳಕಂ ಕೈಮಿಗೆ ಯುದ್ಧರಂಗದೊಳವರ್
ಕೈಗೆಯ್ದರೇಂ ವಣ್ಣಿಪೆಂ [34]

—ಇಂತಹ ಯುದ್ಧವಿಜ್ಞಾನವನ್ನು ಅರಿತವರ ಯುದ್ಧವನ್ನು ಬಣ್ಣಿಸುವುದು ನಿಜಕ್ಕೂ ಕವಿಗೆ ಕಷ್ಟಸಾಧ್ಯ. ಇದಿಷ್ಟೇ ಅಲ್ಲದೆ—

ದಂಡೆ, ಮುಳುಹು, ಒದವು, ಪೈಸರ,
ಮಂಡಲ, ಸಮಚಾಲಿ, ಲಾಗು, ಲಂಘನ,
ಅಮರ್ದೊಳ್ಮಂಡಿಯಭಿಮುಖ, ಸಮದಂಡಿ [35]

—ಇತ್ಯಾದಿ ರೀತಿಗಳೊ—

ಪಾಡರಿದೊಪ್ಪದಿಂ ಪೊಗುವ ಪಿಂಗುವ ಪಿಂದೆಗೆವಾಂಪ ನಿಲ್ವ ಕೈ
ಮಾಡುವ ಪೊಯ್ಲಗಳಿಂ ಕಳೆವ ಕಾಯ್ದು ತೆರಳ್ವ ಸಡಿಲ್ವ
ಪಚ್ಚೆಗೊಂ ।
ಡೀಡಿರಿದೊತ್ತುತೊತ್ತರಿಪ ಪೊಂಗುವ ಸಾರ್ವ ಮರಳ್ವ ಬಾಳ್ಗೆ ಬಾ
ಳ್ಗೂಡುವ ತೇಲ್ವ ಚಿನ್ನಣಗಳೊಪ್ಪೆ ಪಳಂಚಿದರಾಜಿ
ರಂಗದೊಳ್ ॥ [36]

---

[33] ಅದೇ. ಪು. 50.
[34] ಅದೇ. ಪುಟ. 52.
[35] ಅದೇ.
[36] ಅದೇ.

ಅಲ್ಲದೆ—

ತಟ್ಟುವ ತಡೆವಣಿವಸಿಯಿಂ
ಮುಟ್ಟುವ ಮಸೆಗೆಯ್ವ ತಾಳ್ವ ತವಕಿಪ ಬಲ್ಪಿಂ ।
ಮೆಟ್ಟುವ ಬಹುವಿಧ ಭಣತೆಯ
ಪಟ್ಟುಗಳೋರಣಿಸೆ ಪಳಚಿದರ್ಬಿನ್ನಣದಿಂ ॥ [37]

ತಾಗುವ ತೆವರ್ವ ತೊಳ್ವ ವಿ
ಭಾಗಿಪ ಕೆಲಸಾರ್ವ ನಿಮಿರ್ವ ಕೂಡುವ ಸಡಿಲ್ವಿಂ।
ಬಾಗುವ ಕೈಗೆಯ್ದುಣಿಯಿಂ
ಬೀಗುವ ಬಗೆಯೊಪ್ಪೆ ಕಾದಿದರ್ಕೌಶಲದಿಂ ॥ [38]

ಈ ರೀತಿಯ ಸಮಯ ಸಮರ ಪರಿಣತಿ ಕೆಳದಿಯವರದು. ಕವಿ ಲಿಂಗಣ್ಣನ ಬಣ್ಣನೆ ಅವರ ಯುದ್ಧಕಲೆಯ ಸಿದ್ಧಿಗೆ ಹಿಡಿದ ಕನ್ನಡಿ.

ಕೆಳದಿಯು ಮೆರೆದ, ಮೇಲೆ ತಿಳಿಸಿದ ಈ ಎಲ್ಲ ಕಲೆ ಕನ್ನಡಿಗರ ಕಲೆ, ಭಾರತದ ಭವ್ಯಕಲೆ. ಅಂತೆಯೇ ಅದು ನಮ್ಮ ರಾಷ್ಟ್ರದ ಸಂಸ್ಕೃತಿಯ ಪ್ರತೀಕ. ಇದನ್ನು ಸಾಕಾರಗೊಳಿಸಿದ ಕೀರ್ತಿ ಕೆಳದಿಯವರದು.

ಒಟ್ಟಿನಲ್ಲಿ, ಕೆಳದಿಯವರು ಆಡಳಿತದಲ್ಲಿ ಹೇಗೋ, ಧರ್ಮದಲ್ಲೂ ಹಾಗೆ; ಶೀಲದಲ್ಲಿ ಹೇಗೋ, ಸಾಹಿತ್ಯದಲ್ಲೂ ಹಾಗೆ ತಮ್ಮ 'ಪೂರ್ವಮರ್ಯಾದೆ' ಯನ್ನು ಕಾಪಾಡಿಕೊಂಡು ಬಂದಿದ್ದಾರೆ.

ಪ್ರದೀಪ ಜ್ವಾಲಾಬಿರ್ದಿವಸಕರನೀ ರಾಜ ನ
ವಿಧಿಃ ಸುಧಾಸೂತೇಶ್ಚಂದ್ರೋಪಲ
ಜಲಲ ವೈರರ್ಘ್ಯ ರಚನಾ ॥
ಸ್ವಕೀಯೈ ರಂಭೋಭಿಃ ಸಲಿಲನಿಧಿ ಸೌಹಿತ್ಯಕಾರಣಂ
ತ್ವದೀಯಾಭಿರ್ವಾಗ್ಭಿಸ್ತವ ಜನನಿ ವಾಚಾಂ ಸ್ತುತಿರಿಯಾಂ॥ [39]

---

[37] ಅದೇ.

[38] ಅದೇ.

[39] ದೀಪದಿಂದ ಸೂರ್ಯನನ್ನು ಬೆಳಗಿದಂತೆ. ಚಂದ್ರಶಿಲೆಯ ದ್ರವದಿಂದ ಚಂದ್ರನಿಗೆ ಅರ್ಘ್ಯವನ್ನು ಕೊಟ್ಟಂತೆ, ಸಮುದ್ರದ ನೀರಿನಿಂದ ಸಮುದ್ರರಾಜನಿಗೆ ತರ್ಪಣಕೊಟ್ಟಂತೆ, ದೇವಿ, ನಿನ್ನ ಮಾತುಗಳಿಂದಲೇ ನಿನಗೆ ಮಾಡಿದ ಸ್ತುತಿಯಿದು.

ಅನುಬಂಧ ೧—

( ಶ್ರೀ ಅಘೋರೇಶ್ವರ ಪ್ರಸನ್ನಃ )

## ಶ್ರೀಮನ್ ಮಹಿಶೂರ ಮಹಾರಾಜ
## ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್
## ಜಿ. ಸಿ. ಎಸ್. ಐ.
## ಮಹಾಪ್ರಭುಗಳ ಸನ್ನಿಧಾನಕ್ಕೆ

ಕೆಳದಿಯ ಸೋಮಶೇಖರ ರಾಜನು ಮಾಡುವ ಪ್ರಾರ್ಥನೆಯನ್ನು ಕೃಪಾದೃಷ್ಟಿಯಿಂದಲೂ, ಸದಯಾಂತಃ ಕರಣದಿಂದಲೂ ಸಹಾನುಭೂತಿಪರವಾಗಿಯೂ ಲಾಲಿಸಬೇಕಾಗಿ ಸವಿನಯ ವಿಜ್ಞಾಪನೆ.

ಶ್ರೀಮನ್ ಮಹಾಪ್ರಭುಗಳು ಪ್ರಾಕು ಕರ್ಣಾಟಕ ರಾಜವಂಶಗಳ ವಿಷಯದಲ್ಲಿ ಸ್ವಾಭಿಮಾನ ಉಳ್ಳವರಾಗಿ ಮೊದಲು " ಕೆಳದಿ " ತರುವಾಯ " ಇಕ್ಕೇರಿ " ಅನಂತರ " ಬಿದನೂರು " ರಾಜಧಾನಿಗಳಲ್ಲಿ ಆಳಿದ ಅರಸುಗಳ ಚರಿತ್ರೆಯನ್ನು "ಕೆಳದೀನೃಪ ವಿಜಯ" ವೆಂಬ ಗ್ರಂಥ ರೂಪದಿಂದ ಅಚ್ಚು ಹಾಕಿಸಿ ಪ್ರಸಿದ್ಧಗೊಳಿಸಿದುದಕ್ಕಾಗಿ ನಾನು ಮತ್ತು ನನ್ನ ಪೂರ್ವಜರು ಮಹಾ ಪ್ರಭುಗಳಿಗೆ ಆಜನ್ಮ ತುಂಬಾ ಕೃತಜ್ಞರಾಗಿರುವೆವು.

18 ನೇ ಶತಮಾನದಲ್ಲಿ ಮಹಿಶೂರ ಸಂಸ್ಥಾನದೊಳಗೆ ಪ್ರಬಲಕ್ಕೆ ಬಂದ ಹೈದರಲ್ಲಿ ಎಂಬ ಸರದಾರನು ಮಹಿಶೂರ ಸಂಸ್ಥಾನದ ಒಳಗೂ ಹೊರಗೂ ಹಾವಳಿ ಎಬ್ಬಿಸಿ ಬಿದನೂರ ರಾಜವಂಶದ ಅಬಲೆಯಾದ ರಾಣಿ ವೀರಮ್ಮಾಜಿಯವರು ಸೋಮಶೇಖರ ರಾಜರೆಂಬವರನ್ನು ದತ್ತು ತೆಗೆದುಕೊಂಡು 5 ವರುಷ ಆಳಿದ ತರುವಾಯ ಕೈಯೊಳಗಿನ ಕೆಲವು ಕೃತಘ್ನರ ಪಿತೂರಿಯಿಂದ ಬಿದನೂರು ರಾಜಧಾನಿಗೆ ಮುತ್ತಿಗೆ ಹಾಕಿ ಅವರೀರ್ವರನ್ನು ಹಿಡಿದು ಮದ್ದಗಿರೀ ಕೋಟೆಯಲ್ಲಿ ಸೆರೆಯಿಟ್ಟಿದ್ದನು. ಸ್ವಲ್ಪ ಕಾಲದೊಳಗೆ ಶ್ರೀಮಂತ ಮಾಧವರಾವ್ ಪೇಶ್ವೆಯವರು ಬಿಡಿಸಿ ಕರೆದುಕೊಂಡು ಹೋದರೆಂಬುದರ ಮುಂದಿನ ಚರಿತ್ರೆಯು ಆ ಕನ್ನಡ ಗ್ರಂಥದೊಳಗಾಗಲೀ ಅಥವಾ ಇನ್ನು ಕೆಲವರು ಬರೆದಿರುವ ಬೇರೆ ಕೆಲವು ಕನ್ನಡ ಚರಿತ್ರೆಗಳಲ್ಲಿ ಆಗಲೀ ಹೇಳಿರುವುದಿಲ್ಲ. ಹೋದ ವರುಷ ನಾನು ಕುಲದೇವರ ದರ್ಶನಕ್ಕಾಗಿ ಅತ್ತ ಕಡೆ ಪ್ರಯಾಣ ಬೆಳೆಸಿದ್ದೆನು. ಮಹಾಪ್ರಭುಗಳು ಅತ್ತಕಡೆ ಚಿತ್ತೈಸಿದಾಗ ನಗರದ ನನ್ನ ಪೂರ್ವಜರ ಅರಮನೆಯನ್ನು ಸಂದರ್ಶಿಸಿ ಅಲ್ಲಿಯ ಸ್ಥಿತಿಯ ಬಗ್ಗೆ ವಿಷಾದಗೊಂಡು ನನ್ನ ಪೂರ್ವಜರ

ಸ್ಮಾರಕವನ್ನು ಏರ್ಪಡಿಸಿರುವರಾಗಿಯೂ, ಆ ವಂಶಜರ ವಿಷಯದಲ್ಲಿ, ಚೌಕಾಶಿ ನಡೆಸಿದ ರೆಂತಲೂ ಅಲ್ಲಿಯವರಿಂದ ಈ ರಾಜವಂಶದವರ ಮುಂದಿನ ಗತಿಯೇನಾದುದೆಂಬುದನ್ನು ಈಗ ನಾನು ಶ್ರೀಮನ್ ಮಹಾಪ್ರಭುಗಳ ಸನ್ನಿಧಾನದಲ್ಲಿ ಸಂಕ್ಷೇಪವಾಗಿ ಅರಿಕೆ ಮಾಡಿ ಕೊಳ್ಳುತ್ತೇನೆ. ಅದೇನೆಂದರೆ :—

ರಾಣಿ ವೀರಮ್ಮಾಜಿಯವರು ದಾರಿಯಲ್ಲಿ ಕೈಲಾಸವಾಸಿಗಳಾದ್ದರಿಂದ ಸೋಮ ಶೇಖರ ರಾಜರೊಬ್ಬರೇ ಬಂಕಾಪುರದಲ್ಲಿ ಪೇಶ್ವೆ ಸರಕಾರದ ಆಶ್ರಯದಲ್ಲಿ ಉಳಿದು ಸಂಧಾನ ನಡೆಸಿದ ಪ್ರಕಾರ ಶ್ರೀಮಂತ ಮಾಧವರಾವ್ ಪೇಶ್ವೆಯವರು ಬರದು ರವಾನಿ ಸಿದ ಪತ್ರದ ಮೇರೆಗೆ ಪೂಣೆಗೆ ಹೋಗಿ ಒಡಂಬಡಿಕೆ ಮಾಡಿಕೊಂಡು ಬಂದ ಮೇಲೆ ಸರದಾರ ಪರಶುರಾಮಭಾವೂ ಪಟವರ್ಧನರವರು ಈ ವಂಶಜರನ್ನ ಪುನಃ ಗಾದಿಯ ಮೇಲೆ ಕೂಡ್ರಿಸಿ ಹೋದರು. ಆದರೆ ತಾತ್ಪೂರ್ತಿಕವಾಗಿ ಮಹಿಶೂರ ಸಂಸ್ಥಾನಕ್ಕೆ ಅಧಿಪತಿಯಾಗಿದ್ದ ಟೀಪೂ ಸುಲ್ತಾನನ ಪಕ್ಕಾ ಬಂದೋಬಸ್ತು ಆಗಿರಲಿಲ್ಲವಾದ್ದರಿಂ ದಲೂ, ಈ ಬಿದನೂರ ಸಂಸ್ಥಾನದ ಪಾಯಾ ಒಮ್ಮೆ ಸಡಿಲಾದ್ದು ಭದ್ರಪಡಿಸುವಷ್ಟು ಕರ್ತೃತ್ವಶಾಲಿಗಳು ರಾಜವಂಶದವರಲ್ಲಿ ಯಾರೂ ಇಲ್ಲದ್ದರಿಂದಲೂ, ಯಾವ ಶ್ರೀ ಅಘೋರೇಶ್ವರ ದೇವರ ಅನುಗ್ರಹದಿಂದ ಈ ರಾಜವಂಶವು ಉದ್ಭವಿಸಿತೋ ಆ ದೇವರ ಮೇಲಿನ ಶ್ರದ್ಧಾಭಕ್ತಿಗಳು ಕಡಿಮೆಯಾದ್ದರಿಂದ ಪರಿಣಮಿಸಿದ ದೈವಿಕ ಕ್ಷೋಭದಿಂ ದಲೂ, ಟೀಪೂ ಸುಲ್ತಾನನ ಕಾಟ ಸಹಿಸಲಾರದೆ ಈ ವಂಶಜರು ಸ್ವಲ್ಪಕಾಲದಲ್ಲಿ ಪುನ ಪುಣೆಯಲ್ಲಿಯೇ ಹೋಗಿ ಪೇಶ್ವೆ ಸರಕಾರದ ಆಶ್ರಯದಲ್ಲಿ ಅವರ ಸಹಾಯದ ನಿರೀಕ್ಷಣೆ ಯಲ್ಲಿ ಇರಬೇಕಾಯಿತು. ತರುವಾಯ ನರಗುಂದ ಸಂಸ್ಥಾನಿಕರಾದ ಶ್ರೀಮಂತ ವೆಂಕಟ್ರಾವ್ ಸಾಹೇಬರು ಪೂಣೆಗೆ ಹೋದಾಗ ಕನ್ನಡ ರಾಜವಂಶಜರೆಂಬ ಅಭಿಮಾನ ಹಿಡಿದು ಇವರನ್ನು ಪೇಶ್ವೆ ಸರಕಾರದ ಪರವಾನಗಿಯಿಂದ ನರಗುಂದಕ್ಕೆ ಕರಕೊಂಡು ಬಂದು ತಮ್ಮ ಆಶ್ರಯದಲ್ಲಿ ಇಟ್ಟುಕೊಂಡು ಅವರನ್ನು ತಕ್ಕ ಗೌರವದಿಂದ ಕಾಪಾಡಿದರು.

ಇವೆಲ್ಲ ಸಂಗತಿಗಳ ನಿಜಸ್ಥಿತಿಯ ವಿಷಯವು ನನ್ನ ಹಿರಿಯರು ಬರೆದಿಟ್ಟ ಲೇಖದ ಮೇಲಿಂದಲೂ, ನನ್ನ ಕಡಿಗೆ ಇರುವ ಶ್ರೀಮಂತ ಮಾಧವರಾವ್ ಬಲ್ಲಾಳ ಪೇಶ್ವೆ ಯವರು ಮತ್ತು ಶ್ರೀಮಂತ ರಘುನಾಥರಾವ್ ಪೇಶ್ವೆಯವರು ಬರೆದಂಥ ಶಿಖ್ಖಾ ಮೊಹರು ಉಳ್ಳ ಅಸಲ ಪತ್ರಗಳ ಮೇಲಿಂದಲೂ, ನರಗುಂದಕರರು ದಯಾವಂತರಾಗಿ ಉಂಬಳಿ ಹಾಕಿಕೊಟ್ಟ ಬ್ರಿಟೀಷ್ ಸರ್ಕಾರದವರಾದರೂ ನಡಿಸುತ್ತಾ ಬಂದಿರುವ ಇನಾಮ್ ಭೂಮಿಯ ಸನದಿನ ಮೇಲಿಂದಲೂ, ಇತ್ತಿತ್ತಲಾಗಿ ವರ್ತಮಾನ ಪತ್ರಗಳಲ್ಲಿ ಪ್ರಸಿದ್ಧ ಆದ ಲೇಖಗಳ ಮೇಲಿಂದಲೂ ಮಹಾಪ್ರಭುಗಳಿಗೆ ಮನವರಿಕೆಯಾಗುವುದು.

ಟೀಪೂ ಸುಲ್ತಾನನನ್ನು ಸೋಲಿಸಿದ ತರುವಾಯ ಹೈದರಲ್ಲಿಯೂ ಸೇರಿಸಿಕೊಂಡ

ಮಹಿಶೂರ ಸಂಸ್ಥಾನದ ಹೊರಗಣ ಪ್ರಾಂತ್ಯಗಳ ವಿಭಾಗಣಿ ಆಗುವ ಕಾಲಕ್ಕೆ ಕಳಕೊಂಡ ರಾಜ್ಯವನ್ನು ತಿರುಗಿ ಕೊಡಿಸುವೆನೆಂಬುದಾಗಿ ಆಶ್ವಾಸನ ಕೊಟ್ಟು ಆಸೆ ತೋರಿಸಿದ್ದ ಪೇಶ್ವೆ ಸರಕಾರದವರಾಗಲೀ, ನನ್ನ ಪೂರ್ವಜರು ಮಟ್ಟವೊದಲು ತಮ್ಮ ರಾಜ್ಯದಲ್ಲಿ ಆಶ್ರಯ ಕೊಟ್ಟ ಬ್ರಿಟೀಷ್ ಸರಕಾರದವರಾಗಲೀ, ನನ್ನ ಪೂರ್ವಜರಿಗೆ ಮಾತ್ರ ಅವರ ರಾಜ್ಯವನ್ನು ಅವರಿಗೆ ತಿರುಗಿ ಕೊಡಲಿಕ್ಕೆ ಮರೆತು ಬಿಟ್ಟದ್ದು ಕೇವಲ ಅವರ ದುರ್ದೈವವೇ ಸರಿ. ನನ್ನ ಅಂಥ ಪೂರ್ವಜರು ಅತ್ತಲಾಗಿನ ಆ ಕಾಲದ ವರ್ತಮಾನ ತಿಳಿಯದರಿಂದಲೋ, ಪೇಶ್ವೆ ಸರಕಾರದವರು ತಮಗೆ ಬಿಟ್ಟುಕೊಡಲಿಕ್ಕಿಲ್ಲಾ, ಅಥವಾ ವಿಶ್ವಾಸಘಾತ ಮಾಡಲಿಕ್ಕಿಲ್ಲೆಂಬ ನಂಬಿಗೆಯಿಂದಲೋ, ಮನಸ್ಸಿನ ಉದಾಸೀನತೆ ಅಥವಾ ತಮ್ಮ ಗೌರವಕ್ಕೆ ಭಂಗಬರುವದೆಂಬ ದುರಭಿಮಾನದಿಂದಲೋ, ಇಸ್ವಿ ಸನ್ ೧೮೯೯ ರಲ್ಲಿ ಅಥವಾ ಅನಂತರ ಸ್ವಲ್ಪ ಕಾಲದೊಳಗೇನೇ ಯಾವ ವಿಧದಿಂದಲೂ ಸ್ವತಹ ಮುಂದುವರಿದು ಯಾವ ತರದ ಪ್ರಯತ್ನ ನಡಿಸದೇ ಉಳಿದಿದ್ದು ಅವರ ವಂಶದಲ್ಲಿ ಹುಟ್ಟಿದ ನನ್ನಂಥ ದುರ್ದೈವಿಗಳಾದ ಮುಂದಿನವರ ಪ್ರಾರಬ್ಧವೇ ಸರಿ. ಪೇಶ್ವಾಯಿ ಮುಳುಗಿದ ನಂತರ ಶ್ರೀ ನರಗುಂಡಕರರ ಮತ್ತು ಸಾಂಗಲೀಕರರ ಪ್ರೋತ್ಸಾಹದ ಮೇಲಿಂದ ಮತ್ತು ಅವರ ಸಹಾಯದಿಂದ ಇಸ್ವಿ ಸನ್ ೧೮೪೯ ರಲ್ಲಿ ಮತ್ತು ೧೮೫೫ ರಲ್ಲಿ ಬ್ರಿಟೀಷರ ಸರಕಾರಕ್ಕೆ ಅರ್ಜಿ ಮಾಡಿಕೊಳ್ಳಲಾಗಿ "ಯೋಗ್ಯ ಕಾಲದಲ್ಲಿ ನಜರಿಗೆ ತಾರದೇ ದೀರ್ಘಕಾಲದ ನಂತರ ರಾಜ್ಯವನ್ನು ತಿರುಗಿ ಕೊಡಬೇಕೆಂಬದಾಗಿ ತೋರಿಸುವ ಹಕ್ಕಿನ ವಿಷಯದಲ್ಲಿ ವಿಚಾರ ನಡೆಯಲಾರದು" ಎಂಬುದಾಗಿ ಮದ್ರಾಸು ಸರಕಾರದ ಉತ್ತರ ದೊರೆಯಿತು. ಆ ಮೇಲೆ ಪುನಹ ನಾಮದಾರ ಕೋರ್ಟ್ ಆಫ್ ಡೈರೆಕ್ಟರರ ಕಡಿಗೆ ಮಾಡಿಕೊಂಡ ಅರ್ಜಿ ಹಿಂದೂಸ್ಥಾನ ಸರಕಾರದಿಂದ ಮುಂದೆ ರವಾನಿಸಲ್ಪಟ್ಟಿರುವುದಾಗಿ ಉತ್ತರ ದೊರೆತರೂ ಅದರ ಪರಿಣಾಮವೇನಾದ್ದು ತಿಳಿಯಲು ನನ್ನ ಕಡಿಗೆ ಸಾಧನವ್ಯಾವದೂ ಇರುವುದಿಲ್ಲ. ಇದೇ ಸಮಯದಲ್ಲಿ ಮಹಾಪ್ರಭುಗಳ ಅಜ್ಜಂದಿರಾದ ಶ್ರೀಮನ್ ಕೃಷ್ಣರಾಜೇಂದ್ರ ಒಡೆಯರವರ ಕಾಲದಲ್ಲಿ ಶ್ರೀ ನರಗುಂಡಕರರು ಸಾಂಗಲೀಕರರ ಆಪ್ತಾಲೋಚನೆ ತೆಗೆದುಕೊಂಡು ಈ ಕೆಳದಿ ಅರಸು ಮನೆತನದವರನ್ನು ಅಲ್ಲಿಯವರೆಗೆ ತಮ್ಮ ಸಣ್ಣ ಸಂಸ್ಥಾನದ ಯೋಗ್ಯತೆಗೆ ಸರಿಯಾಗಿ ಕೈಲಾದಮಟ್ಟಿಗೆ ತಾವು ತಕ್ಕ ಗೌರವದಿಂದ ನೋಡಿಕೊಂಡು ಬಂದೆವು. ಮುಂದೆ ಅವರನ್ನು ಸಂಭಾಳಿಸುವ ಭಾರವು ಮಹಾಪ್ರಭುಗಳ ಸಂಸ್ಥಾನಕ್ಕೆ ಕೂಡಿದೆ ಎಂಬದಾಗಿ ಥೈಲಿ ರವಾನಿಸಿ ನನ್ನ ಅಜ್ಜಂದಿರ ಕಡೆಯಿಂದಲೂ ಥೈಲಿ ಕೊಡಿಸಿ ಮುದ್ದಾಮ ಒಬ್ಬ ಕಾರಕೂನಗೆ ರವಾನಿಸಿದಂತೆಯೂ, ಆ ಪ್ರಕಾರ ಮಹಾಪ್ರಭುಗಳ ಸಂಸ್ಥಾನದಿಂದ ರಾಜಕೀಯ ಪೆನ್ಷನ್ ಸಿಗುವ ವಿಷಯದಲ್ಲಿ ಕೆಲಸ ನಡೆದಿರುವಂತೆಯೂ ಶ್ರೀಮಂತ ಸಾಂಗಲೀಕರರಿಂದ ಬಂದ ಒಂದು ಅಸಲ ಪತ್ರದ ಮೇಲಿಂದ ತೋರಿಬರುತ್ತದೆ. ಆದರೆ ಆ ಪ್ರಕಾರ ಫಲಪ್ರಾಪ್ತಿಯಾದ್ದು ಮಾತ್ರ ತೋರುವುದಿಲ್ಲಾ. ನಳರಾಜ, ಹರಿಶ್ಚಂದ್ರ

ರಂಥವರಿಗೂ, ಬಿಡದ ವಿಧಿಯು ನಮ್ಮಂಥವರ ಬೆನ್ನು ಬಿಡದ್ದರಿಂದಲೋ ಏನೋ ಅಂಬುವಂತೆ ಅದೇ ಸುಮಾರಿಗೆ ಯಾರೋ ಒಬ್ಬ ಡಾಂಬಿಕ ಅಧಮನು ತಾನು ಕೆಳದೀ ಅರಸು ಮನೆತನದವನೆಂದು ಸಂಸ್ಥಾನದೊಳಗಣ ಕೆಳದೀ ಪ್ರಾಂತದಲ್ಲಿ ಡೊಂಬಿ ಎಬ್ಬಿಸಿ ದವನು ನನ್ನ ಅಜ್ಜನೇ ಯಂಬ ಭಾವನೆ ಉದ್ಭವಿಸಲು ಧಾರವಾಡ ಜಿಲ್ಲೆಯ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರಿಂದ ಆ ಭಾವನೆಯು ನಿರಾಧಾರವಾದದ್ದೆಂದು ನಿರಾಕರಿಸಲ್ಪಟ್ಟಾಗ್ಯೂ ಪೆನ್‌ಷನ್ನಿನ ವಿಷಯವು ಮಾತ್ರ ಫಲದ್ರೂಪ ಹೊಂದಲಿಲ್ಲೆಂಬದಾಗಿ ತೋರುತ್ತದೆ.

ನರಗುಂದ ಸಂಸ್ಥಾನವು ಮುಳುಗುವವರೆಗೆ ಆ ಸಂಸ್ಥಾನಿಕರ ಆಧಾರವಿದ್ದದರಿಂದ ತಕ್ಕ ಮಟ್ಟಿಗೆ ಮರ್ಯಾದೆಯಿಂದ ಕಾಲಹರಣ ಮಾಡಿದರು. ಆ ಮೇಲೆ ಮಾತ್ರ ಅವ ರಿಂದ ದೊರೆತ ಬರೇ 40 ಎಕರೆ ಇನಾಮು ಭೂಮಿಯ ಅಲ್ಪ ಉತ್ಪನ್ನದ ಮೇಲೆ ಅವ ಲಂಬಿಸಿ ಸಾಮಾನ್ಯ ಸ್ಥಿತಿಯಲ್ಲಿ ಇರಬೇಕಾಯಿತು. ಯಾವಾಗಲೂ ಕ್ಷಾಮಪೀಡಿತ ವಾದ ನರಗುಂದ ಶೀಮೆಯಲ್ಲಿ ಈಗ 7-8 ವರುಷಗಳಿಂದ ಎಡೆಬಿಡದೆ ಸಂಭವಿಸಿದ ಕ್ಷಾಮದ ಮೂಲಕ ಆ ರಾಜವಂಶಕ್ಕೆ ಸೇರಿದ ನನ್ನ ಗತಿ ಏನಾಗಿರಬಹುದೆಂಬುದನ್ನು ಊಹಿಸಲು ಮಹಾಪ್ರಭುಗಳೇ ಸಮರ್ಥರಿರುತ್ತೀರಿ. ಮೊದಲಿಸಿಂದಲೇ ಸಾಮಾನ್ಯ ಸ್ಥಿತಿಯಲ್ಲಿದ್ದವರಿಗೆ ಈಗಿನ ಈ ಸ್ಥಿತಿಯಿಂದ ವಿಶೇಷ ವ್ಯಥೆ ಆಗುವ ಹಾಗಿಲ್ಲಾ. ಬರೇ ಒಂದೂವರೆ ಶತಮಾನದ ಹಿಂದೆ 263 ವರುಷ ವೈಭವದಿಂದ ಪಶ್ಚಿಮ "ಸಮುದ್ರಾಧೀಶ ರೆನಿಸಿಕೊಂಡು" ರಾಜ್ಯವಾಳಿದ ಅರಸು ಮನೆತನದವರಿಗೆ ಒದಗಿರುವ ಈ ಹೀನಸ್ಥಿತಿಯ ವಿಷಯದಲ್ಲಿ ಮಹಾಪ್ರಭುಗಳ ಕೋಮಲ ಅಂತಃಕರಣವು ಯಂದೂ ಕರಗದೆ ಇರಲಾರ ದೆಂಬುದಾಗಿ ಹಿಂದೂಸ್ಥಾನದ ಎಲ್ಲಾ ಭಾಗಗಳಲ್ಲಿ ಹಬ್ಬಿಕೊಂಡಿರುವ ಮಹಾಪ್ರಭುಗಳ ಕೀರ್ತಿಯ ಸುವಾರ್ತೆಯು ನನಗೆ ಮೇಲಿಂದ ಮೇಲೆ ಸೂಚಿಸುತ್ತಿರುವದಲ್ಲದೇ ನನ್ನ ಪರಿಚಯದವರೆಲ್ಲರೂ ನನಗೆ ಎಚ್ಚರಿಸುತ್ತಿರುವರು. ಆದ್ದರಿಂದ ಇಷ್ಟುಕಾಲ ಪರಿ ಯಂತ್ರ ಕಾಡುತ್ತಿದ್ದ ವಿಧಿಯು ಈಗ ತಾನಾಗಿಯೇ ಬೇಸತ್ತು ಧರ್ಮರಾಜನಂಥ ಮಹಾಪ್ರಭುಗಳ ಆಳಿಕೆಯ ಸುಸಂಧಿಯನ್ನು ನನ್ನಂಥ ಪಾಮರನಿಗೆ ಒದಗಿಸಿಕೊಟ್ಟಿರು ರುವುದಾಗಿ ತುಂಬಾ ನಂಬಿಕೊಂಡಿರುವೆನು.

ಟೀಪೂ ಸುಲ್ತಾನನನ್ನು ಸೋಲಿಸಿದ ಮೇಲೆ ಹೈದರನು ಮಹಿಶೂರ ಸಂಸ್ಥಾನಕ್ಕೆ ಸೇರಿಸಿಕೊಂಡ ಹೊರಗಣ ಪ್ರಾಂತಗಳನ್ನು, ಬ್ರಿಟಿಷರೂ ಪೇಶ್ವೆಯವರೂ ನಿಜಾ ಮರೂ ಹಂಚಿಕೊಳ್ಳುವಾಗ ನಮ್ಮ ಬಿದನೂರ ಸಂಸ್ಥಾನದ ಕೆಲವೊಂದು ಭಾಗವು ಮಹಾಪ್ರಭುಗಳ ಸಂಸ್ಥಾನಕ್ಕೆ ಸೇರಿಸಲ್ಪಟ್ಟಿರುವುದು. ಕೆಳದೀ ಅರಸರ ಬಿರುದಾಂಕಿತ "ಗಂಡಭೇರುಂಡವು" ಮಹಾಪ್ರಭುಗಳನ್ನು ಆಶ್ರಯಿಸಿಕೊಂಡಿತು. ಇವೇ ಮೊದ ಲಾದ ಸಂಗತಿಗಳು ಮಹಾಪ್ರಭುಗಳಿಗೆ ಮನವರಿಕೆಯಾಗುವುದಕ್ಕೋಸರ ಅರಿಕೆ ಮಾಡಿ ಕೊಂಡಿದ್ದರ ವಿನಾಹಾ ನನ್ನ ಹಕ್ಕು ತೋರಿಸುವ ಉದ್ದಿಶ್ಯವಾಗಿ ಅಲ್ಲಾ. ಹಕ್ಕು

ತೋರಿಸುವ ಸಂಧಿಯನ್ನು ನಮ್ಮವರು ತಾವಾಗಿಯೇ ಕಳಕೊಂಡಿದ್ದರಿಂದ ಈಗ ನಾನು ಮಹಾಪ್ರಭುಗಳ ಸನ್ನಿಧಾನದಲ್ಲಿ "ದೇಹೀ" ಎಂದು ಆಶ್ರಯದ ಯಾಚನೆ ಮಾಡಲಿಕ್ಕೆ ಮಾತ್ರ ಹಕ್ಕುದಾರನಾಗಿದ್ದೇನೆ. ಇನ್ನೂ ಕೆಲವು ಗುಪ್ತಸಂಗತಿಗಳನ್ನು ಮಹಾಪ್ರಭುಗಳು ಅಭಯವನ್ನಿತ್ತು ಅಪ್ಪಣೆ ದಯಪಾಲಿಸಿದಲ್ಲಿ ಬಾಯಿಂದ ಅರಿಕೆ ಮಾಡಿಕೊಳ್ಳಲಿಕ್ಕೆ ಆತುರ ಪಡುತ್ತೇನೆ.

ಸಾರಾಂಶ-ಶಕೆ ೧೪೨೨ (ಇಸ್ವಿ ಸನ್ ೧೫೦೦) ನೇ ಯಿಂದ ಶಕೆ ೧೬೮೫ (ಇಸ್ವಿ ಸನ. ೧೭೬೩) ನೇ ವರೆಗೆ ೨೬೩ ವರುಷ ಮಹಾ ವೈಭವಶಾಲಿಗಳಾಗಿಯೂ ಪರಾಕ್ರಮಶಾಲಿಗಳಾಗಿಯೂ ರಾಜ್ಯವಾಳಿ ದೈವಲೀಲೆಯ ಪ್ರಭಾವದಿಂದ ಅಳಿದುಹೋದ ರಾಜವಂಶದೊಳಗಿನ ಉಳಿದ ನನ್ನೊಬ್ಬನ ಈಗ್ಗಿನ ಹೀನ ದೀನಸ್ಥಿತಿಯನ್ನು ಸದಯಾಂತಃಕರಣದಿಂದ ಲಾಲಿಸಿಕೊಂಡು ನನ್ನನ್ನು ಉದ್ಧಾರ ಮಾಡುವುದು ಮಹಾಪ್ರಭುಗಳ ವಿನಹಾ ಅನ್ಯರಿಂದ ಆಗಬಹುದಾದ ಸಂಗತಿಯಲ್ಲಾ. ಸಾಕ್ಷಾತ್ ಧರ್ಮರಾಜನಿಗೆ ಹೋಲಿಸುವಂಥ ಮಹಾಪ್ರಭುಗಳ ದಯಾಭರಿತವಾದ ಕೋಮಲ ಅಂತಃಕರಣವು ಉಭಯವಂಶಗಳ ಸಾಮ್ಯತೆಗೆ ಅವರವರ ಪ್ರಾರಬ್ಧಾನುಸಾರವಾಗಿ ಒದಗಿರುವ ಸರೋವರಕ್ಕೂ ಗಂಗಾನದಿಗೂ, ನಡುವೆ ಇರುವಂಥ ಈಗಿನ ವ್ಯತ್ಯಾಸದಕ್ಕೋಸ್ಕರವಾಗಿಯೇ ಕರಗದಿರಲಾರದೆಂದು ದೃಢವಾಗಿ ನಂಬಿರುವೆನು. ಆದ್ದರಿಂದ ವೈಭವಶಾಲಿಗಳಾದ ನಮ್ಮ ಪೂರ್ವಜರ ಗೌರವವನ್ನು ಯಥಾಮತಿ ಕಾಪಾಡಿಕೊಳ್ಳಬಹುದಾದಂತ ನನಗೆ ನನ್ನಂಥ ಬೇರೆ ಆನೇಕರೋಪಾದಿಯಲ್ಲಿ ಮಹಾಪ್ರಭುಗಳ ಪಾದಗಳಲ್ಲಿ ಆಶ್ರಯವನ್ನುಕೊಟ್ಟು ಕಾಪಾಡಬೇಕೆಂಬುದಾಗಿ ಸನ್ನಿಧಾನದಲ್ಲಿ ಬೇಡಿಕೊಳ್ಳುವೆನು.

ಶ್ರೀಮನ್ ಮಹಾಪ್ರಭುಗಳವರ ರಜತ ಮಹೋತ್ಸವದ ಸುಸಂದರ್ಭವೇ ನನ್ನ ವಂಶದ ಪ್ರಾರಬ್ಧ ಗತಿಯು ತಾನಾಗಿಯೇ ಬೇಸತ್ತು ಬಿಟ್ಟುಹೋದ ಮತ್ತು ನನ್ನ ವಂಶಕ್ಕೆ ಮಹಾಪ್ರಭುಗಳವರಿಂದ ಆಶ್ರಯ ಕೊಟ್ಟು ತಕ್ಕ ಮರ್ಯಾದೆ ದೊರೆತ ಶುಭ ದಿವಸವಾಗಬಹುದೆಂಬ ದೃಢವಾದ ನಂಬಿಕೆಯಿಂದ ಇಂಥ ಸುಸಂಧಿಯನ್ನು ಕಳಕೊಳ್ಳಲಾಗದೆಂದು ಈ ವಿಜ್ಞಾಪನಾ ಪತ್ರದೊಂದಿಗೆ ನಾನು ಮಹಾಪ್ರಭುಗಳ ಸಂದರ್ಶನ ಲಾಭವನ್ನು ಪಡಕೊಳ್ಳುವ ಸಾಹಸ ಮಾಡಿರುವೆನು.

ಮಹಾಪ್ರಭುಗಳ ಮತ್ತು ಅವರ ವಂಶಜರ ಕೀರ್ತಿಪ್ರಭಾವವು ಕಲ್ಪವೃಕ್ಷದಂತೆ ಅಭಿವೃದ್ಧಿ ಹೊಂದುತ್ತ ಶಾಶ್ವತವಾಗಿ ಚಿರಕಾಲ ಇರುವಂತೆಯೂ, ಮಹಾಪ್ರಭುಗಳಿಗೂ ಅವರ ಕುಟುಂಬದ ವಿಶಿಷ್ಟರಿಗೂ ದೀರ್ಘಾಯುಷ್ಯ ಆಯುರಾರೋಗ್ಯಗಳು ಲಭಿಸುವಂತೆಯೂ ಅನುಗ್ರಹಿಸುವಂತೆ ಶ್ರೀ ಅಘೋರೇಶ್ವರ ಮಹಾಸಂನಿಧಾನದಲ್ಲಿ ಯಾವಾಗಲೂ ಪ್ರಾರ್ಥಿಸುವೆನು.

**ಸೋಮಶೇಖರ ರಾಜ, ಶಿವರಾಜ ಅರಸರು,ಬಿದನೂರ, ನರಗುಂದ**

**ತಾ. ೨೨-೬-೧೯೨೭ ಇಸ್ವಿ**

ಅನುಬಂಧ-೨

## ಮಿರ್ಜಿ ಶಿವಪ್ಪನವರ ವಂಶಕ್ಕೆ ಕೆಳದಿಯವರು ಕೊಟ್ಟ ಗುರಿಕಾರಿಕೆಯ ಸನ್ನದು

..........................................

ಸ್ವಸ್ತಿ ಶಾಲೀವಾಹನ ಶಕ ಸಾವಿರದ ನಾನೂರ ಐವತ್ತೊಂಬತ್ತನೆಯ ಮಾಹೇ ವಿಳಂಬಿ ಸಂವತ್ಸರದಲ್ಲಿ ವಿಜಯನಗರದ ಶ್ರೀ ಪ್ರತಾಪರಾಯರ ವಂಶಾನುಮತರಾದ ಕೃಷ್ಣರಾಯರ ಕಾಲದಲ್ಲಿ ಅವರ ಬಳಿಗೆ ಕೆಳದಿ, ಕ್ಯಾಸನೂರು, ಕಲುಸೆ, ಮಂಜಾಲೆ, ಎಲೆಗಳಲೆ, ಗೋಪಗೊಂಡರ ತೋಟಗೊಂಡರ ಭದ್ರಯ್ಯನವರು ರಾಯರ ಬಳಿಗೆ ನಿರ್ಭಯದಿಂದ ಹೋಗಿ ಕಾಣಿಸಿಕೊಂಡು ಯಿರುತ್ತಾ ಇದ್ದಲ್ಲಿ ಜಾಲಿಹಾಳ ಕೋಟೆ ಯಲ್ಲಿ ಎಡಮುಂಡನ ತರುವ ಬಗ್ಗೆ ತಾವೇ ದಂಡೆತ್ತಿ ಹೊರಡುವ ಸಮಯದಲ್ಲಿ ದೇವರು ಚಿತ್ತಯಿಸುವುದು ಏನು ಎಂದು ಅರಿಕೆ ಮಾಡಿಕೊಂಡಲ್ಲಿ ಎಡಮುಂಡನ ತರುವ ಬಗ್ಗೆ ಹೋಗುತ್ತೇವೆ ಎಂದು ಹೇಳಿದಲ್ಲಿ ಸೇವಕರಿಗೆ ಅಪ್ಪಣೆಯಾಗಬೇಕೆಂದು ಅರಿಕೆ ಮಾಡಿ ಕೊಂಡಲ್ಲಿ ಹಾಗೆ ಆಗಲಿ ಎಂದು ರಾಯರ ಅಪ್ಪಣೆ ಆದಲ್ಲಿ ಅದೇ ಮಂದಿ ಕುದುರೆ ತೆಗೆದು ಕೊಂಡು ಹೋಗಿ ಜಾಲಿಹಾಳ ಕೋಟೆ ತೆಗೆದುಕೊಂಡು ಯಡವಮುರಾರಿ ಎಂಬುವನ ಕೈಸೆರೆ ಹಿಡಿತಂದು ರಾಯರಿಗೆ ಒಪ್ಪಿಸಿದಲ್ಲಿ ಮಹಾ ಸಂತೋಷವಂ ಪಟ್ಟು ಭದ್ರಯ್ಯ ನವರಿಗೆ ಸದಾಶಿವನಾಯಕರು ಎಂಬ ಹೆಸರು ಕೊಟ್ಟು, ಪಟ್ಟವ ಕಟ್ಟಿ, ಯಡವ ಮುರಾರಿ, ಬಲವ ಮುರಾರಿ, ಕೋಟೆ ಕೋಲಾಹಲ, ಬಿಸಕವೈದ್ಯೇಕ ಶಿವಭಕ್ತ ಪಾರಾಯಣರೆಂದು ಬಿರುದಂ ಕೊಟ್ಟು ಹಸಿರು ನಿಸಾನಿ ವಾಜಾರಿಕೆಯಂ ಕೊಟ್ಟು ಈ ಸದಾಶಿವನಾಯಕರಿಗೆ ಮೇಲೆ ಬರೆದ ಹಳ್ಳಿಗಳ ಅಮರವಾಗಿ ಕೊಟ್ಟರು ಶಕವರುಷ ಸಾವಿರದ ನಾನೂರ ಅರವತ್ತೆರಡನೆಯ (೧೪೬೨) ವಿಕಾರಿ ಸಂವತ್ಸರದಲ್ಲಿ ಪುನಃ ಕೆಳದಿ ಸ್ಥಳಕ್ಕೆ ಬಂದು ಎರಡು ವರ್ಷದ ಮೇಲೆ ಈ ಸದಾಶಿವನಾಯಕರು ಡಿಳ್ಳಿಗೆ ಪಯಣವಾಗಿ ಹೋಗಿ ನಾಥನವರ ಕಾಣಿಸಿಕೊಂಡು ತನ್ನ ಸುಖದುಃಖವನ್ನು ಅರಿಕೆ ಮಾಡಿಕೊಂಡಲ್ಲಿ ಹಾಗೆ ಆಗಲಿ ಎಂದು ಅಪ್ಪಣೆಯಾದಲ್ಲಿ ಕೆಲವು ದಿವಸದ ಮೇಲೆ ಆ ಸ್ಥಳದಲ್ಲಿ ಇಂದ ಸಿದಿಜಯನಾ ಭೆಟ್ಟಿಯಾಗಿ ಅವರ ಬಿರುದಂ ತೆಗೆದು ನಾಥನವರಿಗೆ ಬಂದು ಸದಾಶಿವನಾಯಕರು ಅರಿಕೆ ಮಾಡಿಕೊಂಡು ಅವರ ಮೇಲೆ ಯುದ್ಧಕ್ಕೆ ಅಪ್ಪಣೆ ಯಾಗಬೇಕೆಂದು ಅರಿಕೆ ಮಾಡಿಕೊಂಡಲ್ಲಿ ಹಾಗೆ ಆಗಲಿ ಎಂದು ಅಪ್ಪಣೆಯದಲ್ಲಿ ಅವನಿಗೂ ಈತನಿಗೂ ಲಡಾಯಿ ಮಾಡಿ ಅವನ ಹೊಡೆದು ನಾಥನವರಿಗೆ ಕಾರ್ನಾಸು ಮಾಡಿ ನಿಂತಲ್ಲಿ ಅವರು ಮೆಚ್ಚಿ ಉಚಿತ ಉಡುಗೊರೆ ಹಸಿರು ನಿಶಾನಿ ಪೈಜಾರು ಸಹ ಕೊಟ್ಟು ಕೆಳದಿ ಕಣನಾಥ ಎಂಬ ಬಿರುದ ಪಡಕೊಂಡರು. ಆ ಸ್ಥಳದ ವೀರಭದ್ರ

ದೇವರ ಗುಡಿಯಲ್ಲಿ ಈ ಸದಾಶಿವಾನಾಯಕರು ಬಿಡಾರವ ಮಾಡಿಕೊಂಡು ಇರುತ್ತಾ ಇದ್ದಲ್ಲಿ ನಿಮ್ಮ ಸ್ಥಳಕ್ಕೆ ತೆಗೆದುಕೊಂಡು ಹೋಗು ಎಂದು ಪ್ರತ್ಯಕ್ಷವಾದಲ್ಲಿ ಈತನು ಸಂತೋಷವಂಬಟ್ಟು ಪುನಃ ನಾಥನವರಲ್ಲಿಗೆ ಹೋಗಿ ಸ್ಥಳಕ್ಕೆ ಹೋಗಬೇಕೆಂದು ಅರಿಕೆ ಮಾಡಿಕೊಂಡಲ್ಲಿ ಹಾಗೆ ಆಗಲಿ ಎಂದು ಅಪ್ಪಣೆ ಕೊಟ್ಟರು. ಈ ಸದಾಶಿವ ನಾಯಕರು ಬರುವಾಗ ದೇವರ ಅಪ್ಪಣೆ ಕೇಳುವಲ್ಲಿ ವೀರಭದ್ರ ದೇವರು ನಾವು ಬರು ತ್ತೇವೆ ಪ್ರತಿಮೆನುವಾ ತೆಗೆದುಕೊಂಡು ಹೋಗು ಎಂದು ಅಪ್ಪಣೆಯಾದಲ್ಲಿ ಆ ದೇವರು ಸಹ ತೆಗೆದುಕೊಂಡು ಇವರು ಪಯಣವಾಗಿ ಬರುವ ದಾರಿಯಲ್ಲಿ ಮಿರ್ಜಿಶಹರ ಕಂಡು ಅಲ್ಲಿ ಉಳಿದುಕೊಂಡಲ್ಲಿ ಆ ಸ್ಥಳದ ನಾಯಕರು ಸೆಟ್ಟು ನಿಮಗೆ ಯಾವ ಸ್ಥಳ ಎಂದು ಕೇಳಿದಲ್ಲಿ ನಮಗೆ ಟಿಂಕಲುನಾಡು ಕೆಳದಿಯ ಸ್ಥಳದ ಅರಸು ಎಂದು ಹೇಳಿದಲ್ಲಿ ಅವರು ಸಂತೋಷವಂಬಟ್ಟು ಇತ್ತ ಎಲ್ಲಿ ಪಯಣವಾಗಿ ಇದ್ದೀರಿ ಎಂದು ಕೇಳುವಲ್ಲಿ ಡಿಲ್ಲಿಗೆ ಹೋಗಿ ನಾಥನವರ ಬೆಟ್ಟ ತೆಗೆದುಕೊಂಡು ಅಲ್ಲಿಂದ ಸಂಧಿ ಹೊಡೆದು ಕೆಳದಿ ನಾಥ ಎಂದು ಬಿರುದು ಪಡೆದುಕೊಂಡು ನಿಮ್ಮ ಸ್ಥಳಕ್ಕೆ ಬರುತ್ತೇವೆಯೆಂದು ಹೇಳಿ ಕೊಂಡಲ್ಲಿ ಹಾಗೆಯೇ ಆಗಲಿ ಎಂದು ಅಪ್ಪಣೆ ಕೊಟ್ಟಲ್ಲಿ ಈ ಸದಾಶಿವನಾಯಕರು ಮಾರ್ಗಸ್ಥರಾಗಿ ಬರುವಾಗ್ಗೆ ಬೆನ್ನು ಹತ್ತಿಬಂದರು.

ಶಿರಗಪ್ಪ ಶೆಟ್ಟರು ಮಾನಪ್ಪಶೆಟ್ಟರು, ಚೋಳಪ್ಪಶೆಟ್ಟರು, ಗರ್ಜನ ವೀರಪ್ಪ ಶೆಟ್ಟರು, ಚೋರುಡಿ ಭದ್ರಪ್ಪ ಶೆಟ್ಟರು, ಸಿದ್ಧಪ್ಪನಾಯಕರು, ಶೀಲವಂತ ಶಿವಪ್ಪನವರು ಸಹ ಇವರ ಬೆನ್ನು ಹತ್ತಿ ಬಂದಲ್ಲಿ ಇವರಿಗೆ ಸ್ಥಳಮನೆ ಕಟ್ಟಿಸಿಕೊಟ್ಟು ಗುರಿಕಾರಿಕೆ ಕೊಟ್ಟು ಇಟ್ಟರು. ಮೂರು ವರ್ಷದ ಮೇಲೆ ಶ್ರೀ ವೀರಭದ್ರದೇವರ ಸ್ವಪ್ನವಾಗಿ ಇಕ್ಕೇರಿ ಕೋಟೆ ಕಟ್ಟಿ ಶಿಲಗೋರ ವೀರಭದ್ರ ಎಂಬ ಹೆಸರಿಟ್ಟು ದೇವರ ಪ್ರತಿಷ್ಠೆ ಯನ್ನು ಮಾಡಿಕೊಂಡು ದೇವರ ಅಪ್ಪಣೆಯಾದಲ್ಲಿ ಸದಾಶಿವನಾಯಕರು ತಾವು ಕೆಳದಿ ಬಿಟ್ಟು ಇಕ್ಕೇರಿ ಕೋಟೆ ಕಟ್ಟಿ ದೇವರ ಪ್ರತಿಷ್ಠೆ ಮಾಡಿ ಸಂಸ್ಥಾನ ಮಾಡಿಕೊಂಡು ಇರುತ್ತಾ ಇದ್ದಲ್ಲಿ ಸದಾಶಿವನಾಯಕರ ಕುಮಾರ ಹಿರೆ ಸಂಕಣ್ಣನಾಯಕರಿಗೆ ಪಟ್ಟವ ಕಟ್ಟಿದ ಮೇಲೆ ಸೋಲೆಯರ ಮೇಲೆ ದಂಡೆತ್ತಿ ಹೋಗಿ ಜಯಪ್ರದ ಮಾಡಿಕೊಂಡು ಬಂದಲ್ಲಿ ಆ ಮೇಲೆ ರಾಮರಾಜನಾಯಕರಿಗೆ ಪಟ್ಟವಾದ ಮೇಲೆ ಬಲ್ಲಾಳ್ಳಿ, ಸೋದೆ, ಬೇಲೂರು, ಚನ್ನರಾಯಪಟ್ನ, ಹಳೇಬೀಡು, ತರೀಕೆರೆ, ಬಸವಾಪಟ್ನ, ಹರಿಹರ, ಬೆಳಗುತ್ತಿ, ಕಾಲೆದುರ್ಗ, ಕೊಡಗು, ನಾಯಮರ ಸೀಮೆ, ಮಾವಳೇರು, ಬಸವರಾಜ ದುರ್ಗ, ಸುಬ್ರಮಣ್ಯ, ಹೊನ್ನಾವರ, ಬಿಳಗಿ ಸಹ ಈ ರಾಜ್ಯ ಕಟ್ಟಿಕೊಂಡು ಪಾಳೆ ಗಾರರ ಮುರಿದು ಇರುತ್ತಾ ಇದ್ದಲ್ಲಿ ವೆಂಕಟಪ್ಪನಾಯಕರಿಗೆ ಪಟ್ಟವಾದ ಮೇಲೆ ಮೊಗಲರ ದಂಡು ಬಂದು ಜಡೆ, ಕುಬಟೂರು, ಶಿವಪುರ, ಅಂಡಗಿ, ಮೊಳೆಹಳ್ಳಿ, ತವ ನಂದಿ ಸಹ ಸೀಮೆಹಾಳು ಮಾಡಿದಲ್ಲಿ ಪುನಃ ಹಿಂದಕ್ಕೆ ಕಳುಹಿದರು. ಶಕವರುಷ

ಸಾವಿರದ ಐನೂರು ನಲವತ್ತನೆಯ (೧೫೪೦) ವಿಭವ ಸಂವತ್ಸರದಲ್ಲಿ ಶಕವರುಷ ಸಾವಿರದ ಐನೂರ ನಲವತ್ತೊಮ್ಬರನೆಯ (೧೫೪೩) ಪ್ರಜೋತ್ಪತ್ತಿ ಸಂವತ್ಸರದಲ್ಲಿ ವೀರ ಭದ್ರ ನಾಯಕರಿಗೆ ಪಟ್ಟವಾದ ಮೇಲೆ ಮೊಗಲರ ದಂಡು ಬಂದು ಇಕ್ಕೇರಿ ಶಾಹಾರ ಹಾಳು ಮಾಡಿ ಆ ಘೋರ ವೀರಭದ್ರ ದೇವಸ್ಥಾನದ ಬಾಗಲ ಪರಿಯಂತಾ ದಂಡು ಬಂದಲ್ಲಿ ವೀರಭದ್ರನಾಯಕರು ತಾವೇ ಬತ್ತಲಗುದರಿಯನೇರಿ ಆ ದಂಡಿನ ಮೇಲೆ ಈ ಸ್ಥಳ ತಮ್ಮದು ಮಾಡಿಕೊಂಡು ಜಯಪ್ರದ ನೋಡಿ ಮನಸ್ಸಿಗೆ ಸಂತೋಷವಂ ಬಟ್ಟು ನಾವಾದಿಕರ ಕಡೆ ಯೋಚನೆ ಮಾಡಿ ಇಕ್ಕೇರಿ ಮುರಿದು ಇಲ್ಲಿ ಕಟ್ಟಬೇಕು ಎಂದು ಯೋಚನೆ ಮಾಡಿ ಸಂಸ್ಥರೂ ಕೂಡಿ ಕಟ್ಟಿಸಿ ಬಿದನೂರು ಎಂಬ ಹೆಸರ ಇಟ್ಟರು. ಶಕವರುಷ ಸಾವಿರದ ಐನೂರ ಐವತ್ತೆಂಟನೆಯ (೧೫೫೮) ವ್ಯಯ ಸಂವತ್ಸರದಲ್ಲಿ ಬಿದನೂರಲ್ಲಿ ಶಿವಪ್ಪನಾಯಕರಿಗೆ ಪಟ್ಟವಾದ ಮೇಲೆ ಇವರು ಹದಿನೈದು ವರುಷ (೧೫) ತಮ್ಮ ವೆಂಕಟಪ್ಪನಾಯಕನಿಗೆ ಒಂದು ವರ್ಷ. ಭದ್ರಯ್ಯನಾಯಕರಿಗೆ ಪಟ್ಟ ಎರಡೂವರೆ ವರ್ಷ ಸೋಮಶೇಖರ ನಾಯಕರಿಗೆ ಪಟ್ಟ ಏಳೂವರೆ ವರ್ಷ ಇವರು ದೀಕ್ಷವಾದರು.

ಚೆನ್ನಮ್ಮಾಜಿಯವರು ಇಪ್ಪತ್ತಾರು ವರ್ಷ ಆಳಿದರು. ಬೂದೆ ಬಸಪ್ಪನಾಯಕರು ಹದಿನೇಳು ವರ್ಷ ಆಳಿದರು. ಸೋಮಶೇಖರನಾಯಕರ ಪಟ್ಟ.

ಅನುಬಂಧ — ೩

## ಹುಲಿಕೆರೆ ಮಠಕ್ಕೆ ಕೊಟ್ಟ ತಾಮ್ರದ ದಾನ ಶಾಸನ

ಓಂ ನಮಃ ಶಿವಾಯ

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ।
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ॥ ೧ ॥

ಯೇನಾಸ್ಮಿನ್ ಭವಸಾಗರೇ ಪರಿಚರತ್ ಕಾಮೋರ್ಮಿವ್ಯಾಪ್ತೇ ಮಯಾ ।
ಕ ಸ್ತ್ರಾತಾ ನ ಮಮೇತಿ ವಿಹ್ವಲದೃಶಾ ಸಂಲಕ್ಷಿತಃ ಸರ್ವತಃ ॥
ತಂ ಮಾಮೇವ ದಯಾರ್ದ್ರಿತ ಮನಾ ಅನ್ವೀಕ್ಷ್ಯ ಸಂವಿಶ್ಯ ಯಃ ।
ಸಂವಿನ್ನಾವಿ ವ್ಯತಾರಯತ್ ಸಜಯತಿ ಶ್ರೀ ಚನ್ನವೀರೋ ಗುರುಃ ॥ ೨ ॥

ಅಸ್ಮದ್ರಾಜ ಕುಲಾಚಾರ್ಯ ಪಟ್ಟಬಂಧ ವಿಭೂಷಿತಃ ।
ಕೆಲದೀ ರಾಜಧಾನ್ಯಾಯಃ ಸುಶೋಭಿತ ಮಠಾಧಿಪಃ ॥ ೩ ॥

ಶ್ರೀ ಗಂಗಾಂಬಿಕಯಾ ಯುಕ್ತಃ ಶಂಕರೋಂಬಿಕಯೇವ ಯಃ ।
ಪಠಮಾರಾಧ್ಯಮೂರ್ತಿರ್ವೈ ಪಾಶಚ್ಛೇದ ವಿಚಕ್ಷಣಃ ॥ ೪ ॥

ವಿರಾಜತೇ ಸ್ಮಚ್ಛ್ರೇಯೋರ್ಥಂ ಶಿವಾರಾಧನಲಾಲಸಃ ।
ಸಶ್ರೀ ಚನ್ನವೀರಾಖ್ಯೋಗುರುರ್ವಿಜಯತೇತರಾಮ್ ॥ ೫ ॥

ತದ್ಗುರೋಃ ಕರಕಂಜಾಚ್ಚ ಸಂಜಾತಃ ಸತ್ತ್ವರಂಜಿತಃ ।
ಸಕಲಾಗಮ ನಿಷ್ಣಾತಃ ಸರ್ವಪಾರ್ಥಿವ ಪುಂಗವಃ ॥ ೬ ॥

ಪೃಥ್ವೀ ಮಂಡಲವರ್ತಿ ಪಾರ್ಥಿವಕುಲೇ ದೋರ್ದಂಡ ಕರ್ಪೇಣ ಚ ।
ಜ್ಞಾನಾದಾರ್ಯದಯಾದಿ ಮಂಡನ ಗುಣೈಃ ಸರ್ವಾನತಿಕ್ರಮ್ಯವೈ ॥

ವಂಶಾದ್ಯಸ್ತುತ ಚೌಡನಾಯಕ ನೃಪ ಪ್ರಾರಂಭಿತೇ ರಾಟ್ಕುಲೇ ॥
ಸಂಜಾತೋ ಬಸವಕ್ಷಿತೀಂದ್ರ ವಿಬುಧೋ ರಾರಾಜತೇ ವರ್ಚಸಾ ॥ ೭ ॥

ಯಸ್ಯ ಮಾತಾ ಚನ್ನಮಾಂಬಾ ಪಿತಾಶ್ರೀ ಸೋಮಶೇಖರಃ ।
ಸಶ್ರೀ ಬಸವರಾಜೇಂದ್ರೋ ಭಾರತೀ ನರ್ತನ ಸ್ಥಲಃ ॥ ೮ ॥

ಅಥ ಸ್ವಸ್ತಿಶ್ರೀ ಪರಮೇಶ್ವರ ಪ್ರಸಾದಾಸಾದಿತ - ಯಡ ಮುರಾರಿ ಕೋಟೇ ಕೋಲಾಹಲ ಏಕಾಂಗವೀರ ಪಶ್ಚಿಮ ಸಮುದ್ರಾಧೀಶ್ವರ ರಾಜಾಧಿರಾಜ ಶ್ರೀ ಶಿವಾದ್ವೈತ ವಿದ್ಯಾವಿಶಾರದ ಶ್ರೀಮತ್ ಕೆಳದೀ ಬಸವರಾಜ ಕ್ಷಿತೀಂದ್ರೇಣ ಅತ್ರಭವತಾಂ ಅಸ್ಮತ್ ಕುಲಗುರು ಶ್ರೀ ಚನ್ನವೀರ ಸ್ವಾಮಿನಾಂ ಸಾಕ್ಷ್ಯಪೂರ್ವಕಂ —

ಕಲ್ಮರಡೀ ಕರಡೀ ಗವೀತಿ ಪ್ರಥಿತೇ ಸ್ಥಾನದ್ವಯೇ ನಿರ್ಜನೇ ।
ಭಕ್ತಾನೀಕ ಹಿತಾಯ ಯೇನ ಚರಿತಂ ಶೈವಂ ತಪಃ ಸಾದರಂ ॥
ತಸ್ಮೈ ವ್ಯಾಘ್ರ ತಟಾಕ ಪತ್ತನ ಮಠಾಧೀಶಾಯ ಸದ್ಯೋಗಿನೇ ।
ತತ್‌ಕ್ಷೇತ್ರ ತ್ರಯ ಸ್ವಾಮಿನೇ ಮರುಳಸಿದ್ಧಾಚಾರ್ಯ ವರ್ಯಾಯತೇ ॥ ೯ ॥

ಅಥ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕಾಬ್ದೇ
ಪ್ರವರ್ತಮಾನ ಸ್ಥಿರಾಗ್ನಿಋತುಚಂದ್ರ ಸಂಖ್ಯಾಪರಿಮಿತೀ
ಸರ್ವಧಾರಿೀ ಸಂಪನ್ನಭೋಮಾಸಿ ಗುರುವಾಸರೇ ಚತುರ್ದಶ್ಯಾಂ
ತಿಥೌ ಖಲು ಮನ್ಮಾತುಃ ಶ್ರೀ ಚನ್ನಮಾಂಬಾಯಾಃ ಶಿವಗಣಾರಾಧ
ನೋತ್ಸವಾವಸರೇ ಸ್ಮದ್ರಾಜಧಾನೀಂ ಸಮಾಗತಾಯ
ಶ್ರೀಮತ್ ಪಂಡಿತಾರಾಧ್ಯ ಶಾಖಾಮಂಡನಾಯ ಪರಮರ್ಷಯೇ
ಭವತೇ ದ್ಯ ಅಸ್ಮತ್ ಸ್ಥಿತಾ ಭೂಮಿಶ್ಚ ಶ್ರೀ ಗುರು ಪೂಜಾ
ವಿನಿಯೋಗಾರ್ಥಂ ಪ್ರದತ್ತಾ ಪುಣ್ಯಾರ್ಥಿನಾ ಮಯಾ ।
ಏತದ್ಭೂಮೇಃ ಚತುಃ ಸೀಮಾರೇಖಾ ಚ ಯಥಾ - ತತ್
ಕ್ಷೇತ್ರ ಮಂದಿರಾತ್ ಪೂರ್ವದಿಶಿ ಪಂಚಶತವ್ಯಾಮಃ । ದಕ್ಷಿಣ
ದಿಶಿಚ ಪಂಚಶತವ್ಯಾಮಃ । ಪಶ್ಚಿಮದಿಶಿ ಪಂಚಶತವ್ಯಾಮಃ ।
ತಥಾ ಕುಬೇರ ದಿಶಿ ಪಂಚಶತವ್ಯಾಮಃ । ಏವಂ ಚತುರಸ್ರಂ
ಸ್ಥಿತಾಯಾ ಭೂಮೇರ್ಯದ್ಯತ್ ಪ್ರರೋಹತಿ ಫಲತಿ ಚ
ತತ್ತದಖಿಲಂ ಧಾನ್ಯಂ ಫಲಂ ಚಾದ್ಯ ಪ್ರಭೃತಿ - ಭವದ್ಭ್ಯಃ
ಆರಭ್ಯ ಭವದ್ಗುರು ವಂಶ ಪಾರಂಪರ್ಯೇಣೋತ್ತರೋತ್ತರಂ
ನಿಧಿನಿಕ್ಷೇಪಾದ್ಯಷ್ಟ ಭೋಗ ಸ್ವಾತಂತ್ರ್ಯೇಣಾನುಭೂ
ಯಾದಿತಿ ಸಹಿರಣ್ಯೋದಕ ದಾನ
ಧಾರಾಪೂರ್ವಕಂ ಪ್ರದತ್ತಂ ದಾನ ಶಾಸನಮಿದಮ್ ।
ಅತ್ರ ಸಾಕ್ಷಿಣಸ್ತು -

ಆದಿತ್ಯ ಚಂದ್ರಾವನಿಲೋ ನಲಶ್ಚದ್ಯೌರ್ಭೂಮಿ ರಾಪೋ ಹೃದಯಂ ಯಮಶ್ಚ
ಅಹಶ್ಚ ರಾತ್ರಿಶ್ಚ ಉಭೇ ಚ ಸಂಧ್ಯೇ ಧರ್ಮಶ್ಚ ಜಾನಾತಿ - ನರಸ್ಯವೃತ್ತಮ್ ॥

ಸ್ವದತ್ತಾದ್ದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ ।
ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್ ॥

ದಾನಪಾಲನಯೋರ್ಮಧ್ಯೇ ದಾನಾಚ್ಛ್ರೇಯೋನು ಪಾಲನಂ ।
ದಾನಾತ್ ಸ್ವರ್ಗಮವಾಪ್ನೋತಿ - ಪಾಲನಾದಚ್ಯುತಂ ಪದಂ ॥

ಯಾನಿ ಹತ್ಯಾನಿ ಪಾಪಾನಿ ಕೂಟ ಸಾಕ್ಷ್ಯಾದಿಕಾನಿ ಚ ।
ಸರ್ವಂ ಭೂಮೇಃ ಪ್ರದಾನೇನ ನರಸ್ತರತಿ ಸರ್ವದಾ ॥

ಚೈತನ್ಯಂ ಶಾಶ್ವತಂ ಶಾಂತಂ ವ್ಯೋಮಾತೀತಂ ನಿರಂಜನಂ ।
ನಾದ ಬಿಂದು ಕಲಾತೀತಂ ತಸ್ಮೈ ಶ್ರೀಗುರವೇ ನಮಃ ॥

ಇತಿ ಶ್ರೀ ಕಲ್ಮಠಡೀ ಮಠಾದಿ ಮಠತ್ರಯಾಧೀಶಸ್ಯ ಶ್ರೀಮನ್
ಮರುಳಸಿದ್ಧ ಶಿವಾಚಾರ್ಯಸ್ಯ ಪಾದಾರವಿಂದಾರ್ಪಣಮಸ್ತು ॥

ಶ್ರೀ ಸದಾಶಿವಃ

## ಅನುಬಂಧ - ೪

### ಕೆಳದಿ ಬಸವರಾಜೇಂದ್ರ ಅರಸರು ತಮ್ಮ ಗುರುಗಳಾದ ಶ್ರೀ ಚನ್ನವೀರಸ್ವಾಮಿಗಳಿಗೆ ಕೊಟ್ಟ ಭೂದಾನದ ತಾಮ್ರ ಶಾಸನವು

..........................................................................

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರಚಾರವೇ ।
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ॥ ೧ ॥

ಯೇನಾಸ್ಮಿನ್ ಭವಸಾಗರೇ ಪರಿಚರತ್ ಕಾಮೋರ್ಮಿವ್ಯಾಪ್ತೇಮಯಾ ।
ಕಸ್ತ್ರಾತಾ ನಮಮೇತಿ ವಿಹ್ವಲದೃಶಾ ಸಂಲಕ್ಷಿತಸ್ಸರ್ವತಃ ॥ ೨ ॥

ತಂ ಮಾಮೇವ ದಯಾರ್ದ್ರಿತ ಮನಾ ಅನ್ವೀಕ್ಷ್ಯ ಸಂವಿಶ್ಯಯಃ ।
ಸಂವಿನ್ನಾವಿ ವ್ಯತಾರಯತ್ ಸಜಯತಿ ಶ್ರೀ ಚನ್ನವೀರೋಗುರುಃ ॥ ೩ ॥

ಭಾವ ಪ್ರಾಣೇಷ್ಟಲಿಂಗಾದಿ ಮಮಾಂಗೇ ಸ್ಥಾಪ್ಯ ಮುದಾ ಚ ಯಃ ।
ತಸ್ಮೈ ಶ್ರೀ ಚನ್ನವೀರೇಶ ವಿದುಷೇ ಪ್ರಭವೇ ನಮಃ ॥ ೪ ॥

ಆದ್ಯಶ್ರೀ ಕೆಂಚವೀರೇಶ ಶಿವಾಚಾರ್ಯಾನ್ವಯಾ ಗತಃ ।
ಸ್ಕಂದಗೋತ್ರ ಸಮುತ್ಪನ್ನಃ ಶಿವಸಿದ್ಧಾಂತ ಕೋವಿದಃ ॥ ೫ ॥

ಗಂಗಾದೇವೀತಿ ಯಸ್ಯಾಸ್ತಿ ಭಾತಿ ವಿದ್ಯಾವತೀ ಸತೀ
ತಯಾ ವಿನೀತಯಾ ಯುಕ್ತೋ ಧರ್ಮಾಚಾರ ಪರಾಯಣಃ ॥ ೬ ॥

ಅಸ್ಮದ್ರಾಜ ಕುಲಾಚಾರ್ಯ ಪಟ್ಟಬಂಧ ವಿಭೂಷಿತಃ ।
ಕೆಲದೀ ರಾಜಧಾನ್ಯಾಂಚ ಸಂಸ್ಥಾಪಿತ ಮಠಾಧಿಪಃ ॥ ೭ ॥

ವಿರಾಜತೇಸ್ಮ ಚೈರ್ಯೋರ್ಥಂ ಶಿವಾನುಷ್ಠಾನ ತತ್ಪರಃ ।
ಸಶ್ರೀ ಚನ್ನವೀರಾಖ್ಯಗುರುರ್ವಿಜಯತೇತರಾಂ ॥ ೮ ॥

ಅಥೇದಾನೀ ಮತ್ರ ಭವತೇ ಸಂಲಿಖ್ಯತೇ ಖಲು ದಾನ ಶಾಸನ ।
ಮಿದಂ ತದ್ಯಥಾ ಪೃಥ್ವೀ ಮಂಡಲ ವರ್ತಿ ಭೂಧವ
ಕುಲೇ ದೋರ್ದಂಡ ಕಾರ್ಯೇಣಚ । ಜ್ಞಾನಾದಾರ್ಯದ
ಯಾದಿ ಮಂಡನ ಗುಣೈಸ್ಸರ್ವಾನತಿಕ್ರಮ್ಯಯಃ ॥ ೯ ॥

ಅದ್ಯಶ್ರೀ ನೃಪ ಚೌಡನಾಯಕ ಸುತೋ ರಾರಾಜತೇ ಭಕ್ತ್ಯಯಾ।
ಶ್ರೀಮದ್ರಾಜಮಣಿಸ್ಸದಾಶಿವ ಇತಿಶ್ರೀ ಕೆಲದೀ ಶೀಶ್ವರಃ ॥ ೧೦ ॥

ತತ್ಸದಾಶಿವ ರಾಜೇಂದ್ರಾಜ್ಞಾತಃ ಸಂಕಣ್ಣ ಭೂಪತಿ
ಸ್ತಸ್ಮಾತ್ ಸಿದ್ಧಪರಾಜೇಂದ್ರಃ ಶಶಾಸ ಧರಣೀತತಃ ॥ ೧೧ ॥

ಪ್ರತ್ಯರ್ಥಿ ಭೂಧವಕುಲ ಸ್ತ್ರೀ ಮಾಂಗಲ್ಯ ವಿನಾಶಕಃ ।
ಶಿವಪ್ಪನಾಯಕ ಸ್ತಸ್ಮಾತ್ ಸೋಮಶೇಖರನಾಯಕಃ ॥ ೧೨ ॥

ದಿವ್ಯತ್ ಸದ್ಗುಣ ಸೋಮಶೇಖರ ನೃಪೇ ಭಕ್ತೌಘ ಚೂಡಾಮಣೌ ।
ಕಾಲೇನಾಥ ಗತೇನ ಶೈವ ಪದವೀಂ ಪ್ರಾಪ್ತೇಚ ತಸ್ಮಿಂಸ್ತದಾ ॥ ೧೩ ॥

ತತ್ಪತ್ನೀವರ ವೈರಿಮಸ್ತಕ ಪದಾ ಸಂಸ್ಥಾಪ್ಯ ಮಾನಾಬುಧೈಃ ।
ತತ್ಕೃತ್ಸ್ನಾಂ ಅವನೀಂ ಶಶಾಸ ವಿಮಲಾ ಶ್ರೀ ಚನ್ನಮಾಂಬಾಸ್ವಯ ॥
ಯಸ್ಯಮಾತಾ ಚನ್ನಮಾಂಬಾ ಪಿತಾಶ್ರೀ ಸೋಮಶೇಖರಃ ।
ಸಶ್ರೀ ಬಸವರಾಜೇಂದ್ರೋ ಭಾರತೀ ನರ್ತನ ಸ್ಥಲಃ ॥ ೧೪ ॥

ಅಥ ಸ್ವಸ್ತಿಶ್ರೀ ಪರಮೇಶ್ವರ ಪ್ರಸಾದಾಸಾದಿತ ಯಡಮಮುರಾರಿ ಕೋಟಿ ಕೋಲಾಹಲ ಏಕಾಂಗವೀರ ಪಶ್ಚಿಮ ಸಮುದ್ರಾಧೀಶ್ವರ ರಾಜಾಧಿರಾಜ ಶ್ರೀ ಶಿವಾದ್ವೈತ ವಿದ್ಯಾವಿಶಾರದ ಶ್ರೀಮತ್ಕೆಲದೀ ಬಸವರಾಜ ಕ್ಷಿತೀಂದ್ರೇಣ ಶ್ರೀಮದ್ರಾಜಗುರು ಶ್ರೀ ಚನ್ನವೀರಸ್ವಾಮಿ ಪಾದಾಭ್ಯಾಂ ಪ್ರದತ್ತಂ ಭೂದಾನ ಶಾಸನಮಿದಂ ॥ – ತದ್ಯ ಥಾಸಾರ್ಧನದಶತಾಧಿಕ ಷಟ್ ಸಹಸ್ರ ಬನದಗದ್ಯೇ ಇತಿನಾಮ ಗ್ರಾಮಸ್ಥಿತಾಂ ೬೯೫೦ ಸಂಖ್ಯಾ ಕಕ್ರಮುಕ ವೃಷಧಾರಾದ್ವಾಚ್ಯಶೀಲೆ ಗದ್ಯಾಣವರಹ " ಆದಾಯವಲೀ ಚೋದ್ಯಾನ ಭೂಮಿರೇತಚ್ಚತುಸ್ಸೀಮಾಂತ ಚಿನ್ಹಂ ಯಥಾ । – ಪೂರ್ವದಿಶಿ ಬನದ ಗದ್ದೆ ತಟಾಕಸ್ಯಾಧಿಕ ಜಲನಿರ್ಗಮ ಸ್ಥಾನಂ । ನ್ಮರಸ್ಯ ಪಂಥಾ ಪಶ್ಚಿಮದಿಶಿ । ಮನ್ಮಾತೃ ಶ್ರೀ ಚನ್ನಮಾಂಬಾ ಜ್ಞಾನುಸಾರಂ ಮಯ್ಯೈವ ನಿರ್ಮಾಪಿತ ಭವ ಉತ್ತರ ದಿಶೀ – ಮಾತೃಶ್ರೀ ಚನ್ನಮಾಂಬಾಯಾ ಭವತ್ ಪಿತೃವರ್ಯ ಶ್ರೀ ಶಿವಲಿಂಗ ಸ್ವಾಮಿ ಪಾದಾಭ್ಯಾಂ ಪ್ರದತ್ತಂ ಕ್ರಮುಕೋದ್ಯಾನಂ । – ದಕ್ಷಿಣದಿಶಿ । – ಕೆಲದೀ ಮಹಾ ತಟಾಕಸ್ಯೋಪರಿ ಸ್ಥಿತ – ಶಾಲೇಯ ಕ್ಷೇತ್ರಂ । – ಏವಮೇತತ್ ಚತುಸ್ಸೀಮಾ ಮಧ್ಯಂಗತಾ ಭೂಮಿಃ ಅಪಿಚ ದ್ವಿತೀಯಾ ಕೆಳದಿ ಪುರ ಗ್ರಾಮೇಸ್ಥಿತಾ ಶಾಲೇಯ ವನಭೂಮಿಃ ೩೮ ಗದ್ಯಾಣವರಹ, ಲೆಸ್ಯೋಚಿತಾದಾಯವತೀಚ ಅಸ್ಯಾಃ ಸ್ಸೀಮಾಂತ ಚನ್ಹಂಯಥಾ । –

ಪೂರ್ವದಿಶಿ - । - ಬೇಳೂರ ಗ್ರಾಮ ಸೀಮಾ ಏವಾವಧಿಃ । -
ಪಶ್ಚಿಮದಿಶಿ - । - ಕೆಲದೀ ಗ್ರಾಮಸ್ಯ ಮಹಾತಟಾಕಃ
ಉತ್ತರದಿಶಿ - । - ಕೆಲದೀಪುರ ಗ್ರಾಮಸ್ಯೋಪರಿಸ್ಥಿತಾ ರಾಜವೀಧೀ
ದಕ್ಷಿಣ ದಿಶಿ - । - ಕೆಲದೀ - ಮಾಲವೀ ಗ್ರಾಮದ್ವಯಾಟವೀ

ಏವಂಸ್ಥಿತೇ - ತದ್ಭೂಗ್ರಾಮದ್ವಯೇ ಯದುತ್ಪದ್ಯತೇ ತಜ್ಞಾಖಿಲ ಫಲವೇತಚ್ಛ್ರೀ ಮದ್ಗುರು ಚನ್ನವೀರಗುರೋರಾರಭ್ಯ ತತ್ಪುತ್ರಪೌತ್ರ ಗುರುಪಾರಂಪರ್ಯೇಣ ವಿಭಜ್ಯಾ ನಿಶಮಖರ್ವ ಸ್ವಾತಂತ್ರ್ಯ ಪೂರ್ವಕಂ ಅನುಭವೇದಿತಿ । -

ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕಾಬ್ದೇ ಪ್ರವರ್ತಮಾನ ¦ (ಸ್ಥಿರಾಗ್ನಿ ರುತುಚಂದ್ರ) ಸಂಖ್ಯಾಪರಿಮಿತೇ ಸರ್ವಧಾರಿ ಸಂಪನ್ನ ಭೋಮಾಸ ಗುರುವಾಸರ ಚತುರ್ದಶ್ಯಾಂ ತಿಥೌ ಮದ್ವಿಜ್ಞಾಪನಾನುಸಾರಂ ರಾಜ ಬಿರುದಾಂಕಿತಾಂ ದೋಲಿಕೋತ್ಸವೇನ ರಾಜಮಂದಿರಮಧ್ಯಾಗತಾನಾಂ ಅತ್ರಭವತಾಂ ಮಹಾಪಾದಪೂಜಾ ಶಿವಾರ್ಪಣಾದ್ಯನಂತರಂ ಮನ್ಮಾತೃ ಶ್ರೀ ಚಿನ್ನಮಾಂಬಾಯಾಃ ಶಿವಸಾಯುಜ್ಯ ಪ್ರಾಪ್ತ್ಯರ್ಥಂ ಅಸ್ಮದನ್ವಯ ಪಾವನಾರ್ಥಂ ರಾಜತ್ವಪದವೀ ಸುಪ್ರತಿಷ್ಠಾರ್ಥಂ - ಮಮರಾಜ್ಯಸ್ಥ ಪ್ರಜಾಯುರಾರೋಗ್ಯ ಸಂಪತ್ಸುವೃಷ್ಟಿದ್ವಾರಾ ಸಕಲ ಧನಧಾನ್ಯಾದಿ ಸುಭಿಕ್ಷ್ಯ ಸಿದ್ಧ್ಯರ್ಥಂ - ಶಿವಪ್ರೀತ್ಯರ್ಥಂ ಗುರುಕೃಪಾ ಸಿದ್ಧ್ಯರ್ಥಂ ಚ ಇದಾನೀಂ ಸಫಲಾನ್ವಿತಂ ಚತುರ್ದಿಕ್ಷು ಲಿಂಗಮುದ್ರಾಂಕಿತಂಚ ಭೂದ್ವಯಂ ನಿಧಿನಿಕ್ಷೇಪಾದ್ಯಷ್ಟ ಭೋಗತೇಜ ಸ್ವಾಮ್ಯಸಹಿತಂ ಸಹಿರಣ್ಯೋದಕ ದಾನಧಾರಾಪೂರ್ವಕಂ ಪ್ರದತ್ತಂ ಸನ್ನತ್ರ ಸಾಕ್ಷಿಣಃ ಆದಿತ್ಯಾ ಚಂದ್ರಾವನಿಲೋನಲಶ್ಚ ದೌರ್ಭೂಮಿರಾಪೋ ಹೃದಯಂ ಯಮಶ್ಚ ಅಹಶ್ಚರಾತ್ರೀಚ ಉಭೇಚ ಸಂಧ್ಯೇ ಧರ್ಮಶ್ಚ ಜಾನಾತಿ ನರಸ್ಯ ವೃತ್ತಂ ॥ ೧ ॥ ಸ್ವದತ್ತಾದ್ದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ । ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್ ॥ ೨ ॥ ದಾನಪಾಲನಯೋಮಧ್ಯೇ ದಾನಾಚ್ಛ್ರೇಯೋನುಪಾಲನಂ । ದಾನಾತ್ಸ್ವರ್ಗಮವಾಪ್ನೋತಿ । ಪಾಲನಾದಚ್ಯುತಂ ಪದಂ ॥ ಯಾನಿ ಹತ್ಯಾದಿ ಪಾಪಾನಿ ಕೂಟಸಾಕ್ಷ್ಯಾದಿ ತಾನಿ ಚ । ಸರ್ವಂಭೂಮೇಃ ಪ್ರದಾನೇನ ನರಸ್ತರತಿ ಸರ್ವದಾ ॥ ಗುರುದೇವೋ ಮಹಾದೇವೋ ಗುರುದೇವಸ್ಸದಾಶಿವಃ । ಗುರುರ್ದೈವಾತ್ಪರಂನಾಸ್ತಿತಸ್ಮೈಶ್ರೀ ಗುರವೇನಮಃ ॥ ಶ್ರೀಮದ್ದೀಕ್ಷಾ ಗುರು ಚನ್ನವೀರ ಸ್ವಾಮಿ ಚರಣಾರವಿಂದಾರ್ಪಣಮಸ್ತು.

**ಶ್ರೀ ಸದಾಶಿವ**

ಅನುಬಂಧ-೫

## ಪಟ್ಟಶ್ರೀ ರಾಜೋಟಿ ಸ್ವಾಮಿಗಳಿಗೆ
## ಬಸವಪ್ಪನಾಯಕ ಕೊಟ್ಟ
## ಭೂದಾನ ಶಾಸನ

..................................

ಶ್ರೀ ಕೆಳದಿ ಬಸಪ್ಪನಾಯಕರು ಭೂದಾನ ಕೊಟ್ಟ ಸನದು ಪತ್ರವು. ದುರ್ಮತಿ ಸಂವತ್ಸರದ ಮಾಘಬ-೧೦ರಲ್ಲು ಶ್ರೀಮತ್ತು ಕೆಳದಿ ಬಸಪ್ಪನಾಯಕರು ವೀರ ಭದ್ರಯ್ಯಗೆ ಬರೆಸಿ ಕಳುಹಿದ ಕಾರ್ಯ ಕೆಳದಿಪುರದ ವಳಗಣ ಕೆಳದಿಪುರದ ತಾಳವಳ್ಳಿ ಬನದಗದ್ದಿಯಲ್ಲು ನಮ್ಮ ಹಿರಿಯ ಮಾತೃ ಚನ್ನಮಾಜಿಯವರು-ಶಿವಾರ್ಪಿತವಾಗಿ ಕೊಟ್ಟ ಭೂಸ್ವಾಸ್ಥೆಯಲ್ಲದೆ ಈಗ ನಮ್ಮ ಮಾತೃಗಳು ಮಲ್ಲಮ್ಮಾಜಿ ಅಮ್ಮನವರ ಭಕ್ತಿಯಲ್ಲು ಕೆಳದಿಸಂಸ್ಥಾನ ರಾಜಗುರು ಶಿವಲಿಂಗಸ್ವಾಮಿಗಳ ಪುತ್ರರು ಪಟ್ಟದ ರಾಜೋಟಿ ಸ್ವಾಮಿಯವರಿಗೆ ಗುರುಮಠವ ಕಟ್ಟಿಸಿ ಗುರುಸ್ವಾಮಿಯವರ ಪೂಜಾ ವಿನಿಯೋಗದ ಬಗ್ಗೆ ಉತ್ತಾರವ ಕೊಟ್ಟ ಸ್ವಾಸ್ಥೆ ಸ್ಥಳದ ಶೇನುಬಾವ ಬರಕೊಟ್ಟ ಚಪ್ಪೂಪ್ರಮಾಣು ಈ ಸೀಮೆ ಕೆಳದಿ ಊರಗ್ರಾಮ ೧ ಕ್ಕೆ ರೇಖೆಗ ೨೫ ಹ. ೨ ||= ಯಿಪ್ಪತ್ತೈದು ವರಹ ಎರಡು ಹಣ ಮೂಪ್ಪಾಗದ ಸ್ವಾಸ್ಥೆಯನ್ನು ಶಿವಾರ್ಪಿತವಾಗಿ ಕೊಟ್ಟು ಈ ಗ್ರಾಮದ ರೇಖೆಯಲ್ಲು ಬರೆದ ಉತ್ತಾರವನು ಪೂರ್ವಪ್ರಮಾಣು ನಡೆಸಿ ಬಾಹರೀತಿ ಮಾಡಿ ಈ ಭೂಮಿಗೆ ಶಿವಲಿಂಗಮುದ್ರಾ ಶಿಲಾಸ್ಥಾಪಿತವ ಮಾಡಿಸುವಲ್ಲಿಗೆ ಹೂಜೂರಿಂದಾ ಊಳಿಗದ ಮುಳ್ಳನ ಕಳುಹಿಸಿದ್ದೇವೆ. ಚೌಗ್ರಾಮದವರ ಕರೆಸಿಕೊಂಡು ಗಡಿ ತತ್ವಾರ ಬಾರದ ರೀತಿ ಯಿವನ ಮುಂತಿಟ್ಟು ರೇಖೆ ಪ್ರಮಾಣು ಈ ಗ್ರಾಮಕ್ಕೆ ಶಿಲಾಸ್ಥಾಪಿತವ ಮಾಡಿಸಿಕೊಟ್ಟು ಈ ಕಾಗದವ ಶೇನಬಾವರ ಕಡಿತಕ್ಕೆ ಬರಸಿ ತಿರುಗಿ ಈ ಮಠದವರ ವಶಕ್ಕೆ ಕೊಡುವುದಾಗಿ—

ಬಸಪ್ಪ

ಅನುಬಂಧ-೬

## ಏಳೇಳು ಚೆನ್ನಮ್ಮಾಜಿ..........

ಏಳೇಳು ಚನ್ನಮ್ಮಾಜೋ
ಎಷ್ಟೊತ್ತು ಮಲಗೀದೆ
ವಾಲೇ ಬಂದಾವು ಸದರೀಗೆ

ತಾನು ತಾನಂದಾನು ತಂದನಾನು
ತಾನು ತಾನಂದಾನು ತಂದನಾನು

ಗುಡು ಗುಡು ಗುಟ್ಟಾವು
ಗುಡ್ಡಾ ಬೋರಿಟ್ಟಾವು
ಮಗನಾ ಮಲೆನಾಡು ನಡೀಗಾವು ॥

ಏಳೇಳು ಚನ್ನಮ್ಮಾಜೋ....

ಎಷ್ಟೊತ್ತು ಮಲಗೀದೆ ಚೆನ್ನಮ್ಮಾಜೀ ನೀನು
ಓಲೆ ಬಂದಾವೆ ಅಗಸೇಗೆ

ತಾನು ತಾನಂದಾನು ತಂದನಾನು....

ಓಲೆ ಬಂದಾರು ಬರಲೀ
ಕಾಗುದ ಬಂದಾರು ಬರಲೀ
ನಿದ್ರೇ ಹಾರ್‍ಯಾವು ನಮಗೀಗ

ತಾನು ತಾನಂದಾನು ತಂದನಾನು....

ದುರ್ಗದ ಬಯಲಲ್ಲಿ
ಹಗಲೇ ಪಿರಂಗಿ ಹೊಡಿ
ನಗರಾದ ಕಡೆ ಮುಖಮಾಡಿ

ತಾನು ತಾನಂದಾನು ತಂದನಾನು....

ಇದ್ದಾರು ರಾಣ್ಯಾರು
ಹೊದ್ದೀನ ಗಿರಿಯಲ್ಲಿ
ಇಟ್ಟನಿ ಹುಲ್ಲಾ ತುಳಿವುತ್ತಾ

ತಾನು ತಾನಂದಾನು ತಂದನಾನು....

ಕಲ್ಲು ಕುಣುದಾವೆ
ಕಗ್ಗಲ್ಲು ಕುಣುದಾವೆ
ಬಿಲ್ಲು ಕುಣುದಾವೆ ಬಿಸಲೀಗೆ
ಬಿಲ್ಲು ಕುಣುದಾವೆ ಬಿಸಲೀಗೆ ಚೆನ್ನವ್ವಾಜಿ
ಈಟಿ ಕುಣಿದಾವೆ ಇದರಾಗೆ

ತಾನು ತಾನಂದಾನು ತಂದನಾನು ...

ಇದ್ದಾರು ತುರುಕರು ಫಿ। ರಂಗೀಯಾ ಮುಕವಾಡಿ
ಸಿಂಗಾಡಿ ಬಿಲ್ಲು ಹೆಗಲವ್ಯಾಲೆ
ಸಿಂಗಾಡಿ ಬಿಲ್ಲಾ ಹೆಗಲ ವ್ಯಾಲೆ ಇಟ್ಕೊಂಡು
ಇದ್ದಾರು ಗರಡೀಯ ಜಗಳಾಕೆ

ತಾನು ತಾನಂದಾನು ತಂದನಾನು....

ಹುಚ್ಚೀ ಹುಡಿ ಬಂಗೀ ವೊಸ್ತಾಗಿ ಕೊಡೀರಯ್ಯಾ
ಬಿದ್ದಿದ್ದ ಜಗಳಾವ ಗೆಲುಸೂವೆ
ಹೆಂಡರಿದ್ದಾರು ಹಿಂದಾಕೆ ನಿಲ್ಲಿರಯ್ಯಾ
ಹೆಂಡಾರಿಲ್ಲದ ಪುಂಡುಗಾರ
ಹೆಂಡಾರಿಲ್ಲದ ಪುಂಡುಗಾರರೆಲ್ಲಾ
ಲಾಬು ಸೋವಿ (?)
ಮುಂದಿನ ಲಗ್ಗೀಗೆಲ್ಲ ನಿಲ್ಲಬೇಕೂ

ತಾನು ತಾನಂದಾನು ತಂದನಾನು....

---

ದಿನಾಂಕ 20-4-1967 ನೆಯ ಗುರುವಾರ ಕಾಸರವಳ್ಳಿ ಸಾಹುಕಾರ ರಾಮಸ್ವಾಮಿಯವರ ಮನೆಯಲ್ಲಿ ಸಂಗ್ರಹಿಸಿಕೊಂಡ ಗೀತಗಳು. ಇಂದಿಗೂ ಅಡಕೆ ಸುಲಿಯುವಾಗ ಇಂಥಹ ಕೆಳದಿಗೆ ಸಂಬಂಧಿಸಿದ ನೂರಾರು ಜನಪದ ಹಾಡುಗಳನ್ನು ಹಾಡುತ್ತಾರೆಂತಲೂ ಶ್ರೀಯುತರು ತಿಳಿಸಿದರು. ಮಾನ್ಯ ಮಿತ್ರರಾದ ರಾಮಸ್ವಾಮಿಯವರನ್ನೂ ಅವರ ಸೋದರರಾದ ನಾಗರಾಜ ಅವರನ್ನೂ ಅತ್ಯಂತ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ.

ಹಾಡಿದವರು : ಚಿನ್ನ ಮತ್ತು ಶೇಷ (ಹರಿಜನರು)

